


# ಪ್ರಬುದ್ಧ ಕರ್ಣಾಟಕ

ಚಿತ್ರಭಾನು ಸಂವತ್ಸರ] —೯೨— [ದೀಪಾವಳಿಯ ಸಂಚಿಕೆ






ಮೈಸೂರು :

ಮೈಸೂರು ವಿಶ್ವವಿದ್ಯಾನಿಲಯ

೧೯೪೨

ಸಂಪುಟ ೨೪] [ಸಂಚಿಕೆ ೨

# ವಿಷಯಸೂಚಿಕೆ




ಚಿತ್ರಭಾನು ಸಂವತ್ಸರ — ೯೨ — ದೀಪಾವಳಿಯ ಸಂಚಿಕೆ

# ಶಿಲಾಭೇರಿ

ಕೂಗುತಿವೆ ಕಲ್ಲು :
ಕಿವಿವೆತ್ತ ಕಿವುಡರಿರ, ಕೇಳಿ ಆ ಸೊಲ್ಲು !
ನಮ್ಮ ನಾಡಿನ ಮೂಲೆಮೂಲೆಯ ವೀರಗಲ್ಲು,
ಮಾಸತಿಯ ಮೃದು ಕಠೋರದ ಚಾಗ ಸೊಲ್ಲು !

ಸತ್ತವರು ನಾವಲ್ಲ ನೀವೆಂದು ಸಾರುತಿವೆ.
ಆಳಾಳ್ಗೆ ಕೈದೋರಿ ಮೌಸಗಳೆ ದೂರುತಿವೆ :
"ನಮ್ಮಂದಿನಾ ಕೆಚ್ಚು
ನಮ್ಮಂದಿನಾ ನೆಚ್ಚು
ನಿಮ್ಮೊಳಿಂದುದ್ಭವಿಸಲಾ ದಿವ್ಯ ಹುಚ್ಚು !"
ಎಂದಣಕಿ ಚೀರುತಿವೆ ;
ಹರಸಿ ಹಾರುತಿವೆ.

ಪಾಳು ದೇಗುಲದಲ್ಲಿ, ಲಂಟಾನ ಪೊದೆಯಲ್ಲಿ,
ಕಲ್ಲುರುಳಿ ಮುರಿದರಳಿಕಟ್ಟೆ ಹಳು ಬೆಳೆದಲ್ಲಿ,
ಇಲ್ಲಿ ಏನಿಲ್ಲವೆಂದು
ಇಲ್ಲಿ ಯಾರಿಲ್ಲವೆಂದು
ಸಾಗುತಿರಲನಿರೀಕ್ಷಿತಂ ಪ್ರೇತವೊಂದು
ಕೂಗುವುದು ಹಾದಿ ಬದಿಯ
ಕದಡಿ ನೆಮ್ಮದಿಯ!

"ಕೇಳಿಲ್ಲಿ ಮಡಿದೆನಾಂ ಜೀವವನೆ ತೃಣಮಾಡಿ
ಹೆಣ್ತನದ ಮಾನ ರಕ್ಷಣೆಗಾಗಿ ಕಾದಾಡಿ!"
"ಇಲ್ಲಿ ನಾಂ ಬಲಿಯಾದೆ,
ಹೆಬ್ಬುಲಿಯೊಡನೆ ಕಾದೆ;
ತಬ್ಬಲಿತನವ ತಡೆದು ಕರುಗೆ ತಾಯ್ವೋದೆ!"
"ಹಗೆಯಿರಿಯುತಿಲ್ಲಿ ಬಿದ್ದೆ;
ಮಿತ್ತುವನು ಗೆದ್ದೆ!"

ಇಲ್ಲಿ ದೇವರಿಗಾಗಿ, ಅಲ್ಲಿ ಹದಿಬದೆಗಾಗಿ,
ಇಲ್ಲಿ ಒಡೆಯನಿಗೊಡಲನಲ್ಲಿ ನಾಡಿಂಗಾಗಿ,
ಎಲ್ಲಿ ಕಣ್ಣಿಡಲಲ್ಲಿ,
ಎಲ್ಲಿ ಕಿವಿಯಿಡಲಲ್ಲಿ,
ಬಲಿದಾನ ಗೈದ ಕನ್ನಡತನದ ತುತ್ತೂರಿ
ಭೋರಿಡುತ್ತಿದೆ ಶಿಲಾಭೇರಿ,
ಪ್ರಾಣ ಸಂಚಾರಿ!

ಕೆ. ವಿ. ಪುಟ್ಟಪ್ಪ.

---

# ‘ಶಾಕುಂತಲ’ವನ್ನು ಕುರಿತು*

ವಿಶ್ವಕವಿಗಳ ವಿರಳಪಂಕ್ತಿಯಲ್ಲಿ ಕಾಳಿದಾಸನಿಗೆ ಭದ್ರವಾದ ಸ್ಥಾನವನ್ನು ಗಳಿಸಿಕೊಟ್ಟಿರುವ ಕೃತಿ ‘ಅಭಿಜ್ಞಾನ ಶಾಕುಂತಲ’. “ಕಾವ್ಯೇಷು ನಾಟಕಂ ರಮ್ಯಂ ತತ್ರ ರಮ್ಯಾ ಶಕುಂತಲಾ”—ಎಂದು ಹೇಳಿ ಭರತಖಂಡದ ಪಂಡಿತರು ಸಂಸ್ಕೃತ ಸಾಹಿತ್ಯದಲ್ಲಿ ಶಾಕುಂತಲ ನಾಟಕಕ್ಕೆ ಅಗ್ರಪಟ್ಟವನ್ನು ಕಟ್ಟಿದರು. ಪಾಶ್ಚಾತ್ಯರಲ್ಲಿ ಗಯಟೆಯಂಥ ಮಹಾಕವಿ ಮರ್ತ್ಯಸ್ವರ್ಗಗಳ ಸಾರಸಮ್ಮಿಳನವನ್ನೇ ಶಾಕುಂತಲವೆಂಬ ಒಂದು ಹೆಸರಿನಲ್ಲಿ ಕಂಡನು. ಎಷ್ಟೋ ಉತ್ತಮ ಕೃತಿಗಳನ್ನು ಕೂಡ ಒಂದು ಬಾರಿ ಸವಿನೋಡಿದ ಮೇಲೆ ಮತ್ತೆ ಕೈಗೆ ತೆಗೆದುಕೊಳ್ಳಲು ಬೇಗ ಮನಸ್ಸು ಬರುವುದಿಲ್ಲ. ಆದರೆ ಶಾಕುಂತಲವನ್ನು ಓದಿದಷ್ಟೂ ಅದರ ಸವಿ ಹೆಚ್ಚುತ್ತದೆ; ನಮ್ಮ ಅನುಭವ ಆಳವಾದ ಹಾಗೆಲ್ಲ ಅದರ ಅರ್ಥವೂ ಅಭಿನವವಾಗುತ್ತದೆ. ತರುಣರಿಗೆ, ಪರಿಣತರಿಗೆ—ಎಲ್ಲರಿಗೂ ಇದರಲ್ಲಿ ಆಹ್ಲಾದವುಂಟು, ಆತ್ಮಸಂಸ್ಕಾರವುಂಟು. ಇಂಥ ಮಹಾಕೃತಿಯ ಸ್ವಾರಸ್ಯ ಮಹತ್ತ್ವಗಳನ್ನು ಸುಮಾರು ಹತ್ತು ನಿಮಿಷಕಾಲದ ಹರಟೆಯಲ್ಲಿ ನಿರೂಪಿಸುವುದು ಹೇಗೆ ಸಾಧ್ಯ! ಕಡಲನ್ನು ಕಡೆಯುವ ಸಾಹಸಕ್ಕೆ ಇಲ್ಲಿ ನಾನು ಕೈಹಾಕುವುದಿಲ್ಲ. ಶಾಕುಂತಲವು ಶಕುಂತಲಾ ದುಷ್ಯಂತರ ಪ್ರೇಮಕಥೆ; ಈ ಎರಡು ಪಾತ್ರಗಳ ವಿಷಯದಲ್ಲಿ, ಅದರಲ್ಲೂ ಮುಖ್ಯವಾಗಿ ಶಕುಂತಲೆಯ ವಿಷಯದಲ್ಲಿ, ಗಮನಾರ್ಹವೆಂದು ತೋರಿದ ಕೆಲವು ಅಂಶಗಳನ್ನು ಪ್ರಸ್ತಾವಿಸುವುದಷ್ಟೇ ನನ್ನ ಉದ್ದೇಶ.

ಕಾಳಿದಾಸನು ತನ್ನ ಮಿಕ್ಕ ನಾಟಕಗಳಲ್ಲಿ ಮಾಳವಿಕೆ, ಉರ್ವಶಿ, ಧಾರಿಣಿ, ಇರಾವತಿ ಮೊದಲಾದ ಅನೇಕ ಮಂದಿ ನಾಯಿಕೆ ಉಪನಾಯಿಕೆಯರನ್ನು ನಿರ್ಮಿಸಿದ್ದಾನೆ. ಆದರೆ ಈ ಉಳಿದವರ ಬಗೆಯೇ ಬೇರೆ, ಶಕುಂತಲೆಯ ಬಗೆಯೇ ಬೇರೆ. “ಸ್ತ್ರೀರತ್ನಸೃಷ್ಟಿರಪರಾ ಪ್ರತಿಭಾತಿ ಸಾ ಮೇ” (“ಬೇರೆ ತೋರ್ಕುಮೆನಗೀ ಸ್ತ್ರೀರತ್ನಸೃಷ್ಟಿಕ್ರಮಂ”)! ಪಟ್ಟಣದ ಚದುರೆಯರ, ಅರಮನೆಯ ವಿಲಾಸಿನಿಯರ ಬೆಡಗುಬಿನ್ನಾಣಗಳನ್ನು ಕಾಳಿದಾಸನು ಜೀವನದಲ್ಲಿ ಕಂಡು, ನಾಟಕಗಳಲ್ಲಿ ಚಿತ್ರಿಸಿ,

---

* ಮೈಸೂರಿನ ‘ಆಕಾಶವಾಣಿ’ಯವರು ತಾ|| ೧೦-೯-೧೯೪೩ ರಲ್ಲಿ ಏರ್ಪಡಿಸಿದ್ದ ಕಾಳಿದಾಸೋತ್ಸವದಲ್ಲಿ ಮಾಡಿದ ಭಾಷಣ; ಅಲ್ಲಲ್ಲಿ ಪರಿಷ್ಕರಿಸಿ, ಎರಡು ಮೂರು ಕಡೆ ಸ್ವಲ್ಪ ವಿಸ್ತರಿಸಿ ಇಲ್ಲಿ ಅಚ್ಚು ಮಾಡಿದೆ.

ದಣಿದು ಈ ತಪೋವನದ ಮುಗ್ಧತೆಯನ್ನು ನಿರ್ಮಿಸಿದಂತೆ ತೋರುತ್ತದೆ. "ದೂರೀ ಕೃತಾಃ ಖಲು ಗುಣೈರುದ್ಯಾನಲತಾ ವನಲತಾಭಿಃ" (ದೂರಕಿಕ್ಕಿದುವೈಸೆ ಗುಣದಲಿ ವನಲತೆಗಳುದ್ಯಾನಲತೆಗಳನು)!

ಒಬ್ಬ ರಾಜರ್ಷಿ ಅಪ್ಸರೆಯೊಬ್ಬಳ ಸೊಬಗಿಗೆ ಮರುಳಾಗಿ ವ್ರತಭ್ರಷ್ಟನಾದದ್ದರ ಫಲವಾಗಿ ಶಕುಂತಲೆ ಜನಿಸಿದ್ದು ನಿಜ. ಆದರೆ ಚಾಂಚಲ್ಯದ ಸೋಂಕು ಅವಳಿಗೆ ಅಷ್ಟಕ್ಕೇ ಮುಗಿಯಿತು. ಹುಟ್ಟಿದ ಕೂಡಲೆ ಹೆತ್ತವರು ತೊರೆದರು; ಅವಳು ಕಣ್ವರ ಸಾಕುಮಗಳಾಗಿ ಪ್ರಕೃತಿಯ ಮಡಿಲಿನಲ್ಲಿ ಬೆಳೆದಳು. ಆಶ್ರಮದ ಶಾಂತಸರಳ ಜೀವನದೊಂದಿಗೆ ಅವಳ ಬಾಳು ಬೆರೆಯಿತು, ಅದರೊಂದಿಗೆ ಸಮರಸವಾಗಿ ಹರಿಯಿತು. ಋಷಿಕನ್ಯೆಯರಾದ ಅನಸೂಯೆ ಪ್ರಿಯಂವದೆಯರು ಅವಳ ಜೀವದ ಗೆಳತಿಯರು; ತನ್ನಂತೆಯೇ ತಾಯಿಯ ಆರೈಕೆಯನ್ನು ಅರಿಯದ ದೀರ್ಘಾಪಾಂಗವೆಂಬ ಜಿಂಕೆಯ ಮರಿ ಅವಳ ಮುದ್ದಿನ ಕಂದ; ತಾನು ನೀರೆರೆದು ಬೆಳಸಿದ ವನಜ್ಯೋತ್ಸ್ನೆಯೆಂಬ ಲತೆ ಅವಳ ತಂಗಿ. ಕಣ್ವರ ಆಶ್ರಮದಲ್ಲಿ ಶಕುಂತಲೆಯೂ ಒಂದು ಜಂಗಮಲತೆ.

ಈ ನಡೆದಾಡುವ ಬಳ್ಳಿಯಲ್ಲಿ ಯೌವನಕುಸುಮವು ಅರಳಿದ ವೇಳೆಗೆ, ದುಷ್ಯಂತ ಮಹಾರಾಜನು ಬೇಟೆಯ ನಿಮಿತ್ತದಿಂದ ಇತ್ತ ಬಂದನು. ತುಂಬಿಯಂತೆ ಈ ಹೂವಿಗೆ ಮನಸೋತನು. ಕಾಡಾನೆಯಂತೆ ಶಕುಂತಲೆಯ ಹೃದಯವನ್ನು ಹೊಕ್ಕು ಅಲ್ಲಿಯ ಶಾಂತಿಯನ್ನು ಕದಡಿ "ತಪೋವನವಿರೋಧಿಯಾದ ವಿಕಾರ"ವನ್ನು ಉಂಟು ಮಾಡಿದನು. ಹೀಗೆ ಇಬ್ಬರಲ್ಲೂ ಹಬ್ಬಿದ ಅನುರಾಗವು ಹೇಗೆ ಪರಿಣಮಿಸಿತೆಂಬುದೇ ಶಾಕುಂತಲ ನಾಟಕದ ವಸ್ತು.

ಶಕುಂತಲೆಯಲ್ಲಿ ಭಾವ ತೀವ್ರ; ಮಾತು ಮಿತ. ಇಷ್ಟು ಕೊಂಚ ಮಾತಾಡುವ, ಆದರೂ ಸ್ವಭಾವದ ಸೌರಭದಿಂದ ನಾಟಕವನ್ನೆಲ್ಲಾ ತುಂಬುವ, ನಾಯಿಕೆಯರು ಕಾವ್ಯಪ್ರಪಂಚದಲ್ಲಿ ಹಲವರಿಲ್ಲ. ಹೆಣ್ಣಿನಲ್ಲಿ ಮಾತು ಅಲ್ಪವಾದರೇ ಸೊಗಸು ಹೆಚ್ಚೆಂದು ಬಲ್ಲವರ ಹೇಳಿಕೆ. ಅಂತೂ, ತನ್ನ ಸಖಿಯರು ಹಾಸ್ಯಮಾಡಿದಾಗ ಶಕುಂತಲೆ ಕೋಪಿಸಿಕೊಳ್ಳಬಲ್ಲಳೇ ಹೊರತು ಪ್ರತ್ಯುತ್ತರ ಕೊಡಲಾರಳು. ಪುಷ್ಪರಾಶಿಯಲ್ಲಿ ಬಿದ್ದ ಕೆಂಡದಂತೆ ಪ್ರೇಮವು ತನ್ನ ಹೃದಯವನ್ನು ದಹಿಸಿ ಶರೀರವನ್ನು ಶೋಷಿಸುತ್ತಿದ್ದರೂ, ಅವಳು ತನ್ನ ಅಂತರಂಗದ ಗುಟ್ಟನ್ನು ಪ್ರಾಣಸಖಿಯರಿಗೆ ಕೂಡ ಬಾಯಿಬಿಟ್ಟು ಹೇಳಲಾರಳು. ಮುಂದೆ ಸಖಿಯರ ಸಹಾಯದಿಂದ ತನ್ನ ನಲ್ಲನೊಡನೆ ಏಕಾಂತದಲ್ಲಿರುವಾಗಲೂ ಚಾತುರ್ಯದ ಮಾತೆರಡನ್ನು ಆಡಲಾರಳು. ಚತುರೋಕ್ತಿ ಎಲ್ಲಿ ಬಂತು!—ಪ್ರೇಮದ ಉದ್ರೇಕದಲ್ಲಿ ಪ್ರಿಯನು ಎಲ್ಲಿ ಮರ್ಯಾದೆಯನ್ನು ಮೀರುವನೋ ಎಂಬ ಆತಂಕ ಅವಳಿಗೆ. "ಪೌರವ, ವಿನಯವನ್ನು

ಕಾಪಾಡಿಕೊ. ಮದನನ ಬಾಧೆಗೆ ಒಳಗಾಗಿದ್ದರೂ ನಾನು ಸ್ವತಂತ್ರಳಲ್ಲ" ಎಂದು ಅವನನ್ನು ತಡೆಯುವಳು. ಗಾಂಧರ್ವವಿವಾಹವು ಧರ್ಮಸಮ್ಮತವೆಂದು ಅವನು ಸ್ಥಾಪಿಸಿದರೂ ಅವಳ ಮನಸ್ಸಿನ ಶಂಕೆ ಶಮನವಾಗದು. ಪ್ರಾಣಪ್ರಿಯನನ್ನು ಕೂಡುವುದಕ್ಕೆ ಅವಳ ಸಂಕೋಚದ ಸ್ವಭಾವವೇ ಎಲ್ಲಕ್ಕೂ ಹೆಚ್ಚಿನ ಅಡ್ಡಿ. ಆದರೆ ಉದ್ದಾಮ ಪ್ರೇಮವನ್ನು ಎಷ್ಟು ಕಾಲ ತಡೆಗಟ್ಟಲಾದೀತು? ಇಬ್ಬರ ಹಂಬಲಿಕೆಯೂ ಫಲಿಸಿತು. ದುಷ್ಯಂತ ಶಕುಂತಲೆಯರು ದಂಪತಿಗಳಾದರು.

ಹಲವು ಪ್ರೇಮಕಥೆಗಳು ಮದುವೆಯಲ್ಲಿ ಮುಕ್ತಾಯಹೊಂದುತ್ತವೆ. ಮುಂದೆ ಎಂದೆಂದಿಗೂ ನಲ್ಲನಲ್ಲೆಯರು ಸುಖವಾಗಿದ್ದುಬಿಡುತ್ತಾರೆಂದೇ ಸಾಮಾನ್ಯ ಭಾವನೆ. ಆದರೆ ಜೀವನದಲ್ಲಿ ಎಷ್ಟೋ ವೇಳೆ ಆ ಬಳಿಕವೇ ಕಥೆ ಬೆಳೆಯುವುದು, ನೋವು ನಲವು ಬಲಿಯುವುದು. ತಾರುಣ್ಯದ ಅನುರಾಗವು ವಿರಹದ ಪೆಟ್ಟಿಗೆ ಸಿಕ್ಕಿ, ಕ್ಲೇಶ ಪರಿತಾಪಗಳ ಕುಲುಮೆಯಲ್ಲಿ ಕರಗಿ ಪುಟಹೊಂದಿ, ಅಂತಃಸತ್ತ್ವವಿದ್ದ ಪಕ್ಷದಲ್ಲಿ ಕೊನೆಗೆ ಅಪರಂಜಿಯಾಗುತ್ತದೆ. ಶಾಕುಂತಲನಾಟಕದ ಉತ್ತರಭಾಗದಲ್ಲಿ ಈ ಕಥೆ ಅನ್ಯಾದೃಶವಾಗಿ ರೂಪುಗೊಂಡಿದೆ.

ಶಕುಂತಲೆಯನ್ನು ಅವಳ ನಲ್ಲನು ಬೀಳ್ಕೊಂಡ ದಿವಸವೇ, ಅವನ ಚಿಂತೆಯಲ್ಲಿ ಮುಳುಗಿ ಅವಳು ವಿಶ್ವವನ್ನೇ ಮರೆತಿದ್ದ ಘಳಿಗೆಯಲ್ಲಿಯೇ, ಕಣ್ವಾಶ್ರಮಕ್ಕೆ ಅತಿಥಿಯಾಗಿ ಮುನಿಸಿನ ಮೂರ್ತಿಯಾದ ದುರ್ವಾಸನು ಬರಬೇಕೆ! ತನ್ನ ಕೂಗಿಗೆ ಶಕುಂತಲೆ ಉತ್ತರಕೊಡಲಿಲ್ಲವೆಂಬ ಕ್ಷುದ್ರಕಾರಣವನ್ನೇ ಈ ಮುನಿ ದೊಡ್ಡದು ಮಾಡಿಕೊಂಡು, ಅವಳನ್ನು ದುಷ್ಯಂತನು ಸಂಪೂರ್ಣವಾಗಿ ಮರೆತುಬಿಡುವಂತೆ ಶಾಪಕೊಡಬೇಕೆ! ಶಕುಂತಲೆಯ ಕಿವಿಗೆ ಬೀಳದ ಅವನ ಗರ್ಜನೆ ಅವಳ ಸಖಿಯರ ಎದೆಯನ್ನು ತಲ್ಲಣಗೊಳಿಸಿತು. ಪ್ರಿಯಂವದೆ ಅನುನಯದ ನವಿನುಡಿಗಳನ್ನಾಡಿ, ಶಾಪಕ್ಕೆ ಪರಿಹಾರವೊಂದನ್ನು ಋಷಿಯ ಬಾಯಿಂದ ಹೇಳಿಸಿದಳು. ಆದರೆ ಶಕುಂತಲೆಗೆ ದುಃಖ ತಟ್ಟುವುದೇನೂ ತಪ್ಪಲಿಲ್ಲ. "ನವಮಾಲಿಕಾಲತೆಗೆ ಬಿಸಿನೀರನ್ನು ಯಾರುತಾನೆ ಎರೆದಾರು!" ಎಂದುಕೊಂಡು, ಶಾಪದ ವಿಷಯವನ್ನು ಅವಳಿಗೆ ಹೇಳಲು ಸಖಿಯರು ಹಿಂಜರಿದದ್ದರಿಂದ ಪರಿಸ್ಥಿತಿ ಕಠಿನತರವಾಯಿತು. ಅಂತೂ, ಶಕುಂತಲೆಯನ್ನು ಅಗಲಿದಾಗ ಅವಳ ಬೆರಳಿಗೆ ತನ್ನ ಮುದ್ರೆಯುಂಗುರವಿಟ್ಟು, ಅದರಲ್ಲಿ ಕೆತ್ತಿದ್ದ ತನ್ನ ಹೆಸರಿನ ಅಕ್ಷರಗಳನ್ನು ಅವಳು ದಿನಕ್ಕೆ ಒಂದೊಂದರಂತೆ ಎಣಿಸಿ ಮುಗಿಸುವುದರೊಳಗೆ ಅವಳನ್ನು ರಾಜಧಾನಿಗೆ ಕರೆದುಕೊಂಡು ಹೋಗಲು ಪರಿಜನರು ಬರುವರೆಂದು ಮಾತುಕೊಟ್ಟು, ತೆರಳಿದ ದುಷ್ಯಂತನ ನೆನಪಿಗೆ ಊರಿನ ದಾರಿಯಲ್ಲೇ ಕತ್ತಲೆ ಕವಿಯಿತು. ಶಕುಂತಲೆಯ ಸುಖದ ಬಳ್ಳಿ ಅವಳ ಅರಿವಿಲ್ಲದೆಯೇ ಅಲ್ಲಿಗೇ ಮುರುಟಿತು.

ದುರ್ವಾಸನ ಶಾಪದ ಭೀಷಣ ಪರಿಣಾಮವನ್ನು ಕಾಳಿದಾಸನು ಒಡನೆಯೇ ವ್ಯಕ್ತಗೊಳಿಸುವುದಿಲ್ಲ. ಅದಕ್ಕೆ ಮೊದಲು, ನಾಲ್ಕನೆಯ ಅಂಕದಲ್ಲಿ ಒಂದು ಸುಕುಮಾರ ಸಂದರ್ಭವನ್ನು ಚಿತ್ರಿಸಿ ಶಿರೀಷಕೋಮಲೆಯಾದ ಶಕುಂತಲೆಯ ವಿಷಯದಲ್ಲಿ ನಮ್ಮ ಸ್ನೇಹ ಕನಿಕರಗಳನ್ನು ಇನ್ನಷ್ಟು ದೃಢಪಡಿಸುತ್ತಾನೆ. ಕಣ್ವಮಹರ್ಷಿಗಳು ಗರ್ಭಿಣಿಯಾದ ತಮ್ಮ ಸಾಕುಮಗಳನ್ನು ಗಂಡನ ಮನೆಗೆ ಕಳುಹಿಸಿಕೊಡುವ ದೃಶ್ಯ ಅದು. ಶಕುಂತಲೆಗೆ ಅತ್ತ ಪತಿಯನ್ನು ಸೇರಬೇಕೆಂಬ ತವಕ; ಇತ್ತ ತಂದೆಯನ್ನು, ಗೆಳತಿಯರನ್ನು, ಒಡನಾಡಿಗಳನ್ನು, ತಪೋವನವನ್ನು ಬಿಟ್ಟು ಹೋಗಲಾರದ ಕಳವಳ. ಅವಳನ್ನು ಬೀಳ್ಕೊಡುವಾಗ ಇವರಿಗೂ ತೀವ್ರ ವೇದನೆ. ಈ ಅಗಲಿಕೆಯ ಚಿತ್ರವು ನೋಟಕರ ಕರುಳನ್ನು ಹಿಂಡುತ್ತದೆ. ಆದಕಾರಣವೇ "ಕಾವ್ಯೇಷು ನಾಟಕಂ ರಮ್ಯಂ ತತ್ರ ರಮ್ಯಾ ಶಕುಂತಲಾ" ಎಂಬುದಕ್ಕೆ ಉತ್ತರಭಾಗವಾಗಿ, "ತತ್ರಾಪಿ ಚ ಚತುರ್ಥೋಽಂಕಃ ತತ್ರ ಶ್ಲೋಕಚತುಷ್ಟಯಂ!" ಎಂಬ ಶ್ಲಾಘನೆ ಹುಟ್ಟಿತು. ಈ ಶ್ಲೋಕಚತುಷ್ಟಯದಲ್ಲಿ ಒಂದನ್ನಾದರೂ ಉದಾಹರಿಸಿದಲ್ಲದೆ ಮನಸ್ಸು ನಿಲ್ಲದು. ಕಣ್ವರು ತಪೋವನದ ತರುಗಳಿಗೆ ಹೇಳುವ ಮಾತು ಇದು:

"ಜಲವನದಾವಳೀಂಟಲೆರೆದಲ್ಲದೆ ನಿಮ್ಮಯ ಪಾತೆಗಂಬುವಂ
ತಳಿರ್ಗಳ ಕೊಯ್ಯಳಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ |
ಅಲರ್ಗಳ ತಾಳೆ ನೀವು ಮೊದಲುತ್ಸವವಾಂತಪಳಾವಳಾ ಶಕುಂ-
ತಳೆ ಪತಿಸದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ ||"

(ಬಸವಪ್ಪಶಾಸ್ತ್ರಿಗಳ ಅನುವಾದ)

ಶಕುಂತಲೆಯ ಹೃದಯ ಎಷ್ಟು ಮೃದು, ಆಶ್ರಮದ ಮರಬಳ್ಳಿಗಳಲ್ಲಿ ಅವಳಿಗಿದ್ದ ಸೋದರಸ್ನೇಹ ಎಷ್ಟು ಸಹಜ ಎಂಬುದಕ್ಕೆ ಇದಕ್ಕಿಂತ ನಿದರ್ಶನ ಬೇಕೆ!

ಎಂಥ ಮೋಹದ ಮಗಳಾದರೂ ತೌರುಮನೆಯನ್ನು ಒಂದು ದಿನ ಬಿಡಲೇಬೇಕು. ಇದು ಸಂಸಾರದ ಸಾಮಾನ್ಯನಿಯಮ. ಹೆಣ್ಣು ಹೆರರೊಡವೆಯೆಂದು ಕಣ್ವರಂತೆ ನಾವೂ ಸಮಾಧಾನ ತಂದುಕೊಳ್ಳುತ್ತೇವೆ. ಪತಿಗೃಹದಲ್ಲಿ ಅವಳಿಗೆ ಎಲ್ಲ ಮಂಗಳಗಳೂ ಒದಗಲೆಂದು ಹಾರೈಸುತ್ತೇವೆ. ಅಯ್ಯೋ, ಶಕುಂತಲೆಗೆ ಆ ಭಾಗ್ಯ ಸದ್ಯಕ್ಕೆ ಎಲ್ಲಿಂದ ಬರಬೇಕು? ನಾಲ್ಕನೆಯ ಅಂಕವು ವೀಣೆಯ ಮಂಜುಳಸ್ವನದಂತೆ ನಮ್ಮನ್ನು ಮರುಳುಗೊಳಿಸಿ, ದುರ್ವಾಸನ ಶಾಪದ ವಿಷಯವನ್ನು ನಮ್ಮ ಸ್ಮೃತಿಯಿಂದ ಒಂದು ಘಳಿಗೆಯ ಕಾಲ ಜಾರಿಸಿಬಿಟ್ಟಿತ್ತು. ಆದರೆ ಋಷಿಯ ಬಿರುನುಡಿ ವಿಫಲವಾಗುವುದುಂಟೆ! ಹಿಂದಿನ ಅಂಕದಲ್ಲಿ ಸ್ನೇಹಾರ್ದ್ರವಾಗಿದ್ದ ಹೃದಯವನ್ನು ಈಗ ನಾವು ಕಲ್ಲುಮಾಡಿಕೊಂಡು ಶಕುಂತಲೆಯ ದುರ್ದೈವದ ಪರಮಾವಧಿಯನ್ನು

ಇನ್ನು ಐದನೆಯ ಅಂಕದಲ್ಲಿ ನೋಡಲು ಸಜ್ಜಾಗಬೇಕು. ಎರಡು ಕಡೆಗಳಲ್ಲೂ ಕರುಣವೇ ರಸ; ಆದರೆ ಒಂದರ ಮಾರ್ದವಕ್ಕೂ ಮತ್ತೊಂದರ ಭೀಷಣತೆಗೂ ಎಂಥ ಅಂತರ! ನಾಲ್ಕನೆಯ ಅಂಕವಾದ ಕೂಡಲೆ ಬರುವುದರಿಂದ ಐದನೆಯ ಅಂಕದ ಪರಿಣಾಮ ಇಷ್ಟಿಷ್ಟು ತೀವ್ರವಾಗುತ್ತದೆ. ಕಥೆಯ ಕೇಂದ್ರದೃಶ್ಯವೇ ಇದು; ನಾಟಕೀಯ ಸ್ವಾರಸ್ಯ ಇಲ್ಲಿ ಶಿಖರವನ್ನು ಮುಟ್ಟುತ್ತದೆ. ಅದರ ವಿಚಾರವನ್ನು ಇಲ್ಲಿ ಲಂಬಿಸಲು ಅವಕಾಶವಿಲ್ಲದಿದ್ದರೂ ಒಂದು ಸಂಗತಿಯ ಕಡೆಗೆ ಗಮನವನ್ನೆಳೆಯಲೇ ಬೇಕು. ಶಕುಂತಲೆ ಗಂಡನ ಮನೆಗೆ ಎಷ್ಟೊಂದು ತವಕದಿಂದ, ಆಸೆಯಿಂದ ಬಂದಳು! ತನ್ನ ಹೃದಯೇಶ್ವರನ ಪ್ರಾಣವಲ್ಲಭೆಯಾಗಿ, ಪಟ್ಟದ ರಾಣಿಯಾಗಿ ಸುಖವನ್ನು ಕಾಣುವೆನೆಂದು ನಂಬಿದ್ದಳು. ಆದರೆ ದುಷ್ಯಂತನಿಗೆ ಅವಳನ್ನು ಮದುವೆಯಾಗಿದ್ದ ವಿಷಯದಲ್ಲೇ ಸಂದೇಹ; ಬಹುದೂರಕ್ಕೆ ಏರಿದ್ದ ಅವಳ ಆಸೆ ಇನ್ನೆಲ್ಲಿ! ರಾಣಿಯಾಗಿ ಬಾಳುವುದಿರಲಿ; ತಾನು ಸ್ವಚ್ಛಂದಚಾರಿಣಿಯಲ್ಲವೆಂದು ನಾಲ್ಕು ಜನರ ಮುಂದೆ ನಿಂತು ರುಜುವಾತು ಮಾಡಿಕೊಡಬೇಕಾದ ಪ್ರಸಂಗವೊದಗಿತು. ತನ್ನನ್ನು ಪರಸ್ತ್ರೀಯೆಂದು ಅವನು ತಿಳಿದದ್ದರಿಂದ "ಆರ್ಯಪುತ್ರ" ಎಂದು ಸಂಬೋಧಿಸಲು ಕೂಡ ಅವಳಿಗೆ ಅಧಿಕಾರವಿಲ್ಲವಾಯಿತು. ಆಶ್ರಮದಿಂದ ಹೊರಟ ವೇಳೆಯಲ್ಲಿ ತನಗೆ ಸಖಿಯರು ಕೊಟ್ಟಿದ್ದ ಸೂಚನೆ ಸ್ಮರಣೆಗೆ ಬಂದು, ಗುರುತಿನ ಉಂಗುರವನ್ನು ತೋರಿಸುವೆನೆಂದು ಶಕುಂತಲೆ ಬೆರಳನ್ನು ನೋಡಿಕೊಳ್ಳುತ್ತಾಳೆ. ಆ ದುರದೃಷ್ಟದ ಉಂಗುರ ಯಾವಾಗಲೋ ಮಾಯವಾಗಿದೆ. "ಮತ್ತೊಂದು ಗುರುತನ್ನು ಹೇಳುವೆ"ನೆನ್ನುತ್ತಾಳೆ. ನೋಡತಕ್ಕದ್ದು ಆಯಿತು; ಇನ್ನು ಕೇಳತಕ್ಕದ್ದು ಬಂದಿತು!—ಎಂದು ದುಷ್ಯಂತನ ಭಾವನೆ. ಕೈಹಿಡಿದ ಗಂಡನು ಹೀಗೆ ನಂಬಿಕೆ ಸಾಲದ ನ್ಯಾಯಾಧೀಶನಂತೆ ವಿಚಾರಣೆ ಮಾಡುತ್ತಾ ಕುಳಿತಿದ್ದಾನೆ. ಆದರೂ ಶಕುಂತಲೆ ಧೈರ್ಯಗುಂದದೆ ತನ್ನ ಹೇಳಿಕೆಯನ್ನು ಮುಂದುವರಿಸಲೇಬೇಕಾಗಿದೆ. ತಮ್ಮಿಬ್ಬರಿಗೆ ಮಾತ್ರವೇ ಗೊತ್ತಿದ್ದ ಒಂದು ಸಂಗತಿಯನ್ನು ಅವಳು ಈಗ ಜ್ಞಾಪಿಸುತ್ತಾಳೆ:

> "ಒಂದು ದಿನ ನವಮಾಲಿಕಾಮಂಟಪದಲ್ಲಿ ಕುಳಿತಿದ್ದಾಗ ನೀರು ತುಂಬಿದ ತಾವರೆಯೆಲೆಯ ದೊನ್ನೆ ನಿನ್ನ ಕೈಯಲ್ಲಿರಲಿಲ್ಲವೆ? . . . ಆಗ ನನ್ನ ಸಾಕುಮಗುವಾದ ದೀರ್ಘಾಪಾಂಗವೆಂಬ ಜಿಂಕೆಯಮರಿ ಸನಿಹಪಕ್ಕೆ ಬಂದಿತು. ಮೊದಲು ಇದು ನೀರು ಕುಡಿಯಲಿ ಎಂದು ನೀನು ಕನಿಕರದಿಂದ ಅದಕ್ಕೆ ನೀರು ತೋರಿಸಿದೆ. ಆದರೆ ನಿನ್ನ ಬಳಕೆಯಿಲ್ಲದ್ದರಿಂದ ಅದು ನಿನ್ನ ಕೈಯ ಬಳಿಗೆ ಬರಲಿಲ್ಲ. ಬಳಿಕ ಅದೇ ದೊನ್ನೆಯನ್ನು ನಾನು ಹಿಡಿದುಕೊಂಡಾಗ ಅದು ನೀರನ್ನು ಬಯಸಿತು. ಆಗ, 'ಎಲ್ಲರಿಗೂ ತಮ್ಮ ತಮ್ಮ ಜನದಲ್ಲೇ ನಂಬಿಕೆ; ನೀವಿಬ್ಬರೂ ಕಾಡುಪ್ರಾಣಿಗಳು'—ಎಂದು ನೀನು ಹಾಸ್ಯಮಾಡಿದೆ."

ಎಂಥ ಪ್ರಸಂಗ! ಪ್ರಿಯನ ಪರಿಹಾಸಕ್ಕೆ ಈ ಮುಗ್ಧೆ ಯಾವ ಉತ್ತರವನ್ನೂ ಕೊಡದೆ, ಅದರ ಸೊಗಸನ್ನು ಮೌನವಾಗಿ ಸವಿದಿದ್ದಳು. ಅವನ ಪ್ರೇಮದ ಫಲವನ್ನು ತನ್ನ ಬಸಿರಿನಲ್ಲಿ ತಳೆದು ಪೋಷಿಸಿದಂತೆ, ಈ ನರ್ಮಕಥೆಯನ್ನು ತನ್ನ ಚಿತ್ತದಲ್ಲಿ ಬಚ್ಚಿಟ್ಟು ಜೋಪಾನವಾಗಿ ಕಾಪಾಡಿಕೊಂಡುಬಂದಿದ್ದಳು. ಅವನು ತೊಡಿಸಿದ ಉಂಗುರಕ್ಕಿಂತಲೂ ಅವನು ಆಡಿದ ಈ ಮಾತು ಅವಳಿಗೆ ಅನರ್ಘ್ಯರತ್ನವಾಗಿತ್ತು. ಇಂಥ ಪ್ರಣಯಗೋಪ್ಯವನ್ನು ಹಲವರೆದುರಿಗೆ ಬೀದಿಯ ಘೋಷಣೆಯಾಗುವಂತೆ ಈ ಅಲ್ಪಭಾಷಿಣಿ ವಿವರಿಸಿ ಹೇಳಬೇಕಾಯಿತು. ಆದರೂ ದುಷ್ಯಂತನಿಗೆ ನೆನಪು ಮರಳಲಿಲ್ಲ; ನಂಬಿಕೆ ಹುಟ್ಟಲಿಲ್ಲ. ಶಕುಂತಲೆಗೆ ಇದಕ್ಕಿಂತಲೂ ಘೋರ ಯಾತನೆ ಬೇಕೆ? ಈ ಧೂರ್ತನು ತನ್ನನ್ನು ಉದ್ದೇಶಪೂರ್ವಕವಾಗಿ ವಂಚಿಸುತ್ತಿರುವನೆಂದೇ ಅವಳಿಗೆ ತೋರಿತು. ಇತ್ತ ಗಂಡನ ಮನೆ ಹೀಗೆ ದೂರವಾಯಿತು; ಅತ್ತ ತಂದೆಯ ಮನೆಗೆ ಅಪವಾದ ಹೊತ್ತ ತಾನು ಕಾಲಿಡುವಂತಿಲ್ಲ. "ಓ ಭೂಮಿದೇವಿ, ನನಗಾಗಿ ಬಾಯಿ ತೆರೆ!" ಎಂಬ ಆರ್ತನಾದವೊಂದೇ ಅವಳ ಭಾಗಕ್ಕೆ ಉಳಿದದ್ದು.

ಆದರೆ ಅನಾಹುತ ಇಷ್ಟು ದೂರ ಹೋಗುವುದು ದೈವಸಂಕಲ್ಪವಾಗಿರಲಿಲ್ಲ. ಹೆತ್ತ ಕೂಡಲೇ ಕೂಸನ್ನು ತೊರೆದಿದ್ದ ಮೇನಕೆಗೆ ಈಗ ಕರುಳು ಬಾಧಿಸಿ, ದುಃಖಭಾಗಿನಿಯಾದ ಮಗಳನ್ನು ಅವಳು ಹತ್ತಿರಕ್ಕೆ ಕರೆದುಕೊಂಡಳು. ಮಾರೀಚ ಮಹರ್ಷಿಗಳ ದಿವ್ಯಾಶ್ರಮದಲ್ಲಿ, ತಾಯ ಆರೈಕೆಯಲ್ಲಿ, ಶಕುಂತಲೆ ಭರತಭೂಮಿಯ ಪ್ರಥಮ ಚಕ್ರವರ್ತಿಯನ್ನು ಹೆತ್ತಳು. ಗಂಡನು ತನ್ನನ್ನು ನಿಷ್ಕಾರಣವಾಗಿ ನಿರಾಕರಿಸಿದ್ದರೂ ಅವಳು ಮಾತ್ರ ಅವನನ್ನು ತನ್ನ ಹೃದಯದಿಂದ ಹೊರದೂಡಲಿಲ್ಲ. ಪಾತಿವ್ರತ್ಯದ ಕಠಿನ ನಿಯಮಗಳನ್ನು ಪಾಲಿಸುತ್ತಾ, ಜೀವಿತಸರ್ವಸ್ವವಾದ ಮಗನನ್ನು ನೋಡಿಕೊಳ್ಳುತ್ತಾ ಈ ಸುಶೀಲೆ ವರ್ಷಗಳನ್ನು ನೂಕಿದಳು. ಇತ್ತ, ಶಕುಂತಲೆಯ ಬೆರಳಿನಿಂದ ಜಾರಿ ಶಚೀತೀರ್ಥದಲ್ಲಿ ಮುಳುಗಿದ್ದ ಉಂಗುರ ಒಬ್ಬ ಬೆಸ್ತರವನ ಮೂಲಕ ದುಷ್ಯಂತನ ಕೈಗೆ ಕೊನೆಗೆ ಸೇರಿತು. ಅದನ್ನು ಕಂಡೊಡನೆಯೇ ಅವನಿಗೆ ತನ್ನ ಪ್ರಾಣಪ್ರಿಯೆಯ ನೆನಪೂ, ಆದರ ಬೆನ್ನಹಿಂದೆಯೇ ಅಪಾರವಾದ ಪರಿತಾಪವೂ ಒದಗಿದುವು. ಶಕುಂತಲೆ ತನ್ನಿಂದ ಧಿಕ್ಕಾರಹೊಂದಿ, ಕಣ್ವಶಿಷ್ಯರ ಗರ್ಜನೆಗೆ ನಡುಗಿ, ನೆಲೆತಪ್ಪಿ ನಿಂತಾಗ, ಅವಳು ತನ್ನ ಕಡೆಗೆ ಬೀರಿದ ಬಾಷ್ಪಾಕುಲವಾದ ದೃಷ್ಟಿ ಈಗ ವಿಷದ ಮುಳ್ಳಿನಂತೆ ಅವನನ್ನು ದಹಿಸತೊಡಗಿತು. . . . ದುಷ್ಯಂತನ ಉತ್ಕಟ ಪಶ್ಚಾತ್ತಾಪದ ವೃತ್ತಾಂತ ಶಕುಂತಲೆಯ ಕಿವಿಗೂ ಮುಟ್ಟಿತು.

ಇನ್ನು ಹೇಮಕೂಟದ ದಿವ್ಯಾಶ್ರಮದಲ್ಲಿ ದಂಪತಿಗಳ ಪುನಃಸಮಾಗಮ. ತಮ್ಮಿಬ್ಬರ ಅಗಲಿಕೆಗೆ, ಅಳಲಿಗೆ ಋಷಿಶಾಪವೇ ನಿಜವಾದ ಕಾರಣವೆಂದು ಇಬ್ಬರಿಗೂ

ತಿಳಿಯುವ ಮೊದಲೇ ಅವರ ಹೃದಯಗಳು ಒಂದುಗೂಡುವಂತೆ ಸಂವಿಧಾನವನ್ನು ಕಲ್ಪಿಸಿ, ಗಾಢಪ್ರೇಮದ ಅಸಾಮಾನ್ಯ ಶಕ್ತಿಯನ್ನು ಕಾಳಿದಾಸನು ನಿದರ್ಶಿಸಿರುವನು. ತೊರೆದ ಗಂಡನು ಈಗ ಮರಳಿ ಬಂದಿದ್ದಾನೆ; ಅನುತಾಪದಿಂದ ಸೊರಗಿ ಗುರುತು ಸಿಕ್ಕಲಾರದಷ್ಟು ಬಡವಾಗಿದ್ದಾನೆ; ಚರಣತಲದಲ್ಲಿ ಹೊರಳಿ ಕ್ಷಮೆ ಬೇಡುತ್ತಿದ್ದಾನೆ. ಶಕುಂತಲೆಗೆ ಇನ್ನೇನು ಬೇಕು? ಪ್ರಿಯನ ಹಿಂದಿನ ಅಪರಾಧವೆಲ್ಲವೂ ಅವಳಿಗೆ ಮರೆತುಹೋಗುತ್ತದೆ; ಪ್ರೇಮದ ಕಂಬನಿಯಿಂದ ಅವನನ್ನು ಅಭಿಷೇಕಿಸಿ ಸ್ವೀಕಾರ ಮಾಡುತ್ತಾಳೆ. ಶಕುಂತಲೆಯ ಕಣ್ಣೀರನ್ನು ಒರಸಲು ದುಷ್ಯಂತನು ಕೈನೀಡಿದಾಗ ಅವನ ಬೆರಳಿನಲ್ಲಿದ್ದ ಉಂಗುರ ಅವಳಿಗೆ ಕಾಣಿಸುತ್ತದೆ. ತಮ್ಮ ಪುನಃಸಮಾಗಮಕ್ಕೆ ಗುರುತಾಗಿ ಆ ಉಂಗುರವನ್ನು ಮತ್ತೆ ಧರಿಸುವಂತೆ ಅವನು ಕೋರುತ್ತಾನೆ. ಆದರೆ ಶಕುಂತಲೆ, "ಇದರಲ್ಲಿ ನನಗೆ ನಂಬಿಕೆಯಿಲ್ಲ; ಆರ್ಯಪುತ್ರನೇ ಇದನ್ನು ಧರಿಸಿಕೊಳ್ಳ ಬೇಕು" ಎಂದು ಉತ್ತರಕೊಟ್ಟು, ನೆಚ್ಚಿಕೆತಪ್ಪಿದ ಆ ಉಂಗುರವನ್ನು ನಿರಾಕರಿಸು ತ್ತಾಳೆ. ಶಕುಂತಲೆ ಈಗ ದಿವ್ಯ ತಪಸ್ವಿನಿಯಾಗಿದ್ದರೂ ಅವಳ ಸರಳ ಮಾನವ ಹೃದಯ ಮಾತ್ರ ಮರೆಯಾಗಿಲ್ಲ!

ಪ್ರೇಮದ ಕುಲುಮೆಯಲ್ಲಿ ಶಕುಂತಲೆಯ ಬಾಳು ಪುಟಗೊಂಡ ಬಗೆಯನ್ನು ಕಂಡೆವು. ಇನ್ನು ಅವಳ ಪ್ರಿಯನನ್ನು ಕುರಿತು ಎರಡು ಮಾತು. 'ಅಭಿಜ್ಞಾನ ಶಾಕುಂತಲ'ಕ್ಕೆ 'ದುಷ್ಯಂತೋದ್ಧಾರ' ಎಂಬ ಎರಡನೆಯ ಹೆಸರನ್ನು ಕೊಡಬಹುದು. ಕಾಳಿದಾಸನ ನಾಟಕಕ್ಕೆ ಮಹಾಭಾರತದ ಒಂದು ಉಪಾಖ್ಯಾನ ಆಧಾರವಸ್ತು. ಆದರೆ ಅಲ್ಲಿಯ ದುಷ್ಯಂತನನ್ನೂ ಇಲ್ಲಿಯ ದುಷ್ಯಂತನನ್ನೂ ಹೋಲಿಸಿದರೆ, ಕಾಳಿ ದಾಸನು ದುರ್ವಾಸನ ಶಾಪವನ್ನು ಹೊಸದಾಗಿ ಕಲ್ಪಿಸಿ ದುಷ್ಯಂತನ ಪಾತ್ರವನ್ನು ಎಷ್ಟೊಂದು ಉತ್ತಮಗೊಳಿಸಿರುವನೆಂಬುದು ವ್ಯಕ್ತವಾಗುತ್ತದೆ. ಮೂಲೋಪಾ ಖ್ಯಾನದಲ್ಲಿ, ದುಷ್ಯಂತನು ಶಕುಂತಲೆಯೊಂದಿಗೆ ತಾನು ಬೆಳಸಿದ್ದ ಸಂಬಂಧವನ್ನು ತಿಳಿದೂ ತಿಳಿದೂ ಅಪಲಾಪಿಸಿ ಅಧಮನಾಗಿ ವರ್ತಿಸುತ್ತಾನೆ. ನಾಟಕದಲ್ಲಾದರೆ, ಋಷಿಶಾಪದ ಪ್ರಭಾವದಿಂದ ಶಕುಂತಲೆಯ ನೆನಪು ಅವನ ಮನಸ್ಸಿನಿಂದ ಸಂಪೂರ್ಣ ವಾಗಿ ಅಳಿಸಿಹೋಗಿರುತ್ತದೆ. ಅವಳು ಅನುಪಮಸುಂದರಿಯಾದರೂ ತನ್ನ ಭಾಗಕ್ಕೆ ಅನ್ಯಪತ್ನಿಯಾದ ಕಾರಣ ಅವಳನ್ನು ದಿಟ್ಟಿಸಿ ನೋಡುವುದಕ್ಕೂ ದುಷ್ಯಂತನಿಗೆ ಇಷ್ಟವಿಲ್ಲ. ಮದುವೆಯಾದದ್ದನ್ನು ತಾನೇ ಮರೆತಿರುವೆನೋ, ಈಕೆಯೇ ಸುಳ್ಳಾಡು ತ್ತಿರುವಳೋ ಎಂಬ ಸಂಶಯ ಒಡ್ಡಿರುವಾಗ, ಪತ್ನೀಪರಿತ್ಯಾಗದ ದೋಷ ಹೆಚ್ಚೋ ಪರಸ್ತ್ರೀಸಂಪರ್ಕದ ದೋಷ ಹೆಚ್ಚೋ ಎಂದು ದುಷ್ಯಂತನು ಕೇಳುವ ಪ್ರಶ್ನೆ ಕಣ್ವ ಶಿಷ್ಯರ ಬಾಯನ್ನೂ ಕಟ್ಟುತ್ತದೆ. ಹೀಗೆ ಶಕುಂತಲೆಯನ್ನು ನಿರಾಕರಿಸುವ ದೃಶ್ಯದಲ್ಲೇ ದುಷ್ಯಂತನು ಧೀರೋದಾತ್ತನಾಗಿ ಶೋಭಿಸುತ್ತಾನೆ.

ಆದರೆ ಈ ಉದ್ಧಾರವನ್ನು ವಿವರಿಸುವುದು ನಮ್ಮ ಪ್ರಕೃತೋದ್ದೇಶವಲ್ಲ. ನಾಟಕದ ಚೌಕಟ್ಟಿನೊಳಗೇ ಇನ್ನೊಂದು ಉದ್ಧಾರ ನಡೆದಿದೆ. ಶಕುಂತಲೆಯನ್ನು ಕಾಣುವುದಕ್ಕೆ ಮೊದಲೇ ದುಷ್ಯಂತನಿಗೆ ವಸುಮತಿ, ಹಂಸಪದಿಕೆ ಮೊದಲಾದ ಹಲವರು ಪತ್ನಿಯರಿದ್ದರು. ಆದರೆ ಅರಮನೆಯ ನಾಗರಿಕಜೀವನದಲ್ಲಿ ಆಳವಾದ, ಚಿರಸ್ಥಾಯಿಯಾದ ಪ್ರೇಮವನ್ನು ದುಷ್ಯಂತನು ಅರಿತಿದ್ದಂತೆ ತೋರುವುದಿಲ್ಲ. ಈ ತಾಪಸಕನ್ಯೆಯನ್ನು ಕಂಡೊಡನೆಯೇ ಅವಳಲ್ಲಿ ಅವನ ಮನಸ್ಸು ಅನನ್ಯವಾಗಿ, ನಿರಂತರವಾಗಿ ನೆಲಸಿತು; ಈ ನೈಜವಾದ ಪ್ರೇಮದಿಂದ ಅವನ ಆತ್ಮ ಉದ್ಧಾರವಾಯಿತು. ದುರ್ವಾಸನ ಶಾಪ ತಟ್ಟದೆಹೋಗಿದ್ದರೆ ದುಷ್ಯಂತನು ಶಕುಂತಲೆಯನ್ನು ಕೆಲವುಕಾಲ ಮಾತ್ರ ಪ್ರೀತಿಸಿ ಉಪೇಕ್ಷಿಸಿಬಿಡುತ್ತಿದ್ದನು; ಇವಳೂ ಇನ್ನೊಬ್ಬಳು ಹಂಸಪದಿಕೆಯಾಗಿ ಮೂಲೆಗೆ ಸೇರುತ್ತಿದ್ದಳು ಎಂಬ ಅಭಿಪ್ರಾಯವೊಂದುಂಟು. ಆದರೆ ಇದನ್ನು ಒಪ್ಪುವುದು ಕಷ್ಟ. ಶಕುಂತಲೆಯಲ್ಲಿ ದುಷ್ಯಂತನಿಗೆ ಮೂಡಿದ ಪ್ರೇಮದ ಮಟ್ಟವೇ ಬೇರೆಯೆಂದು ತೋರುತ್ತದೆ. ಇದು ನಾಲ್ಕುದಿನ ಮಿಂಚಿ ಮರೆಯಾಗುವುದಲ್ಲ; ಯಾವಜ್ಜೀವವೂ, ಬಹುಶಃ ಆಚೆಗೂ, ನೆಲಸತಕ್ಕದ್ದು. ಹೀಗೆ ಹೇಳಲು ಕಾರಣವುಂಟು. ಶಾಪದ ತಮಸ್ಸು ಆವರಿಸಿದ ಬಳಿಕ, ಶಕುಂತಲೆಯ ವಿಚಾರದ ಮಟ್ಟಿಗೆ ದುಷ್ಯಂತನು ಹೊಸ ಜನ್ಮವೆತ್ತಿದಂತೆಯೇ ಆಯಿತು. ಯಾರು ಎಷ್ಟೇ ಬಗೆಯಾಗಿ ಜ್ಞಾಪಿಸಲಿ, ಕಡೆಗೆ ಶಕುಂತಲೆಯೇ ಸಾಕ್ಷಾತ್ತಾಗಿ ಬಂದು ನಂಬಿಕೆ ಕೊಡಲಿ, ದುಷ್ಯಂತನಿಗೆ ಅವಳ ನೆನಪಾಗುವಂತಿರಲಿಲ್ಲ. ಇಂಥ ಸ್ಥಿತಿಯಲ್ಲಿ ಅವನಿರುವಾಗ ಐದನೆಯ ಅಂಕದ ಆದಿಯಲ್ಲಿ ಒಂದು ಪ್ರಸಂಗ ನಡೆಯುತ್ತದೆ:

"ಪೊಸತಪ್ಪ ಮಧುವ ಬಯಸುತೆ
ರಸಾಲಮಂಜರಿಯನೆಂತು ಚುಂಬಿಸಿ ನೀಂ ಸಾ- |
ರಸವಾಸಮಾತ್ರದಿಂ ಸಂ-
ತಸವಾಂತದನೆಂತು ಮರೆದೆಯೆಲೆ ಮಧುಕರನೇ ||"

ಎಂದು ತುಂಬಿಯನ್ನು ಕುರಿತು ಹಾಡುವ ನೆವದಲ್ಲಿ ಹಂಸಪದಿಕೆ ದುಷ್ಯಂತನನ್ನು ಹಂಗಿಸುತ್ತಿದ್ದಾಳೆ. ಈ ಮಧುರವಾದ ಗೀತವನ್ನು ಕೇಳಿ ದುಷ್ಯಂತನ ಮನಸ್ಸು ಉಮ್ಮಳಿಸುತ್ತದೆ. (ಹಂಸಪದಿಕೆಯನ್ನು ಉಪೇಕ್ಷಿಸಿದ್ದಕ್ಕಾಗಿ ಅಲ್ಲ; ಜಾಣ್ಮೆಯಿಂದ ಅವಳು ಹಂಗಿಸಿದ ಬಗೆಯನ್ನು ಅವನು ಶ್ಲಾಘಿಸುತ್ತಾನೆ, ಅಷ್ಟೇ.) ಈ ಹಾಡು ಸ್ಪಷ್ಟವಾಗಿ ಶಕುಂತಲಾ ಪ್ರಣಯವನ್ನು ಪ್ರೇಕ್ಷಕವರ್ಗಕ್ಕೆಲ್ಲಾ ಸೂಚಿಸುತ್ತದೆ. ಆದರೆ ದುಷ್ಯಂತನಿಗೆ ಮಾತ್ರ ಶಾಪಮಹಿಮೆಯಿಂದ ಅದರ ಅರಿವೇ ಆಗುವಂತಿಲ್ಲ. ಹೀಗಿದ್ದರೂ ಅವನ ಮನಸ್ಸು ಉಮ್ಮಳಿಸುತ್ತದೆ. ಇಷ್ಟಜನವಿಯೋಗ ಯಾವುದೂ

ನನಗೆ ಉಂಟಾಗಿಲ್ಲ; ನೆಮ್ಮದಿಯಾಗಿಯೇ ಇದ್ದೇನೆ. ಆದರೂ ಈ ಇಂಚರವನ್ನು ಕೇಳಿ ನನ್ನ ಬಗೆಯೇಕೆ ಹೀಗೆ ಪರ್ಯುತ್ಸುಕವಾಗಿದೆ? ಅರಿವಿಗೆ ನಿಲುಕದಿದ್ದರೂ ಸಂಸ್ಕಾರರೂಪವಾಗಿ ನೆಲಸಿರುವ ಜನ್ಮಾಂತರದ ಸ್ನೇಹವೊಂದನ್ನು ಹೃದಯ ನೆನೆಯುತ್ತಿರಬೇಕು—ಹೀಗೆಂದು ದುಷ್ಯಂತನು ಪರಿಭಾವಿಸುತ್ತಾನೆ. ಇದು ನಿಜ! ಶಾಪಕ್ಕೆ ಹಿಂದಿನ ಜನ್ಮಾಂತರದ ಶಕುಂತಲಾಪ್ರೇಮ ಈಗ ಸ್ಮರಣೆಗೆ ಗೋಚರವಾಗದಿದ್ದರೂ ಹೃದಯದ ಆಳದಲ್ಲಿ ಕುಳಿತು, ಅರಿಯದ ಮೂಗುಪೆಟ್ಟಿನ ದುಡಿತದಂತೆ, ಅವನನ್ನು ಬಾಧಿಸುತ್ತಿದೆ. ದುರ್ವಾಸನ ಶಾಪಕ್ಕಿಂತಲೂ ದುಷ್ಯಂತನ ಪ್ರೇಮ ಪ್ರಬಲತರವಾಯಿತು; ಮರವೆ ಮುಸುಕಿದರೂ ಅದರ ಮಿಡಿತ ತಪ್ಪಲಿಲ್ಲ!

ಈ ಅಸಾಧಾರಣ ಪ್ರೇಮ ದುಷ್ಯಂತನಿಗೆ ವಿಶೇಷ ಅನುಭವವನ್ನು ತಂದಿತು; ಅವನ ಹೃದಯವನ್ನು ಶೋಧಿಸಿತು. ಶಕುಂತಲೆಯನ್ನು ನಿರಾಕರಿಸಿದ ಬಳಿಕ ಒದಗಿದ ಪರಿತಾಪದಿಂದ ಅವನ ಆತ್ಮ ಎಷ್ಟು ಮೃದುವಾಯಿತು! ರಾಜ್ಯಪರಿಪಾಲನೆಯಲ್ಲಿ ಧರ್ಮದ ಜೊತೆಗೆ ಈಗ ದಯೆಯೂ ಸೇರಿತು. ಈ ವಿಷಯವನ್ನೆಲ್ಲಾ ಇಲ್ಲಿ ವಿವರಿಸಲು ಅವಕಾಶ ಸಾಲದು. ಮಿಕ್ಕ ವಿಚಾರವಿರಲಿ. ಅವನ ಕೆಚ್ಚಿನಲ್ಲಾದ ಮಾರ್ಪಾಡನ್ನೇ ನೋಡಿ. ನಾಟಕದ ಮೊದಲಲ್ಲಿ, ತಾನು ಸತ್ಪುರುಷನೆಂಬ ನೆಚ್ಚಿಕೆ ಅವನಿಗಿದ್ದಿತು. ಈಗ ಅಹಂಕಾರ ಸುಟ್ಟು ನಮ್ರತೆ ಮೊಳೆಯಿತು. “ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣಪ್ರವೃತ್ತಯಃ” (ಸಂದೇಹಾಸ್ಪದವಾದ ಸಂದರ್ಭಗಳಲ್ಲಿ ಸತ್ಪುರುಷರಿಗೆ ಅಂತಃಕರಣ ಹರಿದ ದಾರಿಯೇ ಪ್ರಮಾಣ) ಎಂದು ತಿಳಿದು, ಆರ್ಯವಾದ ತನ್ನ ಮನಸ್ಸು ಶಕುಂತಲೆಯಲ್ಲಿ ನೆಲೆಗೊಂಡ ಕಾರಣದಿಂದ ಅವಳು “ಕ್ಷತ್ರಪರಿಗ್ರಹೋಚಿತೆ”ಯಾಗಿರಬೇಕೆಂದು ದಿಟ್ಟತನದಿಂದ ನಿರ್ಧರಿಸಿದ ಮೊದಲಿನ ದುಷ್ಯಂತನೆಲ್ಲಿ; ನಿದರ್ಶನದ ಮೇಲೆ ನಿದರ್ಶನವೊದಗುತ್ತಿದ್ದರೂ ಸರ್ವದಮನನನು ತನ್ನ ಮಗನೇ ಆಗಿರಬೇಕೆಂದು ನಂಬಲು ಅಳುಕಿದ ಈಚಿನ ದುಷ್ಯಂತನೆಲ್ಲಿ! ಕಡೆಗೆ, “ನನ್ನ ತಂದೆ ದುಷ್ಯಂತ; ನೀನಲ್ಲ” ಎಂದು ಆ ತುಂಟ ತರಳನು ಹೇಳುವತನಕ ಇವನ ಸಂದೇಹವು ಪೂರ್ಣವಾಗಿ ಪರಿಹಾರವಾಗಲಿಲ್ಲ!

ಮೊದಲೇ ಶಕುಂತಲಾದುಷ್ಯಂತರು ರೂಪಗುಣಗಳಲ್ಲಿ ಲೋಕಕ್ಕೆ ಮಿಗಿಲಾಗಿದ್ದರು; ಒಬ್ಬರಿಗೊಬ್ಬರು ಅನುರೂಪರಾಗಿದ್ದರು. ಶಾಪದ ಸಾಣೆಗೆ ಸಿಕ್ಕಿದಮೇಲಂತೂ ಅವರ ಆತ್ಮಗಳಿಗೆ ಹೊಸ ತೇಜಸ್ಸು ಬಂದಿತು. ಅವರ ಪ್ರೇಮ ಪಾವನವಾಯಿತು; ಅವರ ಕಥೆ ಅಮರವಾಯಿತು.

ತೀ. ನಂ. ಶ್ರೀಕಂಠಯ್ಯ.

---

# ಮುಗ್ಧೆ

"ಮುಗ್ಧೆ, ನೀನಿಂತೇಕೆ ಮುಗ್ಧತೆಯೊಳೇ ಕಾಲ-
ವೆಲ್ಲವನು ಕಳೆಯುತಿರುವೆ?
ಮಾನವನು ಹೂಡು, ತೊಡು ಧೈರ್ಯವನು, ಪ್ರಿಯನ ಬಳಿ
ಋಜುತೆಯನು ದೂರ ನೂಕು."
ಇಂತೆಂದು ಕೆಳದಿ ಸಂಬೋಧಿಸಲು, ಘೂರ್ಣಿಡಿದ-
ಳವಳು ಬೆದರಿದ ಮುಖದಲಿ:
"ಮೆಲ್ಲಗುಸಿರಾ, ನನ್ನ ಹೃದಯದಲಿ ನೆಲಸಿರುವ
ನಲ್ಲನಿಗೆ ಕೇಳಿಸೀತು!"

('ಅಮರುಶತಕ', ೭೦ : ಮುಗ್ಧೇ ಮುಗ್ಧತಯೈವ . . .)

ತೀ. ನಂ. ಶ್ರೀ.

# ಕಾಳಿದಾಸನ ಸಂದೇಶ*

ಕವಿ ತತ್ತ್ವಜ್ಞನಲ್ಲ, ಧರ್ಮದೇಶಿಕನಲ್ಲ; ರಾಜನೀತಿಜ್ಞನಲ್ಲ, ಸಮಾಜ ಸುಧಾರಕನಲ್ಲ. ಅವನು ಯಾರಿಗೂ ಯಾವ ಉಪದೇಶವನ್ನೂ ಕೊಡುವುದಕ್ಕಾಗಲಿ ಯಾವ ಸಂದೇಶವನ್ನೂ ಹರಡುವುದಕ್ಕಾಗಲಿ ಹೊರಟಿಲ್ಲ. ಆದರೂ ಕೂಡ ಇವರೆಲ್ಲರ ಕಾರ್ಯವೂ ಅವನಿಂದ ನಡೆಯುತ್ತದೆ. ಮಾನವನು ಧರ್ಮಜ್ಞನಾಗುತ್ತಾನೆ, ಸಮಾಜವು ಸುಧಾರಿತವಾಗುತ್ತದೆ. ದರ್ಶನಗಳಿಂದಾಗಲಿ ರಾಜಶಾಸನಗಳಿಂದಾಗಲಿ ಆಗಬಹುದಾದ ಕೆಲಸ ಅವನಿಂದ ಇನ್ನೂ ಸುಲಭವಾಗಿ, ಇನ್ನೂ ಚೆನ್ನಾಗಿ ಆಗಿಹೋಗುತ್ತದೆ. ರುಚಿಗಾಗಿ ಕುಡಿದ ಹಾಲಿನಿಂದ ಆನಂದವೆಷ್ಟೋ ಅಷ್ಟೇ ಪುಷ್ಟಿಯೂ ಆಗುವಂತೆ ಮಹಾಕವಿಗಳ ಕೃತಿಗಳನ್ನು ಆನಂದಕ್ಕಾಗಿ ಆಸ್ವಾದಿಸಿದರೆ ಆತ್ಮೋನ್ನತಿಯಾಗುತ್ತದೆ. ಈ ಅರ್ಥದಲ್ಲಿ ನಾವು "ಕವಿಯ ಸಂದೇಶ"ವೆಂಬ ಮಾತುಗಳನ್ನು ಅರ್ಥಮಾಡಿಕೊಳ್ಳಬೇಕು: ಕವಿ ಕೊಟ್ಟ ಸಂದೇಶವಲ್ಲ, ನಾವು ಕಲಿತ ಸಂದೇಶ. ಭರತಖಂಡದ ರಾಷ್ಟ್ರಕವಿಯೂ ಕವಿಕುಲಗುರುವೂ ಆದ ಕಾಳಿದಾಸನ ಸಂದೇಶವೂ ಹಾಗೆಯೇ. ಅವನ ಕಾವ್ಯಗಳಲ್ಲಿ, ನಾಟಕಗಳಲ್ಲಿ ಗೋಚರವಾಗುವ ಅವನ ಚಿತ್ತವೃತ್ತಿ, ಅವನ ಬಾಳಿನ ರೂಪರೇಖೆ, ಅವನ ಜೀವನದೃಷ್ಟಿ ಇವುಗಳಿಂದ ನಾವು ಅವನ ಸಂದೇಶವನ್ನು ಗ್ರಹಿಸಬೇಕು.

ಕಾಳಿದಾಸನ ಕೃತಿಗಳನ್ನು ನೋಡಿದರೆ ಮೊದಲು ನಮಗೆ ಭಾಸವಾಗುವುದು ಅವನ ನಮ್ರತೆ. ತನ್ನ ವಿಷಯವಾಗಿ ಒಂದು ಹೊಗಳಿಕೆಯ ಮಾತನ್ನೂ ಅವನು ಹೇಳಿಕೊಂಡಿಲ್ಲ. ಈ ವಿಷಯದಲ್ಲಿ ನಿಜವಾಗಿಯೂ ಅವನು ಇತರ ಸಂಸ್ಕೃತ ಕವಿಗಳಿಗಿಂತ ಬೇರೆಯಾಗಿದ್ದಾನೆ. ಅವನ ಮೊದಲ ಮಹಾಕಾವ್ಯವಾದ 'ರಘುವಂಶ'ದ ಪೀಠಿಕೆಯಲ್ಲೂ, ಅದೇ ರೀತಿ ಅವನ ಕಡೆಯ ಕೃತಿಯಾದ 'ಶಾಕುಂತಲ'ದ ಪ್ರಸ್ತಾವನೆಯಲ್ಲೂ ಇದನ್ನು ನಾವು ನೋಡಬಹುದು. ಈ ನಮ್ರತೆ ಹೃದಯ ದೌರ್ಬಲ್ಯದಿಂದ ಹುಟ್ಟಿದುದಲ್ಲ. ತನ್ನನ್ನೇ ಸ್ತೋತ್ರಮಾಡಿಕೊಳ್ಳುವ ಚಾಪಲ್ಯ ಅವನಿಗಿರಲಿಲ್ಲ ಅಷ್ಟೆ. ಆದರೆ ಅವನ ಶಕ್ತಿಯಲ್ಲಿ ಅವನಿಗೇ ನಂಬಿಕೆಯಿರಲಿಲ್ಲವೆಂದಲ್ಲ. 'ಮಾಲವಿಕಾಗ್ನಿಮಿತ್ರ'ದ ಪ್ರಸ್ತಾವನೆಯನ್ನು ನೋಡಿದರೆ ತನ್ನ ಮೊದಲನೆಯ

---

* ೧೦-೯-೧೯೪೨ರಲ್ಲಿ ಮೈಸೂರು 'ಆಕಾಶವಾಣಿ'ಯಲ್ಲಿ ನಡೆದ 'ಕಾಳಿದಾಸೋತ್ಸವ'ದಲ್ಲಿ ಮಾಡಿದ ಭಾಷಣ.

ನಾಟಕವನ್ನು ಬರೆಯುವಾಗಲೇ ಅವನಿಗೆ ತನ್ನ ಪ್ರತಿಭಾಶಕ್ತಿಯಲ್ಲಿ ಎಷ್ಟು ನಂಬಿಕೆಯಿತ್ತೆಂಬುದು ಗೊತ್ತಾಗುತ್ತದೆ. ಹಳೆಯದಾದ ಮಾತ್ರಕ್ಕೇ ಕಾವ್ಯವು ಉಪಾದೇಯವಲ್ಲ, ಹೊಸದಾದ ಮಾತ್ರಕ್ಕೇ ತಿರಸ್ಕರಣೀಯವಲ್ಲ ಎಂದು ಪಾರಿಪಾರ್ಶ್ವಕನನ್ನು ಸೂತ್ರಧಾರನು ನಿಂದಿಸುವ ನೆವದಿಂದ ಸಹೃದಯರಾದ ಎಲ್ಲರಿಗೂ ಕಾಳಿದಾಸನು ಬುದ್ಧಿಯನ್ನು ಕಲಿಸಿದನು. ವ್ಯಂಗ್ಯವಾಗಿ ಮಾತಾಡಿ, ಯಾರ ಮನಸ್ಸನ್ನೂ ನೋಯಿಸದೆ, ಅವರಿಗೆ ತನ್ನ ಕಾವ್ಯಗುಣವನ್ನು ಗ್ರಹಿಸುವುದು ಸುಲಭವಾಗುವಂತೆ ಮಾಡಿದನು.

ಇದು ಕಾಳಿದಾಸನ ಸ್ವಭಾವದ ಮಾತಾಯಿತು. ಅವನ ಕೃತಿಗಳನ್ನು ನೋಡಿದರೆ ಇನ್ನೂ ಒಂದೆರಡು ವಿಷಯಗಳನ್ನು ನಾವು ನಿಸ್ಸಂದೇಹವಾಗಿ ತಿಳಿಯಬಹುದು. ಅವನು ಆಗಿನ ಕಾಲದಲ್ಲಿ ಪ್ರಚಾರದಲ್ಲಿದ್ದ ಸರ್ವ ಜ್ಞಾನಭಂಡಾರದಲ್ಲೂ ಆಸಕ್ತಿಯನ್ನು ತೋರಿಸಿದ್ದಂತೆ ಕಾಣುತ್ತದೆ. ವೇದ ಉಪನಿಷತ್ತುಗಳು, ರಾಮಾಯಣ ಮಹಾಭಾರತಗಳು, ಧರ್ಮಶಾಸ್ತ್ರಗಳು, ದರ್ಶನಗಳು, ಅಲಂಕಾರ ವ್ಯಾಕರಣ, ಜ್ಯೋತಿಷ ಅರ್ಥಶಾಸ್ತ್ರ—ಇವೆಲ್ಲದರ ಪರಿಚಯವನ್ನೂ ಮಾಡಿಕೊಂಡಿರಬೇಕು. 'ಶ್ರುತಬೋಧ' ವೆಂಬ ಒಂದು ಛಂದಶ್ಶಾಸ್ತ್ರದ ಗ್ರಂಥವನ್ನು ಅವನೇ ಬರೆದನೆಂಬ ಪ್ರತೀತಿ ಕೂಡ ಇದೆ. ಬರೆದಿದ್ದರೆ ಏನೂ ಆಶ್ಚರ್ಯವಿಲ್ಲ. ಜೊತೆಗೆ ಸಂಗೀತ ನಾಟ್ಯ ಚಿತ್ರಕಲೆಗಳನ್ನು ಚೆನ್ನಾಗಿ ಬಲ್ಲವನಾಗಿದ್ದನು. ಭಾರತ ದೇಶವನ್ನೆಲ್ಲಾ ಸುತ್ತಿದವನು. ಹೀಗೆ ಸುತ್ತುವಾಗ ಕರಣಗಳೆಲ್ಲವನ್ನೂ ತೆರೆದು ಮಾನವನ ಜೊತೆಗೆ ಪ್ರಕೃತಿಯ ನಾಮರೂಪವನ್ನು ಆತ್ಮದಲ್ಲಿ ಅನುಭವಿಸಿ ರಸವಾಗಿ ಕಾವ್ಯದಲ್ಲಿ ಹರಿಸಿದವನು. ಮಾನವತೆಯನ್ನು ದಾನವತೆಗೆ ಇಳಿಸದೆ ದಿವ್ಯತೆಗೆ ಏರಿಸಿದವನು. ಪ್ರಕೃತಿಗೂ ಮಾನವನಿಗೂ ಉಂಟಾಗಿರುವ ಕೃತಕ ಭೇದವನ್ನು ತೊಡೆದು ಒಂದರಲ್ಲೊಂದು ಕೂಡಿ ಕೃತಾರ್ಥವಾಗುವಂತೆ ತನ್ನ ಕಲೆಯ ಇಂದ್ರಜಾಲದಲ್ಲಿ ನೆಯ್ದು ಒಂದು ಸುಂದರ ನವೋನವ ಪ್ರಪಂಚವನ್ನೇ ಸೃಷ್ಟಿಸಿದವನು. ಈ ದಿವ್ಯದೃಷ್ಟಿಯ ಬೆಳವಣಿಗೆಗೆ ಅನುಕೂಲಿಸುವಂತೆ ಶಾಂತಿಯ ವಾತಾವರಣವು ಏರ್ಪಟ್ಟಿತ್ತು. ಉಜ್ಜಯಿನಿಯಂಥ ರಮ್ಯನಗರಿಯಲ್ಲಿ ವೈಭವದಿಂದ ರಾಜ್ಯವಾಳುತ್ತ ಕವಿತ್ವನಿವೇದನಕ್ಕೆ ಅರ್ಹತೆಯಿದ್ದ ರಸಿಕನಾದ ವಿಕ್ರಮಾದಿತ್ಯನಿದ್ದನು. ಕಾಳಿದಾಸನಿಗೆ ಅವನ ಅನುಗ್ರಹವಿತ್ತು. ಹಿತವಾದ ಮಿತವಾದ ಶುಚಿಯಾದ ಅಭಿರುಚಿಯುಳ್ಳ ರಸಿಕವೃಂದವಿತ್ತು; ಇಲ್ಲದ ಕಡೆ ಅದನ್ನು ಅವನೇ ಸೃಷ್ಟಿ ಮಾಡಿಕೊಂಡನು. ಅವರೆಲ್ಲರಿಗೂ ತಾನು ಅಚ್ಚುಮೆಚ್ಚಾದನು. ಇಷ್ಟಾದರೂ ಅವನು ಯಾರನ್ನೂ ಮುಖಸ್ತುತಿಮಾಡಿ ಮಾನವತೆಯ ಉನ್ನತಿಯನ್ನು ಕೀಳಾಗಿಸಲಿಲ್ಲ. ಹೀಗೆ ಸ್ಥೂಲವಾಗಿ ಕಾಳಿದಾಸನ ಕಾವ್ಯಗಳಿಂದ ಅವನ ಜೀವನದ ರೂಪರೇಖೆಯನ್ನು ಮಾತ್ರ ಎಳೆಯುವುದು ಸಾಧ್ಯ.

ಇನ್ನು ಕಾಳಿದಾಸನ ಜೀವನದೃಷ್ಟಿ ಹೇಗಿದ್ದಿತೆಂದು ಸ್ವಲ್ಪ ವಿಮರ್ಶೆಮಾಡೋಣ. ಅವನ ಜೀವನದಲ್ಲಿ ಏನೂ ಸಮಸ್ಯೆಗಳಿರಲಿಲ್ಲವೆಂದು ಅನೇಕರು ಅಭಿಪ್ರಾಯಪಡು ತ್ತಾರೆ. ಅವನ ಜೀವನದಲ್ಲಿ ಹೆಚ್ಚು ತೊಡಕುಗಳಿದ್ದಿದ್ದರೆ ಅವನು ಕಾವ್ಯದಲ್ಲಿ ಹೆಚ್ಚಾಗಿ ದುಃಖವನ್ನು ಚಿತ್ರಿಸುತ್ತಿದ್ದನೆಂದೂ, ದುರಂತಕ್ಕೆ ಪ್ರಾಶಸ್ತ್ಯವನ್ನು ಕೊಡು ತ್ತಿದ್ದನೆಂದೂ ಅನೇಕ ಈಗಿನ ವಿಮರ್ಶಕರ ಅಭಿಪ್ರಾಯ. ಇರಬಹುದು; ಅವನ ಜೀವನವು ಸಂಪೂರ್ಣವಾಗಿಯೂ ಸುಖಮಯವಾಗಿಯೇ ಇದ್ದಿರಬಹುದು. ಸುಖವು ಮಾನವನಿಗೆ ಅಷ್ಟು ಸುಲಭವಲ್ಲವಾದ್ದರಿಂದ ಕಾಳಿದಾಸನು ಸದಾ ಸುಖವಾಗಿದ್ದ ನೆಂದರೆ ನಮಗೇನೂ ಹೊಟ್ಟೆಯಕಿಚ್ಚಿಲ್ಲ. ಆದರೂ ಅಷ್ಟು ನಿರ್ಧರವಾಗಿ ಹೀಗೆ ಹೇಳಲು ಸಾಧ್ಯವೆ? ಕವಿಗೆ ಇರುವ ಕಲ್ಪನಾಶಕ್ತಿಯ ಬಲದಿಂದ ಅವನು ಇನ್ನೊಬ್ಬರ ಅನುಭವವನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದಿಲ್ಲವೆ? ಹಾಗೆ ಮಾಡಿಕೊಂಡು ಅದೇ ಸಾಕ್ಷಾತ್ಕಾರವನ್ನು ತನ್ನ ಅನುಭವವೇ ಏನೋ ಎನ್ನುವಂತೆ ನಮಗೆ ತೋರಿಸು ವುದಿಲ್ಲವೆ? ಅಲ್ಲದೆ ಕಾಳಿದಾಸನ ಕಾವ್ಯದಲ್ಲಿ ದುರಂತ ಪ್ರಕರಣಗಳು ಅನೇಕ ಬರು ತ್ತವೆ. ಉದಾಹರಣೆಗೆ—'ಶಾಕುಂತಲ ನಾಟಕ'ದ ಐದನೆಯ ಅಂಕದಲ್ಲಿ ಆಪನ್ನ ಸತ್ತ್ವ ಯಾದ ತನ್ನ ಹೆಂಡತಿ ಶಕುಂತಲೆಯನ್ನು ದುಷ್ಯಂತನು ಶಾಪಕ್ಕೆ ಸಿಕ್ಕಿ ಗುರುತು ಹಿಡಿಯಲಾರದೆ ದೂರಮಾಡುವುದು, 'ರಘುವಂಶ'ದಲ್ಲಿ ಅಜನು ತನ್ನ ಪ್ರೇಯಸಿ ಯಾದ ಇಂದುಮತಿಯನ್ನು ಇದ್ದಕ್ಕಿದ್ದಂತೆ ಕಳೆದುಕೊಳ್ಳುವುದು (ಆಕಾಶದಿಂದ ಕೋಮಲವಾದೊಂದು ಹೂಮಾಲೆಯು ಅವಳ ಮೈಮೇಲೆ ಬಿದ್ದು ಅವಳು ಮೃತ ಳಾಗುವುದು), 'ಕುಮಾರಸಂಭವ'ದಲ್ಲಿ ರತಿಯ ವಿಲಾಪ, ಇತ್ಯಾದಿ. ಕಾಳಿದಾಸನ ಜೀವನದಲ್ಲಿ ಸಮಸ್ಯೆಗಳು ಇನ್ನು ಕೆಲವರ ಜೀವನದಲ್ಲಿದ್ದಷ್ಟು ಅವನ ಅದೃಷ್ಟದಿಂದ ಇಲ್ಲದೆ ಇರಬಹುದು. ಇದ್ದರೂ ಅವನು ಅವನ್ನು ಸಮಷ್ಟಿದೃಷ್ಟಿಯಿಂದ ನೋಡಿ ಬಿಡಿಸಿ ಕೊಂಡಿರಬಹುದು. ಆದರೆ ತೊಡಕುಗಳೇ ಇರಲಿಲ್ಲವೆಂದಾಗಲಿ ಸಮಸ್ಯೆಗಳೇ ಹುಟ್ಟ ಲಿಲ್ಲವೆಂದಾಗಲಿ ಹೇಳುವುದು—ಐತಿಹಾಸಿಕ ಅಂಶಗಳ ಅಭಾವದಲ್ಲಿ—ಸಾಹಸವಾ ದೀತು. ಮುಖ್ಯವಾಗಿ ಅವನ ಕಾವ್ಯಗುಣಕ್ಕೆ ಅವನ ಜೀವನ ದೃಷ್ಟಿಯೇ ಕಾರಣ, ಅವನ ಸಮಗ್ರದೃಷ್ಟಿಯೇ ಕಾರಣ.

ಕಾಳಿದಾಸನ ಅಭಿಪ್ರಾಯದಲ್ಲಿ ಮಾನವಜೀವನವು ಹೇಯವಾದುದಲ್ಲ, ತಿರಸ್ಕರಿ ಸುವುದಕ್ಕಾಗಿ ಅದನ್ನು ದೇವರು ಸೃಷ್ಟಿಸಲಿಲ್ಲ. ಅದನ್ನು ಸರಿಯಾಗಿ, ಕ್ರಮವಾಗಿ, ಮಿತವರಿತು, ಸಮರಸವಾಗಿ, ಆದರೂ ಪೂರ್ಣವಾಗಿ, ಬಾಳಬೇಕು. ತುಂಬುಜೀವನವೇ ಜೀವನದ ರಹಸ್ಯ. ಆದರ್ಶಪುರುಷ ಶ್ರೀರಾಮನ ಪೂರ್ವಜರಾದ ರಘುವಂಶದ ರಾಜರನ್ನು ಕಾಳಿದಾಸನು ವರ್ಣಿಸುವುದರಲ್ಲಿ ಇದನ್ನು ನಾವು ಕಾಣಬಹುದು:

ಶೈಶವೇಽಭ್ಯಸ್ತ ವಿದ್ಯಾನಾಂ ಯೌವನೇ ವಿಷಯೈಷಿಣಾಮ್ |
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಮ್ ||

ಈ ರಾಜರು ಚಿಕ್ಕಂದಿನಲ್ಲಿ ವಿದ್ಯಾಭ್ಯಾಸಮಾಡಿ ತಮ್ಮ ಪೂರ್ವಿಕರು ಗಳಿಸಿಟ್ಟಿದ್ದ ಜ್ಞಾನರಾಶಿಯನ್ನು ಸಂಪಾದಿಸಿಕೊಳ್ಳುತ್ತಿದ್ದರು. ಯೌವನದಲ್ಲಿ ವಿಷಯಸುಖಗಳನ್ನು ಬಯಸಿ, ಅವನ್ನು ತಿರಸ್ಕರಿಸದೆ ಭೋಗಿಗಳಾಗಿರುತ್ತಿದ್ದರು. ಮುಪ್ಪು ಬಂದಾಗ ಎಲ್ಲ ಭೋಗಗಳನ್ನೂ ತೊರೆದು ಬಾಳಿನ ಸಂಜೆಯಲ್ಲಿ ವಾನಪ್ರಸ್ಥರಾಗಿ ಮುನಿಗಳಂತೆ ಇರುತ್ತಿದ್ದರು. ಜೀವನಾಂತ್ಯದಲ್ಲಿ ಯೋಗಾಭ್ಯಾಸದಿಂದ ಧ್ಯಾನದಲ್ಲಿ ಮುಳುಗಿ ದೇಹತ್ಯಾಗ ಮಾಡುತ್ತಿದ್ದರು—ಹೀಗೆಂದು ಹೇಳಿದ್ದಾನೆ. ಅವರು ಭೂಲೋಕಕ್ಕೆಲ್ಲಾ ಚಕ್ರವರ್ತಿಗಳಾಗಿದ್ದರೂ, ಐಶ್ವರ್ಯದಲ್ಲಿ ಮುಳುಗಿದ್ದರೂ, ವಿಷಯ ಸುಖವನ್ನೇ ಪರಮಾದರ್ಶವಾಗಿ ಮಾಡಿಕೊಳ್ಳಲಿಲ್ಲ. ಅಂದರೆ, ಜೀವನದಲ್ಲಿ ಎಲ್ಲಕ್ಕೂ ಒಂದೊಂದು ಸ್ಥಾನವುಂಟು, ಕೀಳು ಯಾವುದೂ ಇಲ್ಲ, ಅದರದರ ಸ್ಥಾನದಲ್ಲಿ ಅದಕ್ಕೆ ಬೆಲೆಯಿದೆ. ವಿಷಯಸುಖಕ್ಕೆ ಯೌವನದಲ್ಲಿ ಸ್ಥಾನವುಂಟು ; ಆದರೆ ಮುಪ್ಪಿನಲ್ಲಲ್ಲ. ಯಯಾತಿಯ ಕಾಮ ಕಾಮವೇ ಹೊರತು ಶ್ರೀರಾಮಚಂದ್ರನ ಕಾಮ ಕಾಮವಲ್ಲ. ಆದರೂ ಯೌವನದ ಧ್ಯೇಯವೇ ಜೀವನದ ಒಟ್ಟು ಧ್ಯೇಯವಲ್ಲ. ಜೀವನದ ಧ್ಯೇಯವು ಯೋಗವೇ. ಹೀಗೆ ಜೀವನವನ್ನು ಕ್ರಮವಾಗಿ ಹದವರಿತು ಬಾಳಿದವರಿಗೆ ಒಂದೊಂದೂ ಮುಂದಿನದಕ್ಕೆ ಮೆಟ್ಟಲಂತೆ ಇರುತ್ತದೆ. ಜೀವನದಲ್ಲಿ ಯಾವ ಕೊರತೆಗೂ ಅವಕಾಶ ವಿರುವುದಿಲ್ಲ, ಅದರ ಬದಲು ಪೂರ್ಣತೆಯುಂಟು. ಹೀಗೆ ರಘುವಂಶದ ರಾಜರು ಬಾಳಿದರು.

ಇದೇ ಭಾವವನ್ನು ನಾವು 'ಕುಮಾರಸಂಭವ'ದಲ್ಲಿಯೂ ಕಾಣಬಹುದು. ಪಾರ್ವತಿಯು ಶಿವನನ್ನೇ ಮದುವೆಯಾಗಬೇಕೆಂದು ಹಟಮಾಡಿ, ತಪಸ್ಸಿನಲ್ಲಿ ಮಗ್ನನಾಗಿದ್ದ ಅವನಿಗೆ ಶುಶ್ರೂಷೆಮಾಡುತ್ತಿದ್ದ ಕಾಲದಲ್ಲಿ, ಶಿವನ ಮನಸ್ಸು ಚಂಚಲವಾಗಲು, ಅವನು ಕ್ರೋಧದಿಂದ ಈ ಚಾಂಚಲ್ಯವನ್ನುಂಟುಮಾಡಿದ ಮನ್ಮಥನನ್ನು ಸುಟ್ಟು ಬೂದಿಮಾಡಿ, ಜುಗುಪ್ಸೆಯಿಂದ ಎದ್ದು ಹೊರಟುಹೋದನು. ಆಗ ಪಾರ್ವತಿಯು—ತನ್ನ ಸೌಂದರ್ಯವೆಲ್ಲಾ ವ್ಯರ್ಥವಾಯಿತು, ಇದರಿಂದ ಶಿವನನ್ನು ಒಲಿಸಿಕೊಳ್ಳಲು ಆಗಲಿಲ್ಲ, ಇನ್ನು ನನಗೆ ತಪಸ್ಸೇ ಸಾಧನ ಎಂದು ಘೋರತಪಸ್ಸಿಗೆ ಮೊದಲು ಮಾಡಿದಳು. ಇತ್ತ, ಪಾರ್ವತಿಯನ್ನು ಮದುವೆಯಾಗು, ಲೋಕಕಲ್ಯಾಣಕ್ಕಾಗಿ ಸಂತಾನವನ್ನು ಪಡೆ ಎಂದು ದೇವತೆಗಳು ಶಿವನನ್ನು ಪ್ರಾರ್ಥಿಸಿಕೊಳ್ಳಲು, ಅವನು ಪಾರ್ವತಿಯ ಮನಸ್ಸನ್ನು ಪರೀಕ್ಷಿಸಬೇಕೆಂದು ಬ್ರಹ್ಮಚಾರಿಯ ವೇಷದಿಂದ ಅವಳಿದ್ದೆಡೆಗೆ ಬಂದನು. ಬಂದಾಗ ಅವಳ ಚಂಡತಪಸ್ಸನ್ನು ನೋಡಿ ಹೀಗೆ ಕೇಳುತ್ತಾನೆ:

ಅಪಿ ಸ್ವಶಕ್ತ್ಯಾ ತಪಸಿ ಪ್ರವರ್ತಸೇ
ಶರೀರಮಾದ್ಯಂ ಖಲು ಧರ್ಮಸಾಧನಮ್ ||

"ನಿನ್ನ ಶಕ್ತಿಮಿಾರಿ ತಪಸ್ಸು ಮಾಡುತ್ತಿಲ್ಲ ತಾನೆ? ಏಕೆಂದರೆ, ಎಲ್ಲ ಧರ್ಮಕ್ಕೂ ಶರೀರವೇ ಮೊದಲನೆಯ ಸಾಧನ." ಇದು ಬ್ರಹ್ಮಚಾರಿಯ ವೇಷದಲ್ಲಿದ್ದರೂ ತಾನೇ ತಪಸ್ವಿಯಾದ ಪರಮೇಶ್ವರನ ಮಾತು. ಶರೀರವನ್ನು ತಿರಸ್ಕರಿಸಿದರೆ ಯಾವ ಪುರುಷಾರ್ಥವನ್ನೂ ಗಳಿಸುವುದಕ್ಕಾಗುವುದಿಲ್ಲ. ದೇಹವಿದ್ದರೆ ಆಗ ಧರ್ಮ, ಅರ್ಥ, ಕಾಮ, ಮೋಕ್ಷ ಎಲ್ಲವೂ. ಇಹವನ್ನು ಬಿಟ್ಟು ಪರವಿಲ್ಲ, ಆದರೆ ಪರವೊಂದುಂಟೆಂಬುದನ್ನು ಮರೆಯಲಾಗದು. ಅರ್ಥ ಕಾಮಗಳಿಲ್ಲದೆ ಧರ್ಮ ಮೋಕ್ಷಗಳಿಲ್ಲ, ಆದರೆ ಧರ್ಮ ಮೋಕ್ಷಗಳನ್ನು ಮರೆಯಲಾಗದು. ಶಿವನೂ ಕೂಡ ಪಾರ್ವತಿಯಲ್ಲಿ ತನಗೆ ಮೊದಲು ಉಂಟಾದ ಮನೋವಿಕಾರವು ಕಾಮವೆಂದು ಅದನ್ನು ಸುಟ್ಟುಬಿಟ್ಟನು. ಆದರೆ ಪಾರ್ವತಿಯು ತನ್ನ ಕಾಮವನ್ನು ಶೋಕಾಗ್ನಿಯಿಂದ, ತಪಸ್ಸಿನಿಂದ ದಹಿಸಿ ಶುದ್ಧವಾದ ನಿರ್ಮಲಪ್ರೇಮವನ್ನು ನೀಡಿದಾಗ, ಧರ್ಮಕ್ಕೆ ವಿರುದ್ಧವಲ್ಲದ ತನ್ನ ಕಾಮವನ್ನು ಸ್ವೀಕರಿಸುತ್ತಾನೆ. ಕಾಮವನ್ನು ಆಗಿನಹಾಗೆ ಈಗ ತಿರಸ್ಕರಿಸುವುದಿಲ್ಲ. ಕಾಮನನ್ನು ಪುನರುಜ್ಜೀವನಗೊಳಿಸುತ್ತಾನೆ. ಈ ಭಾವವನ್ನೇ 'ಶಾಕುಂತಲ' ದಲ್ಲಿಯೂ ಇನ್ನೊಂದು ರೀತಿಯಲ್ಲಿ ನೋಡಬಹುದು.

ದಿಲೀಪನನ್ನು ವರ್ಣಿಸುವಾಗ ಕಾಳಿದಾಸನು ಹೀಗೆ ಹೇಳುತ್ತಾನೆ:

ಜುಗೋಪಾತ್ಮಾನಮತ್ರಸ್ತೋ ಭೇಜೇ ಧರ್ಮಮನಾತುರಃ |
ಅಗೃಧ್ನುರಾದದೇ ಸೋಽರ್ಥಂ ಅಸಕ್ತಃ ಸುಖಮನ್ವಭೂತ್ ||

"ದಿಲೀಪನು ತನ್ನನ್ನು ರಕ್ಷಿಸಿಕೊಳ್ಳುತ್ತಿದ್ದನು, ಆದರೆ ಭಯದಿಂದಲ್ಲ; ಧರ್ಮವನ್ನು ಪಾಲಿಸುತ್ತಿದ್ದನು, ಕಷ್ಟದಲ್ಲಿ ಸಿಕ್ಕಿಕೊಂಡದ್ದರಿಂದಲ್ಲ; ಅರ್ಥವನ್ನು ಸ್ವೀಕರಿಸುತ್ತಿದ್ದನು, ಲೋಭದಿಂದಲ್ಲ; ಸುಖವನ್ನು ಅನುಭವಿಸುತ್ತಿದ್ದನು, ಆದರೆ ಸಕ್ತಿಯಿಂದಲ್ಲ." ದಿಲೀಪನು ಜೀವನವನ್ನು ಬಾಳುವಾಗ ಅದರಲ್ಲೇ ಮುಳುಗಿ ಕುರುಡನಾಗಿ ಮುಂದಿನ ಗುರಿಯನ್ನು ಮರೆಯುತ್ತಿರಲಿಲ್ಲ. ಅದರಿಂದ ಭೋಗದಲ್ಲಿ ತ್ಯಾಗಿಯಾಗಿ ಸುಖದಿಂದಿದ್ದನು.

ಕಾಳಿದಾಸನಿಗೆ ಈ ದೃಷ್ಟಿಗೊಂದು ಆದರ್ಶದೃಷ್ಟಾಂತವೆಂದರೆ ಪರಮೇಶ್ವರನ ನಿತ್ಯಜೀವನ. ಶಿವನು ಕಾಳಿದಾಸನ ಇಷ್ಟದೈವ, ಅಭಿಮಾನದೇವತೆ. ಕಾಳಿದಾಸನಿಗೆ ವಿಷ್ಣುವಿನಲ್ಲಿ ಭಕ್ತಿಯಿಲ್ಲವೆಂದಲ್ಲ. ಅವನು ಒಂದೆರಡುಕಡೆ ಅವನ ಕಾವ್ಯಗಳಲ್ಲಿ ಬಹಳ ಉದಾತ್ತವಾದ ಭಾವಗಳನ್ನೊಳಕೊಂಡ ವಿಷ್ಣುಸ್ತೋತ್ರಗಳನ್ನು ಬರೆದಿದಾನೆ. ಶ್ರೀರಾಘನ ಕಥೆಯನ್ನು ಚಿತ್ರಿಸಿದಾನೆ. ಅವನು ವೀರ ವೈಷ್ಣವನಾಗಲಿ ಅಥವಾ

ಶೈವನಾಗಲಿ ಅಲ್ಲದಿದ್ದರೂ ಶಿವನಲ್ಲಿ ಅವನಿಗೆ ಮೋಹ ಹೆಚ್ಚು. ಅವನ ನಾಟಕಗಳ ನಾಂದೀಪದ್ಯಗಳೆಲ್ಲವೂ ಶಿವನನ್ನೇ ಕುರಿತವು. 'ರಘುವಂಶ'ದ ಮಂಗಳಶ್ಲೋಕ ಶಿವನ ಸ್ತುತಿ. 'ಕುಮಾರಸಂಭವ'ವಂತೂ ಶಿವನ ಕಥೆಯೇ ಆಯಿತು. 'ಮೇಘದೂತ'ದಲ್ಲೂ ಕೂಡ ಉಜ್ಜಯಿನಿಯ ಮಹಾಕಾಲೇಶ್ವರನನ್ನು ಹೇಗೋ ಮಾಡಿ ತಂದು ವರ್ಣಿಸಿದ್ದಾನೆ. 'ಮಾಲವಿಕಾಗ್ನಿಮಿತ್ರ'ದ ನಾಂದೀಪದ್ಯ ಹೀಗಿದೆ :

> ಏಕೈಶ್ವರ್ಯೇ ಸ್ಥಿತೋಽಪಿ ಪ್ರಣತಬಹುಫಲೇ ಯಃ ಸ್ವಯಂ ಕೃತ್ತಿವಾಸಾಃ
> ಕಾಂತಾಸಂಮಿಶ್ರದೇಹೋಽಪ್ಯವಿಷಯಮನಸಾಂ ಯಃ ಪರಸ್ತಾದ್ಯತೀನಾಮ್ ।
> ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿರ್ಬಿಭ್ರತೋ ನಾಭಿಮಾನಃ
> ಸನ್ಮಾರ್ಗಾಲೋಕನಾಯ ವ್ಯಪನಯತು ಸ ವಸ್ತಾಮಸೀಂ ವೃತ್ತಿಮೀಶಃ ॥

ಭಕ್ತರಿಗೆ ಅವರು ಬೇಡಿದಷ್ಟು, ಇಲ್ಲವೆ ಇನ್ನೂ ಹೆಚ್ಚಾಗಿ ಫಲವನ್ನು ಕೊಡಬಲ್ಲ ಲೋಕೈಕ ಪ್ರಭುತ್ವದಲ್ಲಿ ಸುಪ್ರತಿಷ್ಠಿತನಾಗಿದ್ದರೂ, ಶಿವನು ತನಗೆ ಹೊದೆಯುವುದಕ್ಕೆ ಒಂದು ಚರ್ಮವನ್ನು ಮಾತ್ರ ಇಟ್ಟುಕೊಂಡಿದ್ದಾನೆ. ಅದೂ ಕೂಡ ಗಜಾಸುರನೆಂಬವನನ್ನು ಕೊಂದಾಗ ಅವನು ಪಶ್ಚಾತ್ತಾಪಪಟ್ಟು ಶಿವನು ತನ್ನ ಚರ್ಮವನ್ನು ತನ್ನ ಜ್ಞಾಪಕಾರ್ಥವಾಗಿ ಹೊದೆಯಬೇಕೆಂದು ಬೇಡಿಕೊಂಡದ್ದರಿಂದ ; ತನಗಾಗಿಯಲ್ಲ. ಶಿವನ ಏಕೈಶ್ವರ್ಯದ ಫಲ ತನ್ನ ಭಕ್ತರಿಗಾಗಿ, ತನಗಲ್ಲ. ಶಿವನು ಅರ್ಧನಾರೀಶ್ವರ. ಅವನ ಎಡಭಾಗವೇ ಅವನ ಕಾಂತೆ, ಪಾರ್ವತಿ. ಅಕ್ಷರಶಃ ಅವಳು ಅವನ ಅರ್ಧಾಂಗಿ. ಶಿವನ ಕಾಮವು ಎಲ್ಲರ ಕಾಮಕ್ಕಿಂತಲೂ ಹೆಚ್ಚಿರಬೇಕು. ಏಕೆಂದರೆ, ಒಂದು ಕ್ಷಣವೂ ತನ್ನ ಕಾಂತೆಯನ್ನು ಬಿಟ್ಟಿರಲಾರದೆ, ಅವಳನ್ನು ತನ್ನ ದೇಹದಲ್ಲೇ ಇವನು ಬೆರಸಿಕೊಂಡಿದ್ದಾನೆ. ಆದರೆ ಹೀಗೆ ಕಾಂತಾಸಂಮಿಶ್ರದೇಹನಾದರೂ ಇವನು ವಿಷಯಸುಖಗಳಿಂದ ಪರಾಙ್ಮುಖರಾದ ಯತಿಗಳಲ್ಲಿ ಯತಿಯಾದವನು. ಎಲ್ಲವನ್ನೂ ತ್ಯಜಿಸಿ ಹಿಮಾಲಯಪರ್ವತದಲ್ಲಿ ದಕ್ಷಿಣಾಮೂರ್ತಿಯಾಗಿ ಕುಳಿತು ಘೋರತಪಸ್ಸನ್ನು—ತನಗಾಗಿ ಗಳಿಸಿಕೊಳ್ಳಬೇಕಾದ್ದು ಏನೂ ಇಲ್ಲದ್ದರಿಂದ—ಲೋಕಕಲ್ಯಾಣಕ್ಕಾಗಿ ಮಾಡಿದವನು. ಇವನ ಎಂಟು ದೇಹಗಳಿಂದಲೇ ಲೋಕಗಳೆಲ್ಲವೂ ನಿಂತಿವೆ. ಪಂಚಮಹಾಭೂತಗಳ ರೂಪದಿಂದ ಪ್ರಕೃತಿಗೆ ಆಧಾರವಾಗಿದ್ದಾನೆ. ಸೂರ್ಯಚಂದ್ರರ ರೂಪದಲ್ಲಿ ಈ ಪ್ರಕೃತಿಯನ್ನು ಹಗಲೂ ಇರುಳೂ ಆಳುತ್ತಾನೆ. ಯಾಗಯಜ್ಞಗಳಲ್ಲಿ ಯಾಗಮಾಡುವ ಯಜಮಾನನ ರೂಪದಿಂದ ದೇವತೆಗಳಿಗೆ ಹವಿಸ್ಸನ್ನು ಕೊಟ್ಟು ಸ್ವರ್ಗಲೋಕವನ್ನು ನಿಲ್ಲಿಸಿದ್ದಾನೆ. ಹೀಗೆ ತನ್ನ ಎಂಟು ದೇಹಗಳಿಂದ ಭೂಮಿ ಸ್ವರ್ಗಗಳೆಲ್ಲವನ್ನೂ ಹೊತ್ತಿದ್ದರೂ ಅವನಿಗೆ ಸ್ವಲ್ಪವೂ ಅಹಂಕಾರವಿಲ್ಲ. ಅಂಥ ಈಶನು ನಮ್ಮ ಮನಸ್ಸಿನ ತಮಸ್ಸನ್ನು ಹರಿಯಿಸಿ ಸನ್ಮಾರ್ಗವನ್ನು ನೋಡುವಂತೆ ಮಾಡಲಿ!

ಇದೇ ಈ ಶ್ಲೋಕದ ಭಾವ. ಇಂಥ ಭೋಗದಲ್ಲಿ ವಿರಾಗವನ್ನು ಕಂಡ, ಧರ್ಮದಲ್ಲಿ ಕಾಮವನ್ನು ಪುಟಹಾಕಿದ, ಆದರ್ಶಸಂಸಾರಿ, ಆದರ್ಶಯತಿ, ಕರ್ಮಯೋಗಿ ಕಾಳಿ ದಾಸನ ಇಷ್ಟದೇವತೆ. ಅವನ ಜೀವನವೇ ಆದರ್ಶಜೀವನ. ಕಾಳಿದಾಸನೂ ಹೀಗೆಯೇ ಈ ದೃಷ್ಟಿಯಿಂದಲೇ ತುಂಬುಜೀವನವನ್ನು ಬಾಳಿರಬೇಕು, ಅಸಕ್ತಿಯಿಂದ ಸುಖವ ನ್ನುಂಡಿರಬೇಕು; ಅವನ ಜೀವನವು ಪವಿತ್ರವಾಗಿದ್ದಿರಬೇಕು. ಹೀಗೆ ಜೀವನದ ರಹಸ್ಯವನ್ನು ಕಂಡುಕೊಂಡು ಅದನ್ನು ಪೂರ್ಣವಾಗಿ ಬಾಳಿದ ಕವಿ ತನ್ನ ಕಾವ್ಯದ ಕಣ್ಮಣಿಯಾದ 'ಶಾಕುಂತಲ'ವನ್ನು ರಚಿಸಿ ಅದರ ಕೊನೆಯಲ್ಲಿ ಹೀಗೆ ಆಶಿಸುತ್ತಾನೆ:

ಪ್ರವರ್ತತಾಂ ಪ್ರಕೃತಿಹಿತಾಯ ಪಾರ್ಥಿವಃ
ಸರಸ್ವತೀ ಶ್ರುತಮಹತಾಂ ಮಹೀಯತಾಮ್ ।
ಮಮಾಪಿ ಚ ಕ್ಷಪಯತು ನೀಲಲೋಹಿತಃ
ಪುನರ್ಭವಂ ಪರಿಗತಶಕ್ತಿರಾತ್ಮಭೂಃ ॥

"ರಾಜನು ಪ್ರಜೆಗಳ ಹಿತಕ್ಕಾಗಿಯೇ ದುಡಿಯಲಿ; ತಿಳಿದವರ, ಸುಸಂಸ್ಕೃತರ ಮಾತಿಗೇ ಯಾವಾಗಲೂ ಬೆಲೆಯಿರಲಿ; ನನಗಾದರೋ ಆತ್ಮಭವನಾದ ಸರ್ವವ್ಯಾಪಿ ಯಾದ ನೀಲಲೋಹಿತನಾದ ಶಿವನು ಪುನರ್ಜನ್ಮವನ್ನು ತಪ್ಪಿಸಲಿ!" ಇವು ಜೀವನ ಜಿಹಾಸೆಯಿಂದ ಬಂದ ಮಾತುಗಳಲ್ಲ. ತನ್ನ ಕರ್ತವ್ಯವನ್ನು ಮಾಡಿ, ತನ್ನ ಧರ್ಮ ವನ್ನು ಪಾಲಿಸಿ, ತನ್ನ ಪ್ರತಿಭೆಯಿಂದ ಜಗತ್ತನ್ನೇ ಆಚಂದ್ರಾರ್ಕವಾಗಿ ಬೆಳಗಿ, ಇನ್ನು ಜನ್ಮ ಬೇಡ ಎನ್ನುತ್ತಾನೆ. ತುಂಬುಜೀವನವನ್ನು ಚೆನ್ನಾಗಿ ಬಾಳಿ ಕೃತಕೃತ್ಯತೆಯ ಭಾವದಿಂದ ಹೊರಹೊಮ್ಮಿದ ಮಾತುಗಳಿವು! ಜೀವನಯಾತ್ರೆಯನ್ನು ಮಾಡಿ ದಣಿದು ಯಾತ್ರಿಕನು ತನ್ನ ಧಾಮವಾದ ಪರಾಶಕ್ತಿಯನ್ನು ತಿರುಗಿ ಸೇರಬೇಕೆಂಬ ಹಂಬಲಿ ನಿಂದ ಆಡಿದ ಮಾತುಗಳಿವು!

ಕಾಳಿದಾಸನ ಕೃತಿಗಳಿಂದ ನಾವು ಇಷ್ಟರ ಮಟ್ಟಿಗೆ ಮಾತ್ರ ಅವನ ಜೀವನ ವನ್ನೂ ದೃಷ್ಟಿಯನ್ನೂ ಊಹಿಸಬಹುದು. ಹೀಗೆ ಸಮಗ್ರದೃಷ್ಟಿಯಿಂದ ಸಾಗಿದ ಈ ಮಹಾಕವಿಯ ಪಾವನವೂ ಸುಂದರವೂ ಆದ ಜೀವನವೇ ನಮಗೆ ಅವನು ಸಾರು ತ್ತಿರುವ ಸನಾತನ ಸಂದೇಶ!

ನಂ. ಶಿವರಾಮಶಾಸ್ತ್ರಿ.

---

# ಮೋಡಗಳು

ಪ್ರಕೃತಿ ಕಲೆಗಿಂ ಮಿಗಿಲೆ ನರಕೃತಿಯ ಕಲೆ? ನೋಡ,
ಆಶ್ವೀಜದಾಕಾಶದಮೃತ ಚಿತ್ರದ ಶಾಲೆ
ಸೃಷ್ಟಿಶಿಲ್ಪಿಯ ಹೃದಯಪಿಂಡ ಕುಂಡಜ್ವಾಲೆ
ಕಡೆದಿಟ್ಟ ಕೃತಿಗಳಿಂ ಭೀಮರಮ್ಯಂ! ಮೋಡ
ಅರಳೆರಾಸಿಗಳಂತೆ, ಬೆಣ್ಣೆಬಂಡೆಗಳಂತೆ,
ಫೇನಮೃದು ರಜತಗಿರಿ ಶಿಖರ ಪದ್ಮಗಳಂತೆ,
ಕಡೆದ ಹಾಲ್ಗಡಲೆದ್ದು ಸಾಲ್ಗೊಂಡಲೆಗಳಂತೆ
ಶೋಭಿಸಿವೆ, ಶರದಭ್ರ ಶುಭ್ರ ಚಿಂತೆಗಳಂತೆ!
ಆವ ಕವಿಗಾವ ಶಿಲ್ಪಿಯ ಕೌಶಲಕೆ ಸಾಧ್ಯ
ಈ ಬೃಹತ್, ಈ ಮಹತ್, ಈ ರೂಪ ವೈವಿಧ್ಯ?
ಬರಿಯ ಮೋಡಗಳಲ್ಲ ಇವು ಬಿಳಿಯ ಆತ್ಮಗಳ್,
ಕ್ರಿಸ್ತ ಬುದ್ಧರ ಪೋಲ್ವ ವಿಶ್ವದ ಮಹಾತ್ಮಗಳ್;
ಹಿಂದೆ ಬಂದುವೊ ಮುಂದೆ ಬರಲಿಹವೊ ಪ್ರಾಣಗಳ್,
ಧ್ಯಾನಗಳ್, ಭಾವಗಳ್, ಲೋಕ ಕಲ್ಯಾಣಗಳ್!

"ಕುವೆಂಪು"

---

# 'ಅತಿಮಾನವ' ವಾದಿ ಫ್ರೆಡರಿಕ್ ನೀಚ್ಚೆ*

ನೀಚ್ಚೆ ಹತ್ತೊಂಬತ್ತನೆಯ ಶತಮಾನದ ಜರ್ಮನ್ ದಾರ್ಶನಿಕ. ಇವನು ೧೮೪೪ರ ಅಕ್ಟೋಬರ್ ೧೫ನೆಯ ತಾರೀಖಿನಲ್ಲಿ ಹುಟ್ಟಿ ೧೯೦೦ರಲ್ಲಿ ಐವತ್ತಾರನೆಯ ವಯಸ್ಸಿನಲ್ಲಿ ಗತಿಸಿದನು. ಇವನ ತಂದೆ, ಇವನ ತಾತ ಮುತ್ತಾತರಂತೆ, ಪಾದ್ರಿಯಾಗಿದ್ದ. ನೀಚ್ಚೆಯೂ ಒಂದು ರೀತಿಯಲ್ಲಿ ಮತಪ್ರಚಾರಕನೇ ಆದನು; ಆದರೆ ಆ ಮತ ಕ್ರೈಸ್ತಮತವಾಗಿರಲಿಲ್ಲ. ಬಾಲ್ಯದಲ್ಲಿ ಕ್ರೈಸ್ತರ ಸಾತ್ವಿಕ ಜೀವನವೇ ಪರಮ ಧ್ಯೇಯವೆಂದು ತನ್ನ ತಾಯಿ ತಂದೆಯರು ಹೇಳುತ್ತಿದ್ದುದನ್ನು ಕೇಳುತ್ತಿದ್ದನು. ಇವನ ತಾಯಿಯಾದರೋ ಬಲು ಕಟ್ಟುನಿಟ್ಟಿನ ಆಚಾರಶೀಲ 'ಪ್ಯೂರಿಟನ್' ಪಂಥದವಳಾಗಿದ್ದಳು. ನೀಚ್ಚೆ ಬೆಳೆದದ್ದು ಅಂತಹ ಆವರಣದಲ್ಲಿ.

ಇವನ ಚಿಕ್ಕ ವಯಸ್ಸಿನಲ್ಲೇ ಇವನ ತಂದೆ ಮಡಿದನು. ಮನೆಯ ಹೆಂಗಸರು ಇವನನ್ನು ಮುದ್ದುಮಾಡಿ ಹೆಣ್ಣು ಮಗುವಿನಂತೆ ಬೆಳಸಿದರು. ಇತರ ಹುಡುಗರೊಡನೆ ಸೇರಬಾರದೆಂದು ತಡೆದು ತಡೆದು, ಇತರ ಹುಡುಗರೆಂದರೆ ಅಂಜುವಂತೆ ಮಾಡಿಬಿಟ್ಟರು. ಶಾಲೆಯಲ್ಲಿ ಜೊತೆಗಾರರು ಇವನನ್ನು 'ಮರಿ ಯೇಸು' ಎಂದು ಹಂಗಿಸಲು ತೊಡಗಿದರು. ಇವರ ಭಯಕ್ಕೆ ಶಾಲೆ ಬಿಟ್ಟರೆ ಮನೆ, ಮನೆ ಬಿಟ್ಟರೆ ಶಾಲೆ—ಹೀಗಾಗಿ ತನ್ನಷ್ಟಕ್ಕೆ ತಾನು ಕಾಲ ಕಳೆಯುವುದನ್ನು ಅಭ್ಯಾಸಮಾಡಿಕೊಂಡ. ಓದುವುದಕ್ಕೆ ಬೈಬಲ್ ಅಲ್ಲದೆ ಬೇರೆ ಪುಸ್ತಕವೂ ದೊರೆಯುವುದು ಕಷ್ಟವಾಯಿತು. ಬೈಬಲನ್ನೂ ಮತ್ತೆ ಮತ್ತೆ ಓದಿ ಮುಗಿಸಿದ. ಮನೆಯವರು ಯಾರಾದರೂ ಕೇಳಲು ಬಂದರೆ ಗದ್ಗದ ಕಂಠದಿಂದ ಬೈಬಲನ್ನು ಓದುತ್ತಿದ್ದ. ಹುಡುಗರು ಹಂಗಿಸಿದಾಗ ತಾನು ಅಂಜುಬುರುಕನಲ್ಲವೆಂದೂ, ತನ್ನಲ್ಲಿ ಶಕ್ತಿ ಇದೆ ಎಂದೂ, ಸಾಮರ್ಥ್ಯದ ಕೆಲಸವೊಂದನ್ನು ಮಾಡಿ ಅವರೆಲ್ಲರೂ ಬೆರಗಾಗುವಂತೆ ಮಾಡಬೇಕೆಂದೂ ಬಯಸಿದ. ಒಂದುದಿನ, ತೀರ ಛಲಹುಟ್ಟಿ, ಎಲ್ಲ ಹುಡುಗರೂ ನೋಡುತ್ತಿದ್ದ ಹಾಗೆ ನಾಲ್ಕಾರು ಬೆಂಕಿ ಕಡ್ಡಿಗಳನ್ನು ಗೀಚಿ ಅಂಗೈಯಲ್ಲಿ ಇಟ್ಟುಕೊಂಡ. ಉರಿಯುತ್ತಿದ್ದರೂ ಕದಲದೆ ಹಾ ಹೂ ಎನ್ನದೆ ಅವು ಆರುವವರೆಗೂ ಹಿಡಿದಿದ್ದು ಬಿಸಾಡಿದ. ಇಂತಹ

---

* ಈ ಪ್ರಬಂಧವು ೨೭—೮—೪೨ರಲ್ಲಿ ಮೈಸೂರು ಆಕಾಶವಾಣಿಯಲ್ಲಿ ಮಾಡಿದ ಭಾಷಣವನ್ನು ವಿಸ್ತರಿಸಿ ಬರೆದುದು.

ಗಂಡಸುತನ ಮತ್ತು ಕೆಚ್ಚೆದೆಗಳಿರುವುದೊಂದೇ ಲೋಕದಲ್ಲಿ ಮರ್ಯಾದೆ ಹಿರಿಯತನಗಳನ್ನು ಪಡೆಯಲು ಉಪಾಯವೆಂದು ಕಂಡುಕೊಂಡನು. ಸಣ್ಣ ವಯಸ್ಸಿನಲ್ಲಿ ಇವನಿಗಾದ ತಿರಸ್ಕಾರದ ಅನುಭವಗಳು ಇವನ ಮನಸ್ಸನ್ನು ಕಲ್ಲಾಗಿ ಮಾಡಿದುವು. ಜೀವನದ ಉದ್ದೇಶವೇ ಇದೆಂದು ಮನಗಂಡನು. ಮುಂದಿನ ಈತನ ಶಕ್ತಿ ಸಿದ್ಧಾಂತಕ್ಕೆ ಚಿಕ್ಕತನದಲ್ಲೇ ಅಂಕುರಾರ್ಪಣವಾಯಿತು.

ದೈನ್ಯಾನುಸಂಧಾನವನ್ನೇ ಪ್ರಧಾನ ಧರ್ಮವೆಂದು ಬೋಧಿಸುತ್ತಿದ್ದ ಕ್ರೈಸ್ತ ಧರ್ಮದಲ್ಲಿ ಈತನಿಗೆ ನಂಬಿಕೆ ತಪ್ಪಿದುದು ಇವನ ಹದಿನೆಂಟನೆಯ ವಯಸ್ಸಿನಲ್ಲಿ. ಚಿಕ್ಕಂದಿನಲ್ಲಿ ಬಹು ಶ್ರಮದಿಂದ ಇವನ ಮೇಲೆ ಹೊದಿಸಿದ್ದ ಮತದ ಹೊದಿಕೆ ಸರಿಯಿತು. ಮತವೆಂದರೆ ಉರಿಯುವಂತಹ ಸಿಟ್ಟು ಇವನನ್ನು ಆವರಿಸಿತು. ಮೊದಲು ಕ್ರೈಸ್ತ ಧರ್ಮ ಒಂದನ್ನೇ ನಂಬಿಕೊಂಡಿದ್ದ ನೀಚ್ಛೆಗೆ ಆ ಧರ್ಮದಲ್ಲಿ ನಂಬಿಕೆ ತಪ್ಪಿದ ಮೇಲಂತೂ ಬೇರೆ ಆಸರೆಯೇ ಇಲ್ಲದಂತಾಯಿತು. ನಾಸ್ತಿಕತನದಿಂದ ವಿಷಯ ಸುಖಗಳ ಕಡೆಗೆ ಇವನ ಮನಸ್ಸು ಹರಿಯಿತು. ಕಾಲೇಜಿನಲ್ಲಿ ತನ್ನ ಭೋಗಪ್ರಿಯರಾದ ಗೆಳೆಯರೊಡನೆ ಸೇರಿ ಹಿಂದೆ ಮನಸ್ಸಿನಲ್ಲಿ ಕೂಡ ಭಾವಿಸಲು ಹಿಂಜರಿಯುತ್ತಿದ್ದ ಧೂಮಪಾನ ಸುರಾಪಾನಗಳನ್ನು ಅಭ್ಯಾಸಮಾಡಿದನು. ಗಂಡಸುತನದ ಲಕ್ಷಣಗಳಿವುಗಳೆಂದು ಭಾವಿಸಿದನು. ಆದರೆ ಬಹುಬೇಗ ಭೋಗಜೀವನದಲ್ಲಿ ಜುಗುಪ್ಸೆ ಹುಟ್ಟಿತು. ಅಲ್ಲಿಯೂ ಮನಸ್ಸಿಗೆ ತೃಪ್ತಿ ಸಿಗಲಿಲ್ಲ.

ಈ ಸಮಯದಲ್ಲಿ ತನ್ನ ಕದಡಿದ ಮನಸ್ಸಿಗೆ ಶಾಂತಿಯನ್ನು ನೀಡಿದ ಷೋಪನ್ ಹಾರ್ (Schopenhauer) ಎಂಬ ಪ್ರಸಿದ್ಧ ಜರ್ಮನ್ ದಾರ್ಶನಿಕನ ಗ್ರಂಥ ಈತನ ಕೈಗೆ ಸಿಕ್ಕಿತು. "ಸೃಷ್ಟಿ ಇಚ್ಛಾಶಕ್ತಿಯ ಆವಿಷ್ಕಾರ" (*World as Will and Idea*) ಎಂಬ ಈ ಗ್ರಂಥವನ್ನು ಓದಿದೊಡನೆ ತನಗೆ ಅನುಗುಣವಾದ ದರ್ಶನ ಇಲ್ಲಿ ದೊರಕಿತೆಂದು ಮನಗಂಡನು. ಈ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ಕಂಡುಕೊಂಡನು. ಷೋಪನ್‌ಹಾರನ ಪ್ರತಿಯೊಂದು ವಾಕ್ಯವೂ ಇವನ ಹೃದಯಕ್ಕೆ ನಾಟಿತು. ಜಗತ್ತು ಆತ್ಮನ ಮನಸ್ಸಿನಲ್ಲಿ ಇಚ್ಛಾರೂಪವಾಗಿ ಉದ್ಭವಿಸಿದ ಭಾವತರಂಗ (Idea) ಎಂಬ ಷೋಪನ್‌ಹಾರನ ತತ್ವ ಇವನಿಗೆ ಒಪ್ಪಿತು. ನೀಚ್ಛೆಯ ಮಾನಸಿಕ ಪ್ರಪಂಚವು ಅಲ್ಲಿ ಕಲ್ಲೋಲವಾಯಿತು. ಆ ಪ್ರಚಂಡಭಾವನಾತರಂಗಗಳ ವೇಗದಲ್ಲಿ ಇವನ ಆತ್ಮ ಕೊಚ್ಚಿಹೋಯಿತು. ಈ ವಿಚಾರ ವಿಮರ್ಶೆಗಳ ಮುಂದೆ ಯಾವುವೂ ನಿಲ್ಲಲಾರದೇ ಹೋದುವು. ಮಾನವನು ಬಹು ಶ್ರಮದಿಂದ ಕಟ್ಟಿದ್ದ ಮತಗಳು ಉರುಳಿದವು; ಧಾರ್ಮಿಕ ಭಾವನೆಗಳು ಚಂಡಾಡಿದವು; ಜಗತ್ತು ಗೌರವದಿಂದಲೂ ಪೂಜ್ಯಭಾವದಿಂದಲೂ ಆರಾಧಿಸುತ್ತಿದ್ದ ಧರ್ಮಪ್ರವಾದಿಗಳನ್ನು ಮರುಳರೆಂದೂ ಶಕ್ತಿಹೀನರೆಂದೂ

ತಮ್ಮ ಶಕ್ತಿಹೀನತೆಯನ್ನೇ ಧರ್ಮವಾಗಿ ಬೋಧಿಸಿದ ಮೂಢರೆಂದೂ ಹಳಿದನು. ತನ್ನೊಳಗೆ ಕುದಿಯುತ್ತಿದ್ದ ಭಾವನೆಗಳನ್ನು ಹೊರಗೆಳೆದು ಸಮಾಜದಲ್ಲಿ ಕ್ರಾಂತಿಯನ್ನುಂಟುಮಾಡುವ ಪ್ರಯತ್ನವನ್ನು ಬೇರೊಂದು ವಿಧದಲ್ಲಿ ಸಾಧಿಸಲಾರದವನಾಗಿ ಬರವಣಿಗೆಯ ರೂಪದಲ್ಲಿ ಹೊರಗೆಡಹಿದನು. ಇವನ ಬರಹವನ್ನು ಓದಿದವರಿಗೆ ಇವನೇನು ಉನ್ಮತ್ತನೋ ಇಲ್ಲ ವಿಭೂತಿ ಪುರುಷನೋ ಎಂಬ ಸಂದೇಹ ಹುಟ್ಟಿತು. ಬಲ, ಅತಿಬಲ, ಮಹಾಬಲ ಇವುಗಳಿಗಾಗಿ ಹಾತೊರೆಯುವ ಶಕ್ತಿಯ ಉಪಾಸಕನಾದನು. ತಾನು ಕಂಡುಕೊಂಡ ಶಕ್ತಿಸಿದ್ಧಾಂತವನ್ನು ಪ್ರಪಂಚಕ್ಕೆ ಸಾರಿ ಕೃತಕೃತ್ಯನಾದನು.

ಸಿದ್ಧಾಂತದಲ್ಲಿ ಶಕ್ತಿಯ ಉಪಾಸಕನಾದ ನೀಚೆ ಕಾರ್ಯಪ್ರಪಂಚದಲ್ಲಿಯೂ ಅದರ ಸಾಧಕನಾಗಲು ಬಯಸಿ ತನ್ನ ಇಪ್ಪತ್ತುಮೂರನೆಯ ವಯಸ್ಸಿನಲ್ಲಿ ಸೈನ್ಯಕ್ಕೆ ಸೇರಿದನು. ಈ ಸೈನಿಕವೃತ್ತಿ ಬಹಳ ಬೇಗ ಕೊನೆಗಂಡಿತು. ಕುದುರೆಯ ಮೇಲಿಂದ ಬಿದ್ದು ಎದೆಗೆ ಬಲವಾದ ಪೆಟ್ಟು ತಗಲಿ ಸೈನಿಕವೃತ್ತಿಯನ್ನು ಬಿಡಬೇಕಾಯಿತು. ಇದಾದ ಮೇಲೆ ಇದರಿಂದ ಸಂಪೂರ್ಣವಾಗಿ ಚೇತರಿಸಿಕೊಳ್ಳಲೇ ಇಲ್ಲ. ಆದರೆ ಅದರ ವ್ಯಾಮೋಹ ಮಾತ್ರ ಮನಸ್ಸಿನಲ್ಲಿ ಉಳಿಯಿತು. ಸೈನಿಕನ ಪರಾಕ್ರಮ, ಮೃತ್ಯುವನ್ನು ಎದುರಿಸುವ ಕೆಚ್ಚು, ನಾಯಕನೊಬ್ಬನನ್ನು ಏನಾದರೂ ಸರಿಯೆ ಹಿಂಬಾಲಿಸಿ ಹೋಗುವ ಶಿಸ್ತು, ಕಷ್ಟಸಹಿಷ್ಣುತೆ, ಮುಖ್ಯವಾಗಿ ಶೌರ್ಯಪ್ರದರ್ಶನಕ್ಕೆ ಅವಕಾಶ— ಇವೆಲ್ಲವೂ ಅತ್ಯುತ್ತಮ ಗುಣಗಳೆಂದು ಭಾವಿಸಿದನು.

ಯೋಧಜೀವನ ತಪ್ಪಿತು. ಇನ್ನಾದರೂ ಮಾಡುವುದೇನು? ವಿಶ್ವವಿದ್ಯಾನಿಲಯ ಒಂದರಲ್ಲಿ ಭಾಷಾಶಾಸ್ತ್ರದ ಅಧ್ಯಾಪಕನಾದನು. ಶಾಸ್ತ್ರವ್ಯಾಸಂಗದಲ್ಲಿ ನಿರತನಾಗಿದ್ದ ಇವನಿಗೆ ಬಿಡುವಾದಾಗ ಸಂಗೀತದ ಅಭ್ಯಾಸದಲ್ಲಿ ಕಾಲ ಉರುಳಿತು. ಪಿಯಾನೋ ನುಡಿಸುವುದನ್ನು ಕಲಿತ. ಸಂಗೀತವಿಲ್ಲದ ಜೀವನ ವ್ಯರ್ಥವೆಂದ. ಆದರೆ ಇವನಿಗೆ ಬೇಕಾಗಿದ್ದ ಸಂಗೀತ ಕ್ಷಾತ್ರಸಂಗೀತ, ವೀರರಸ ಪ್ರಧಾನವಾದದ್ದು. ಕ್ಷಾತ್ರ ಸಂಗೀತ ನಿಪುಣರಲ್ಲಿ ಇವನಿಗೆ ಅಚ್ಚುಮೆಚ್ಚಾದವನು ವಾಗ್ನರ್ (Wagner) ಎಂಬ ಪ್ರಸಿದ್ಧಗಾಯಕ. ಷೋಪನ್‌ಹಾರ್ ಎಂಬ ದಾರ್ಶನಿಕನನ್ನು ಅತ್ಯುತ್ಸಾಹದಿಂದ ಹೊಗಳಿದಂತೆಯೇ ವಾಗ್ನರ್‌ನನ್ನು ಸಂಗೀತ ಸಾರ್ವಭೌಮನೆಂದು ಕೊಂಡಾಡಿದನು.

ಇವನು ತನ್ನ ಮೊತ್ತಮೊದಲಿನ ಗ್ರಂಥವನ್ನು ಬರೆದದ್ದು ವಾಗ್ನರನ ಸ್ಫೂರ್ತಿಯಿಂದ. ಈ ಗ್ರಂಥಕ್ಕೆ "ರೌದ್ರರಸದ ಸಂಭವ" (*The Birth of Tragedy*) ಎಂದು ಹೆಸರಿಟ್ಟನು. ವಾಣಿಯ ವೀಣಾವೇದಿಕೆಯಿಂದ ಪ್ರಳಯರುದ್ರನ ನಾಟ್ಯಲೀಲೆ ಹೊರಹೊಮ್ಮಿದುದು ಈ ಗ್ರಂಥದ ಮುಖ್ಯ ವಿಷಯವೆಂದು ಪ್ರತಿಪಾದಿಸಿದನು. ಆ ಗ್ರಂಥದ ತಾತ್ಪರ್ಯವಿದು :

ಗ್ರೀಕರು ಕಲಾನಿಪುಣರೆಂದೂ ಸೌಂದರ್ಯೋಪಾಸಕರೆಂದೂ ಹೆಸರುಗೊಂಡಿ ರಷ್ಟೆ. ಇವರ ಕಲೋಪಾಸನೆಯ ಅಧಿದೇವತೆಗಳು ಇಬ್ಬರು—ಡಯಾನಿಸಸ್ (Dionysus) ಮತ್ತು ಅಪೋಲೊ (Apollo). ಡಯಾನಿಸಸ್ ಭೋಗಜೀವನದ ಅಧಿದೇವತೆ; ಅಪೋಲೊ ಯೋಗಜೀವನದ ಅಧಿದೇವತೆ. ಡಯಾನಿಸಸನ ಮಾರ್ಗ ಪುಷ್ಟಿಮಾರ್ಗ. ಇಂದ್ರಿಯರಂಜಕಗಳಾದ ಸಾಹಿತ್ಯ, ಸಂಗೀತ, ಶೃಂಗಾರ, ನಾಟ್ಯ, ಭೋಜನವಸನಗಳು ಡಯಾನಿಸಸನ ಅನುಯಾಯಿಗಳಿಗೆ ಪ್ರಿಯವಾದುವು. ಶಾಂತಿ ಮಾರ್ಗ ಸಾಧನವಾದ ಸಾಹಿತ್ಯಸಂಗೀತಕಲೆಗಳು, ಜಪತಪಧ್ಯಾನಾದಿಗಳು, ವೈರಾಗ್ಯ ಪ್ರಸನ್ನತೆಗಳು ಅಪೋಲೊವಿನ ಅನುಯಾಯಿಗಳಿಗೆ ಹಿತವಾದುವು. ಒಂದು ಪ್ರವೃತ್ತಿ ಪರವಾದುದು, ಮತ್ತೊಂದು ನಿವೃತ್ತಿಪರವಾದುದು. ಒಂದು ಪುರುಷಶಕ್ತಿ, ಮತ್ತೊಂದು ಸ್ತ್ರೀಶಕ್ತಿ. ಹೀಗೆ ಈ ಎರಡು ಧ್ಯೇಯಗಳು ಪರಸ್ಪರ ವಿರುದ್ಧವಾಗಿ ಕಂಡರೂ ಉತ್ಕೃಷ್ಟವಾದ ಗ್ರೀಕರ ಕಲೆಯಲ್ಲಿ ಇವುಗಳ ಸಮನ್ವಯ ಕಂಡುಬಂದಿತು. ಯೋಗ ಭೋಗಗಳ ಸಾಮರಸ್ಯ, ಶಾಂತಿ ಶೃಂಗಾರಗಳ ಪರಸ್ಪರಾನುಸರಣ, ಪ್ರವೃತ್ತಿನಿವೃತ್ತಿ ಗಳ ಸಂಯೋಜನ, ಸ್ತ್ರೀಶಕ್ತಿ ಪುರುಷಶಕ್ತಿಗಳ ಮೇಳ—ಇವುಗಳಿಂದ ಗ್ರೀಕರ ಕಲಾ ನೈಪುಣ್ಯವು ಸೌಂದರ್ಯದ ಕಣಿಯಾಗಿತ್ತು. ಆದರೆ ಅಪೋಲೊವಿನ ಅಂಶ ಹೆಚ್ಚುತ್ತಾ ಡಯಾನಿಸಸನ ಅಂಶ ಗ್ರೀಕರ ಸಂಸ್ಕೃತಿಯಲ್ಲಿ ಕಡಮೆಯಾಗುತ್ತಾ ಬಂತು. ಗ್ರೀಕರು ತೇಜೋಹೀನರಾದರು. ಅವರಲ್ಲಿ ಪೌರುಷಪ್ರಯುಕ್ತವಾದ ಡಯಾನಿಸಸನ ಅಂಶ ಕಡಮೆಯಾಯಿತು. ಇದರಿಂದ ಜಗದ್ವಿಖ್ಯಾತವಾದ ಗ್ರೀಕರ ಸಂಸ್ಕೃತಿ ಅಳಿಯಿತು. ಇದು ಗ್ರೀಕ್ ಸಂಸ್ಕೃತಿಯ ದುರಂತ ನಾಟಕದ ವಸ್ತು. ನಮ್ಮ ಮನಸ್ಸಿನಲ್ಲಿ ತುಂಬಿದ ಕಲ್ಮಷವನ್ನು ತೊಳೆದು ನಮ್ಮನ್ನು ಸ್ವಚ್ಛಮಾಡುವ ಕೆಲಸ ದುರಂತನಾಟಕದ ಉದ್ದೇಶವೆಂದು ಅರಿಸ್ಟಾಟಲ್ ಹೇಳಿದಾನೆ. ಇದರಿಂದ ಜರ್ಮನ್ ಜನಾಂಗವು ಸಕಾಲದಲ್ಲಿ ಪಾಠ ಕಲಿಯುವುದಿದೆ. ಜರ್ಮನರು ನಿವೃತ್ತಿಯ ದಾರಿಯನ್ನು ಹಿಡಿಯ ದಿರಲಿ. ಡಯಾನೀಸಸನ ಪಂಥವನ್ನು ಹಿಡಿದು ತಮ್ಮ ಜೀವನದ ಉದ್ದೇಶವನ್ನು ನೆರವೇರಿಸಿಕೊಳ್ಳಲಿ. ಡಯಾನಿಸಸನ ಪ್ರವೃತ್ತ್ಯಾತ್ಮಕ ಪುರುಷಶಕ್ತಿ ಜರ್ಮನಲ್ಲಿ ಹೊಸತಾಗಿ ಅವತರಿಸಲಿ. ಇದರಿಂದ ಹೊಸ ಜರ್ಮನ್ ಸಂಸ್ಕೃತಿಯ ಉದಯ ವಾಗುವುದಿದೆ. ಇದರ ಮುಂಬೆಳಗನ್ನು ವಾಗ್ನರನ ವೀರಾವೇಶಯುತವಾದ ಕ್ಷಾತ್ರ ಸಂಗೀತದಲ್ಲಿ ಕಾಣುತ್ತೇವೆ. ಈ ನವೋದಯ (Renaissance) ಸಂಗೀತದಿಂದ ಜರ್ಮನರ ರೌದ್ರಸಂಸ್ಕೃತಿ ಹುಟ್ಟಲಿ. ವೀರಾದಿವೀರರ ರಣರಂಗ ನಮ್ಮದು. ಇದರಿಂದ ಜಗತ್ತಿನ ಒಡೆಯತನ ನಮ್ಮದು—ಹೀಗೆಂದು ನೀಚ್ಚೆ ಆ ರುದ್ರಗ್ರಂಥದಲ್ಲಿ ಬರೆದಿಟ್ಟನು.

ಸ್ವಲ್ಪ ಕಾಲವಾದನಂತರ ವಾಗ್ನರನು ಮಾನವರ ಎದೆಯನ್ನು ಕರಗಿಸುವ ಪ್ರೇಮ, ಕನಿಕರ, ಸ್ತ್ರೀಸ್ವಭಾವಾನುಗುಣವಾದ ಮಾರ್ದವ—ಇವುಗಳನ್ನು ತನ್ನ ಸಂಗೀತದಲ್ಲಿ ಬೆರಸಿ ಅದನ್ನು ಕೇಳಿದ ಜನರು ಕಣ್ಣೀರಿಡುವಂತೆ ಮಾಡಿದನು. ಮೊದಲು ವೀರರಸ ಪ್ರಧಾನವಾದ ಕೃತಿಗಳನ್ನೇ ರಚಿಸಿ ಜನರನ್ನು ಹುರಿದುಂಬಿಸುತ್ತಿದ್ದ ವಾಗ್ನರನು ಈಗ ಕರುಣರಸಕ್ಕೆ ಪ್ರಾಶಸ್ತ್ಯ ಕೊಟ್ಟನು. ನೀಚ್ಚೆ ಕೆಲಸ ಕೆಟ್ಟಿತೆಂದು ಕೈಹಿಸುಕಿಕೊಂಡನು. ವಾಗ್ನರನಲ್ಲಿಟ್ಟಿದ್ದ ಇವನ ನಿರೀಕ್ಷೆಗಳು ನಿಷ್ಫಲವಾದುವು. ನೀಚ್ಚೆಯ ಸ್ವಭಾವವೂ ಮೃದುವಾದ ಸ್ವಭಾವವೇ. ಆದರೆ ಈ ಮಾರ್ದವವು ಬಲಹೀನತೆಯ ಗುರುತೆಂದು ಭಾವಿಸಿ ಅದನ್ನು ತೊಡೆದುಹಾಕುವುದು ಯುಕ್ತವೆಂದು ನಂಬಿದ್ದನು. ವೀರನಾದವನು, ಧೀರನಾದವನು ಇಂತಹ ಹೃದಯದೌರ್ಬಲ್ಯಕ್ಕೆ ಎಡೆಕೊಡಕೂಡದೆಂದು ತನ್ನೊಳಗೇ ತರ್ಕಿಸಿಕೊಂಡನು. ಕಠೋರತೆ ಆವಶ್ಯಕವಾದ ಕಾಲದಲ್ಲಿ ಹೃದಯದೌರ್ಬಲ್ಯಕ್ಕೆ ಬೆಂಬಲಕೊಡುವ ಸಂಗೀತವನ್ನು ನಿರ್ಮಾಣಮಾಡಿದನೆಂದು ವಾಗ್ನರನ ಮೇಲೆ ರೇಗಿಬಿದ್ದನು. ಎಲ್ಲರೂ ಕೊಂಡಾಡುತ್ತಿದ್ದ ವಾಗ್ನರನನ್ನು ತ್ಯಜಿಸಿದನು; ಅವನನ್ನು ವಾಚಾಮಗೋಚರವಾಗಿ ಬೈದನು.

ನೀಚ್ಚೆಯ ಕದಡಿದ ಚಿತ್ತಕ್ಕೆ ಕಲೋಪಾಸನೆಯಲ್ಲಿ ಶಾಂತಿ ಸಿಕ್ಕದಂತಾಯಿತು. ತತ್ವಚಿಂತನೆಯಲ್ಲಿ ಮನಸ್ಸನ್ನು ಸ್ತಿಮಿತಕ್ಕೆ ತರಲು ಪ್ರಯತ್ನಿಸಿದನು. ಮನಸ್ಸಿನ ಅಶಾಂತಿಯಿಂದ ದೇಹದ ಆರೋಗ್ಯವೂ ಕೆಟ್ಟಿತು. ಹಾಸಿಗೆ ಹಿಡಿಯುವಷ್ಟು ರೋಗ ಬಲಿಯಿತು. ಒಂದು ದಿನ, ಸಾವು ಸಮೀಪಿಸಿತೆಂದು ಭಾವಿಸಿ, ತನ್ನ ಸಹೋದರಿಯನ್ನು ಕರೆದು "ನಾನು ಸತ್ತಮೇಲೆ ನನ್ನ ಶವದ ಸುತ್ತಲೂ ನನ್ನ ಆಪ್ತಸ್ನೇಹಿತರಲ್ಲದೆ ಇತರರ ಗುಂಪು ಸೇರದಂತೆ ನೋಡಿಕೊಳ್ಳುವೆನೆಂದು ಮಾತುಕೊಡು. ನನ್ನ ಗೋರಿಯ ಸಮೀಪದಲ್ಲಿ ನಿಂತು ಪುರೋಹಿತನು ಇಲ್ಲದ ಸಲ್ಲದ ಸುಳ್ಳುಪೊಳ್ಳು ಮಾತುಗಳನ್ನು ಹೇಳದಿರಲಿ; ಸತ್ಯನಿಷ್ಠನಾದ ವ್ರಾತ್ಯನಾಗಿಯೇ ('Honest pagan') ನನ್ನನ್ನು ಸಾಯಬಿಡಿರಿ" ಎಂದನು. ಆದರೆ ರೋಗ ವಾಸಿಯಾಯಿತು. ಮನಸ್ಸೂ ಸ್ವಲ್ಪಮಟ್ಟಿಗೆ ಸ್ತಿಮಿತಕ್ಕೆ ಬಂದಿತು. ಅನಾರೋಗ್ಯದಿಂದ ಆರೋಗ್ಯದ ಮಹತ್ವದ ಅರಿವಾಯಿತು. ದೌರ್ಬಲ್ಯದಿಂದ ಬಲದ ಮಹಿಮೆಯನ್ನು ಅರಿತನು. ತಿರಸ್ಕಾರದಿಂದ ಪುರಸ್ಕಾರದ ಬೆಲೆ ತಿಳಿಯಿತು. ಆರೋಗ್ಯ, ಬಲ, ಪುರಸ್ಕಾರ ಇವುಗಳೇ ಜೀವನದಲ್ಲಿ ಮುಖ್ಯವೆಂದು ತೀರ್ಮಾನಮಾಡಿ ಇವುಗಳ ಮೇಲ್ಮೆಯೇ ತಿರುಳಾದ ತನ್ನ ಶಕ್ತಿ ಸಿದ್ಧಾಂತವನ್ನು ಕಟ್ಟಿದನು. ಆರೋಗ್ಯ ಸಾಧನೆಗಾಗಿ ಆಲ್ಪ್ಸ್ ಪರ್ವತಸ್ತೋಮದಲ್ಲಿ ಕೆಲಕಾಲ ಉಳಿದನು. ಪರ್ವತಾಗ್ರದ ಮೇಲೆ ನಿಂತು ಪ್ರಕೃತಿಯ ರೂಪಾಂತರಗಳನ್ನು ಅನುದಿನವೂ ಕಾಣುತ್ತಿದ್ದ ನೀಚ್ಚೆಗೆ ಒಂದು ಹೊಸ ಸ್ಫೂರ್ತಿ ಉಂಟಾಯಿತು. ಆ ಸ್ಫೂರ್ತಿ

ಯ ಫಲವೇ "ಇಂತೆಂದನಾ ಜ಼ಾರತುಷ್ಟ್ರಂ" (*Thus Spake Zarathushtra*) ಎಂಬ ಗ್ರಂಥ. ಈ ಗ್ರಂಥಕ್ಕೆ ಜ಼ಾರತುಷ್ಟ್ರನ ಹೆಸರನ್ನಿಟ್ಟಿದ್ದಕ್ಕೆ ಅನೇಕ ಕಾರಣ ಗಳಿದ್ದಿರಬಹುದು. ಬಹುಶಃ 'ಜ಼ಾರತುಷ್ಟ್ರ' ಎಂಬ ಮಾತಿನಲ್ಲಿ ಐರೋಪ್ಯರು ಕಂಪಿ ಯದ ಶಬ್ದಶಕ್ತಿ ಇದೆ ಎಂದು ಭಾವಿಸಿರಬಹುದು. ಅಥವಾ ಆತನ ತತ್ವಗಳಲ್ಲಿ ಕೆಲ ಅಂಶಗಳು ನೀಜ಼ೆಗೆ ಒಪ್ಪಿಗೆಯಾಗಿದ್ದಿರಬಹುದು. ಅಂತು ಓದುಗರ ಮನಸ್ಸಿನ ನಾಟುವ ಹೆಸರು ಇದಾಯಿತು. ಜ಼ಾರತುಷ್ಟ್ರನಿಂದ ತನಗೆ ಸ್ಫೂರ್ತಿ ಬಂದ ವಿಷಯ ವಾಗಿ ಈ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

ದಿಗಂತದೃಷ್ಟಿಯಾಗಿ ನಿಂತೆ, ಪರ್ವತಾಗ್ರದಲಿ ;
ಕಾದೆ, ಕಾದೆ, ಕಾದೆ—ಯಾವುದಕೊ ನಾನರಿಯೆ.
ನೆಳಲೊಮ್ಮೆ, ಬೆಳಕೊಮ್ಮೆ, ಸುಳಿದು ನಲಿಯುತಿರೆ, ಪುಣ್ಯಪಾಪಗಳ
ಸೋಂಕಿಲ್ಲದ ಆನಂದವನನುಭವಿಸುತಿದ್ದೆ.
ಅಲ್ಲಿ ಹಗಲಿತ್ತು.
ಅಲ್ಲಿ ಕನ್ನಡಿಯ ತೆರನ ತಿಳಿಗೊಳವಿತ್ತು ;
ಅಲ್ಲಿ ನಡುವಗಲಿನ ತಿಳಿಬಾನಿತ್ತು.
ಇಂತು ಕೊನೆಮೊದಲಿಲ್ಲದ ಕಾಲದ ತೇದುರುಳಿತ್ತು.
ಅಲ್ಲಿ, ಬಾಳ್‌ಗೆಳೆಯ, ತೆಕ್ಕನೆ ಒಂದೆರಡಾಯ್ತು ;
ಬಳಿಸುಳಿದುದು ಜ಼ಾರತುಷ್ಟ್ರನ ಮಹಚ್ಛಾಯೆ !

ತನ್ನ ಹೊಸ ಸಿದ್ಧಾಂತವನ್ನು ಜ಼ಾರತುಷ್ಟ್ರನ ಹೆಸರಿನಲ್ಲಿ ಸಾರಿದ. ಜ಼ಾರತುಷ್ಟ್ರನ ಪ್ರಾಚೀನ ಇರಾನಿಯರ ಗುರುದೇವ, ಮತಸ್ಥಾಪಕ. ಈತನ ಉಪದೇಶದ ಸಾರಾಂಶ ವಿದು : ಜಗತ್ತಿನಲ್ಲಿ ನಮಗೆ ಕಾಣುವುದು ಪಾಪಪುಣ್ಯಗಳ ದ್ವಂದ್ವಯುದ್ಧ. ದೇವ ದಾನವರ ಹೋರಾಟ. ಈ ಹೋರಾಟದಲ್ಲಿ ಮಾನವರೆಲ್ಲರೂ ಭಾಗಿಗಳು. ಮನೋ ವಾಕ್ಕಾಯಗಳಲ್ಲಿ ಪರಿಶುದ್ಧರಾಗಿ ದೇವತ್ವದ ಕಡೆಗೆ ಬಾಗಿದ ಮಾನವರು ಕೆಲವರು ಆಸುರೀಸ್ವಭಾವದವರು ಮತ್ತೆ ಕೆಲವರು. ಇವರಿಬ್ಬರಿಗೂ ಹೋರಾಟ ಸಂತತ ವಾಗಿ ನಡೆಯುವುದೇ ಜಗತ್ತಿನ ಗತಿ. ಈ ಹೋರಾಟದಲ್ಲಿ ಧರ್ಮದ ಗೆಲವಿಗಾಗಿ ಅಧರ್ಮದ ಸೋಲಿಗಾಗಿ ಪ್ರಯತ್ನಿಸುವುದು ಮಾನವರ ಧ್ಯೇಯವಾಗಿರಬೇಕು. ಇದಕ್ಕಾಗಿ ಬೇಕಾದ ಸಾಮರ್ಥ್ಯವನ್ನು ಮಾನವನು ಗಳಿಸಬೇಕು. ಯಾವುದು ಹೇಗಾದರೂ ಹೋಗಲಿ ಎಂದು ಕೈಕಟ್ಟಿ, ಹಣೆಯಬರಹವೆಂದು ಕುಳಿತುಕೊಳ್ಳು ವುದು ಪುರುಷಲಕ್ಷಣವಲ್ಲ. ಸಾಹಸಜೀವನ ನಮ್ಮದಾಗಬೇಕು. ಇದರಲ್ಲಿ ಆಪಾಯ ಉಂಟು. ಆದರೆ ಅದಕ್ಕಾಗಿ ಹಿಂಜರಿಯಬಾರದು. ಸತತವಾದ ಉದ್ಯೋಗವೇ ಪುರುಷಲಕ್ಷಣ. ನಿವೃತ್ತಿಮಾರ್ಗಕ್ಕಿಂತಲೂ ಪ್ರವೃತ್ತಿಮಾರ್ಗವೇ ಶ್ರೇಷ್ಠ. ಇದು

ಜ಼ಾರತುಷ್ಟ್ರನ ಮತದ ಮುಖ್ಯಾಂಶಗಳು. ಇವನ್ನು ಸೂತ್ರವಾಗಿಟ್ಟುಕೊಂಡು ನೀಜ಼ೆ ತನ್ನ ಸಿದ್ಧಾಂತವನ್ನು ರಚಿಸಿದನು.

ನೀಜ಼ೆ ಭಾವಿಸಿದ ಜ಼ಾರತುಷ್ಟ್ರನು ಮೂವತ್ತು ವಯಸ್ಸಿನ ಯುವಕ. ಪರ್ವತದ ಗುಹೆಯೊಂದರಲ್ಲಿ ಧ್ಯಾನಾಸಕ್ತನಾಗಿದ್ದು ಸಿದ್ಧಿ ಪಡೆದವನಾಗಿ ಲೋಕದ ಜನರಿಗೆ ಉಪದೇಶ ಮಾಡಲು ಕೆಳಗಿಳಿದುಬರುತ್ತಾನೆ. ಜನರ ಗುಂಪು ಒಂದು ಕಡೆ ಸೇರಿದೆ. ಅಲ್ಲಿ ಡೊಂಬರವನೊಬ್ಬ ಅಪಾಯದ ಆಟವೊಂದನ್ನು ತೋರಿಸುತ್ತಿದ್ದಾನೆ. ಎತ್ತರದಲ್ಲಿ ಒಂದು ಹಗ್ಗ ಕಟ್ಟಿ ಹಗ್ಗದ ಮೇಲೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ನಡೆಯುತ್ತಿರುತ್ತಾನೆ. ಎಲ್ಲರೂ ಎವೆಯಿಕ್ಕದೆ ನೋಡುತ್ತಿದ್ದ ಹಾಗೆ ಜಾರಿ ಕೆಳಗೆ ಬೀಳುತ್ತಾನೆ. ಮೃತಿಹೊಂದುತ್ತಾನೆ. ಇದನ್ನು ನೋಡುತ್ತಿದ್ದ ಜ಼ಾರತುಷ್ಟ್ರನು ದಾರಿ ಬಿಡಿಸಿಕೊಂಡು ಅವನೆಡೆಗೆ ಬಂದು ಅವನನ್ನು ಹೆಗಲ ಮೇಲೆ ಹಾಕಿಕೊಂಡು ನಡೆಯುತ್ತಾನೆ. ಜನರು ಮುಗ್ಧರಾಗಿ ನೋಡುತ್ತಿರಲು, "ನಿನ್ನ ಜೀವನವೀಗ ಸಾಹಸ ಜೀವನ, ಆದ್ದರಿಂದ ನನ್ನ ಕೈಯಿಂದಲೇ ನಿನಗೆ ಅಂತ್ಯಕ್ರಿಯೆಯನ್ನು ಸಲ್ಲಿಸುತ್ತೇನೆ" ಎನ್ನುತ್ತಾನೆ. "ಅಪಾಯದ ಬಾಳನ್ನು ಬಾಳಿ!" ("Live dangerously") ಎಂದು ಅವರಿಗೆ ತನ್ನ ವೀರಸಂದೇಶವನ್ನು ಸಾರುತ್ತಾನೆ.

ಈ ಗ್ರಂಥವನ್ನು ತೆರೆಯುತ್ತಿದ್ದ ಹಾಗೆ ಈ ವಾಕ್ಯ ನಮ್ಮ ಕಣ್ಣಿಗೆ ಬೀಳುತ್ತದೆ:

> ಕೇಳಿರೈ, ಸೋದರರೆ, ಮರ್ತ್ಯವ ನೆಚ್ಚಿ ಬಾಳಿ.
> ಕಿವಿಗೊಡದಿರಿ ಅಮರ್ತ್ಯಭೋಗದ ಕಟ್ಟುಕತೆಗಳಿಗೆ.
> ತಿಳಿದಿರಲಿ ತಿಳಿಯದಿರಲಿ ಅವರದು ಗರಳಸದೃಶ ಮಿಥ್ಯಾವಾಣಿ.

"ಇಂತೆಂದನಾ ಜ಼ಾರತುಷ್ಟ್ರಂ" ಗ್ರಂಥದ ಮೂಲ ತತ್ವಗಳ ವ್ಯಾಖ್ಯಾನವೇ ನೀಜ಼ೆಯ ಇತರ ಗ್ರಂಥಗಳೆಂದು ಧಾರಾಳವಾಗಿ ಹೇಳಬಹುದು. ಈ ಎಲ್ಲ ಗ್ರಂಥಗಳ ಸಿದ್ಧಾಂತ ಶಕ್ತಿ ಸಿದ್ಧಾಂತ.

ಆ ಶಕ್ತಿ ಸಿದ್ಧಾಂತವನ್ನು "The cult of the Superman" ಎಂದರೆ "ಅತಿಮಾನವ ಪಂಥ" ಎಂದು ಕರೆಯುವ ವಾಡಿಕೆ ಇದೆ. "ಹಿಂದಿನ ದೇವರುಗಳೆಲ್ಲ ಮಡಿದರು. ಅತಿ ಮಾನವನ ಅವತಾರವಾಗುವುದಿದೆ, ಅವನ ಮುಂದಾಳುಗಳು ನಾವು" ಎಂದು ಸಾರಿದನು ನೀಜ಼ೆ. ಈ ಅತಿಮಾನವನಿಗಾಗಿ ಲೋಕ ಕಾಯುತ್ತದೆ ಎಂದು ನೀಜ಼ೆ ದೃಢವಾಗಿ ನಂಬಿದ್ದನು. ಈ ಅತಿಮಾನವನು ಎಂಥವನು? ಎಲ್ಲರನ್ನೂ ತನ್ನ ಹುಟ್ಟುದರ್ಪದಿಂದ ತನ್ನಾಡಳಿತಕ್ಕೆ ಒಳಪಡಿಸಿಕೊಳ್ಳುವ ಸಾಮರ್ಥ್ಯವುಳ್ಳವನು. ಈ ಸಾಮರ್ಥ್ಯದಲ್ಲಿ ಇವನಿಗೆ ಸರಿಗಟ್ಟುವವರು ಇನ್ನಾರೂ ಇರಲಾರರು. ಇಂಥ ಅತಿಮಾನವನಿಗೆ ಅಡಿಯಾಳುಗಳಾಗಿರುವುದರಲ್ಲಿ ಇತರ ಜನರು ತೃಪ್ತಿಪಡೆಯು

ತ್ತಾರೆ. ಅತಿಮಾನವನ ಕೈಂಕರ್ಯವೇ ಇತರ ಜನರ ಶ್ರೇಯೋಜೀವನದ ಸಾ
ಈ ಅತಿಮಾನವನು ಗುಣವಂತ, ವೀರ್ಯವಂತ, ಸರ್ವಜ್ಞ, ಸರ್ವಶಕ್ತ, ಲೋ
ರಕ್ಷಕ. ಇಂತಹ ಅತಿಮಾನವನ ಉದ್ಭವಕ್ಕಾಗಿ ಎಷ್ಟೋ ಜನರು ತಮ್ಮ ಸ್ವಾರ್ಥ
ವನ್ನೂ ಸುಖವನ್ನೂ ಬದಿಗಿಟ್ಟು ದುಡಿಯಲು ಸಿದ್ಧರಾಗಬೇಕು. ಹಾಗಾಗುವು
ರಲ್ಲೇ ಒಂದು ಸಂತೋಷವಿದೆ, ತೃಪ್ತಿಯಿದೆ. ಮಹಾತ್ಮನೊಬ್ಬನ ಪದಾನುಸ
ದಲ್ಲಿಯೇ ತೃಪ್ತಿ ಸಂತೋಷಗಳನ್ನು ಪಡೆಯುವವರೇ ಲೋಕದಲ್ಲಿ ಹೆಚ್ಚು ಮ
ಇರುವರು. ಇದನ್ನು ಮೀರಿದ ಸಂತೋಷ ಅವರಿಗೆ ಬೇರೊಂದಿಲ್ಲ. ಇದೇ ಅ
ತತ್ವ, ಹಿತ, ಪುರುಷಾರ್ಥ. ಇತರರು ಅತಿ ಮಾನವನಿಗಾಗಿ ಸ್ವಾರ್ಥತ್ಯಾಗ ಮಾ
ಬೇಕಾದ ಅಗತ್ಯವೇನು?—ಅದು ನಿಸರ್ಗನಿಯಮ; ನಮ್ಮ ಸ್ವರೂಪಸಿದ್ಧಿ
ಅತಿಮಾನವನ ಸೇವೆ. ಮಡಿದ ಹಿಂದಿನ ದೇವರುಗಳ ಸ್ಥಾನದಲ್ಲಿ ನೀಜ್ಷೆ ಕ
'ಅತಿಮಾನವ'ನನ್ನು ಸ್ಥಾಪಿಸಿದನು. ಈ ಹೊಸ ದೇವರ ಆರಾಧನೆಗೆ ಜನನ್ನು
ಕರೆದನು.*

ಈ ಅತಿಮಾನವ ತತ್ವದೊಡನೆ ಮತ್ತೊಂದು ತತ್ವ ಪದೇ ಪದೇ ಅವನ ಗ್ರಂ
ಗಳಲ್ಲಿ ಗೋಚರವಾಗುವುದು. ಆ ತತ್ವವನ್ನು "Eternal Recurrence" ಅಂ
"ಅವಿರತ ಪ್ರತ್ಯಾವೃತ್ತಿ" ಎಂದು ಕರೆದಿರುವನು. ಜಗತ್ತಿನ ಚಕ್ರ ಅವಿರತವಾ
ತಿರುಗುತ್ತಲೇ ಇರುವುದು. ಹಗಲು ಇರುಳು ಮತ್ತು ಋತುಗಳು ತಿರುಗಿ ತಿರು
ಬರುವಂತೆ ಸಮಸ್ತ ಚರಾಚರ ವಸ್ತುಗಳೆಲ್ಲವೂ ಹಿಂತಿರುಗುವುವು. ಇದಕ್ಕೆ ಮೊ
ಲಿಲ್ಲ, ಕೊನೆ ಇಲ್ಲ. ಹಾಗೆಯೇ ಅಳಿದ ಜನಾಂಗಗಳು ಪುನಃ ಹುಟ್ಟುವುವು; ಅ
ಸಂಸ್ಕೃತಿಗಳು ಪುನಃ ಪುನಃ ತಲೆದೋರುವವು. ಕೊನೆಗೆ ನೀಜ್ಷೆ, ಜರ್ಮನಿ, ನಾ
ನೀವು, ಎಲ್ಲರೂ ಎಷ್ಟೋ ಸಲ ಹಿಂತಿರುಗಿ ಬರಬೇಕು. ಹಿಂದೆ ನಡೆದದ್ದೆಲ್ಲವೂ ಮು
ನಡೆಯದೇ ಇರುವುದಿಲ್ಲ. ವ್ಯಕ್ತಿಗಳಿಗೂ, ಜನಾಂಗಗಳಿಗೂ, ಮತಗಳಿಗೂ, ಸಂಸ್ಕೃ
ಗಳಿಗೂ ಎಷ್ಟೋ ಜನ್ಮಗಳಾದುವು, ಇನ್ನೆಷ್ಟೋ ಜನ್ಮಗಳಾಗುವುದಿದೆ. ಈ ವ
ವಾದ ಜನ್ಮಜನ್ಮಾಂತರ ಕಾಲವಿಪಾಕದ ಚಕ್ರಾರಪಙ್ತಿ ಎಂಬ ವಾದ ನೀಜ್ಷೆಯದು

ಅತಿಮಾನವನಂತಹ ಉದಾತ್ತ ವ್ಯಕ್ತಿ ಅವತರಿಸಬೇಕಾದರೆ ಜಗತ್ತು ಅವನನ್ನು
ಸ್ವೀಕರಿಸಲು ಒಂದು ಸಿದ್ಧತೆಯನ್ನು ಪಡೆಯಬೇಕು. ಇದನ್ನು ಪಡೆಯುವುದಕ್ಕಾಗಿ
ಅವಲಂಬಿಸಬೇಕಾದ ನೀತಿ ಏನೆಂಬುದನ್ನು ವಿಚಾರಿಸಲು ತೊಡಗಿ ತನ್ನ ಅಭಿಪ್ರಾಯ

---

* ಇಲ್ಲಿ ಕಾರ್ಲೈಲಿನ "ಪುರುಷಶ್ರೇಷ್ಠ ಮತ್ತು ಅವನ ಪೂಜೆ" (*Heroes and Hero Worship*) ಯನ್ನು ನೆನಪಿಗೆ ತಂದುಕೊಳ್ಳಬಹುದು.

ಗಳನ್ನು ನೀಚ್ಛೆ ಎರಡು ಗ್ರಂಥಗಳಲ್ಲಿ[1] ಬರೆದನು. ಹಳೆಯ ದೇವರುಗಳು, ಹಳೆಯ ಮತಗಳು ಮಡಿದಂತೆ ಹಳೆಯ ಕಂದಾಚಾರದ ನೀತಿಗಳು ಅಳಿಯಬೇಕೆಂದು ವಾದಿಸಿ ತನ್ನ ನೀತಿಶಾಸ್ತ್ರವನ್ನು ಪ್ರತಿಪಾದಿಸಿದನು. ಅದರ ಮುಖ್ಯಾಭಿಪ್ರಾಯಗಳು ಈ ರೀತಿ ಇವೆ.

ಪ್ರಕೃತಿ ತಾನೇ ಎರಡು ವಿಧವಾದ ಮಾನವ ಕುಲಗಳನ್ನು ಸೃಷ್ಟಿಸಿದ್ದಾಳೆ. ಕೆಲವರು ಹುಟ್ಟೊಡೆಯರು. ಕೆಲವರು ಹುಟ್ಟಾಳುಗಳು. ಅವರವರಲ್ಲಿರುವ ಶಕ್ತಿಸಂಚಯದ ಪ್ರಮಾಣ ವ್ಯತ್ಯಾಸಗಳೇ ಇದಕ್ಕೆ ಕಾರಣ. ಈ ಶಕ್ತಿಯ ಪ್ರಾದುರ್ಭಾವದಲ್ಲಿ ವ್ಯಕ್ತಿಗತವಾದ ವ್ಯತ್ಯಾಸವಿದೆ—ತಾರತಮ್ಯವಿದೆ. ಈ ತಾರತಮ್ಯಕ್ಕೆ ತಕ್ಕಂತೆ ಮಾನವ ವರ್ಗಗಳು ಏರ್ಪಡುತ್ತವೆ. ಈ ವರ್ಗಗಳಲ್ಲಿ ಉತ್ಕೃಷ್ಟ ಅಪಕೃಷ್ಟ ಎಂಬ ಸಹಜವಾದ ತಾರತಮ್ಯವಿದೆ. ವರ್ಗಗಳ ತಾರತಮ್ಯವಿಲ್ಲದ ಸಮಾಜ ಉಳಿಯುವುದಿಲ್ಲ. ಈ ತಾರತಮ್ಯ ತತ್ತ್ವವನ್ನು ಅಂಗೀಕರಿಸುವುದು ನೀತಿಸಿದ್ಧಾಂತಗಳ ಆದ್ಯಕರ್ತವ್ಯ. ಒಬ್ಬನ ಧರ್ಮ ಇನ್ನೊಬ್ಬನಿಗೂ ಧರ್ಮವಾಗಬಲ್ಲದು ಎಂದು ಪ್ರತಿಪಾದಿಸುವುದು ಅನೀತಿ. ವ್ಯಕ್ತಿಗಳಲ್ಲಿ ಉತ್ಕೃಷ್ಟ ಅಪಕೃಷ್ಟ ಎಂಬುವ ವ್ಯತ್ಯಾಸಗಳಿರುವಂತೆ ಜನಾಂಗಗಳಲ್ಲಿಯೂ ಉಂಟು. ಉತ್ಕೃಷ್ಟರ ಧರ್ಮ ಒಂದು; ಅಪಕೃಷ್ಟರ ಧರ್ಮ ಮತ್ತೊಂದು. ಸಮಾಜ ವ್ಯವಸ್ಥೆಯಲ್ಲಿ ಧರ್ಮಸಂಕರವಾಗದ ಹಾಗೆ ಏರ್ಪಾಡುಗಳಿರಬೇಕು. ಒಬ್ಬರ ಧರ್ಮ ಮತ್ತೊಬ್ಬರು ಅವಲಂಬಿಸಿದರೆ ಕೇಡು ತಪ್ಪದು.

ಜಗತ್ತಿನಲ್ಲಿ ಎರಡು ವಿಧವಾದ ನೀತಿಗಳಿವೆ. ಈ ನೀತಿಗಳಲ್ಲಿ ಒಂದನ್ನು ಯಜಮಾನನೀತಿ ಅಥವಾ ಪ್ರಭುನೀತಿ (Master-morality) ಎಂದೂ ಮತ್ತೊಂದನ್ನು ಸೇವಕನೀತಿ ಅಥವಾ ದಾಸನೀತಿ (Slave-morality) ಎಂದೂ ನೀಚ್ಛೆ ಕರೆದಿದ್ದಾನೆ. ಒಂದು ಶಕ್ತರ ನೀತಿ, ಮತ್ತೊಂದು ಅಶಕ್ತರ ನೀತಿ. ಅಶಕ್ತರಾದವರು ತಮ್ಮ ಅಶಕ್ತಿಗೆ ತಕ್ಕ ನೀತಿಯನ್ನು ಅವಲಂಬಿಸುತ್ತಾರೆ; ಮತ್ತು ಶಕ್ತಿವಂತರಿಗೆ ಅನುಗುಣವಾದ ಗುಣಗಳನ್ನು ಅಲ್ಲಗಳೆಯುತ್ತಾರೆ. ದಯಾ, ದಾಕ್ಷಿಣ್ಯ, ಪ್ರೀತಿ, ನಯ, ಸಮಾಧಾನ, ಶಾಂತಿ, ವಿಧೇಯತೆ, ತ್ಯಾಗ, ದಾನ, ಇವೆಲ್ಲವೂ ದುರ್ಬಲರು ತಮ್ಮ ದೌರ್ಬಲ್ಯಕ್ಕೆ ತಕ್ಕಂತೆ ಏರ್ಪಡಿಸಿಕೊಳ್ಳತಕ್ಕ ನೀತಿಗಳು. ಈ ಬಾಳು ಎರಡು ದಿನದ ಬಾಳು, ಇವೆಲ್ಲವೂ ನಶ್ವರ, ನಾನು ಕೆಲಸಕ್ಕೆ ಬಾರದವನು ಎಂಬ ಆಭಾಸ ವೇದಾಂತ ದಾಸನೀತಿಯ ವೇದಾಂತ. ಇದು ಸಹಜದಾಸರಾದವರ ಮನೋಭಾವವಾಗಿರಬೇಕಾದುದೇನೋ ಸರಿ. ಆದರೆ ಇಂತಹ ವೇದಾಂತವನ್ನು ಶ್ರೇಷ್ಠವರ್ಗದವರು ಅನುಸರಿಸು

[1] ಆ ಗ್ರಂಥಗಳ ಹೆಸರು :
*Beyond Good and Evil.*
*The Genealogy of Morals.*

ವುದು ಹಾನಿಕರ. ಇದನ್ನು ಅನುಸರಿಸಿದ್ದರಿಂದಲೇ ಯೂರೋಪಿನ ಜನರು ಕ್ಷೀಣ ಯನ್ನು ಹೊಂದುತ್ತಿರುವರು. ಇಂತಹ ಮತಗಳು ಏಷ್ಯಾಖಂಡಕ್ಕೆ ಸೇರಿದ್ದು ತೃಷ್ಣೆಯನ್ನೇ ನಿರ್ಮೂಲಮಾಡಬೇಕೆಂದು ಬೋಧಿಸುವ ಬೌದ್ಧರ ಶೂನ್ಯವಾ ಕ್ಷಣಿಕ ವಾದಗಳು ಯೂರೋಪ್ ಸಂಸ್ಕೃತಿಯನ್ನು ಮೂಲೋತ್ಪಾಟನೆಮಾ ತ್ತಿವೆ.[1] ಸಂನ್ಯಾಸ ಮನೋಭಾವವನ್ನೇ ಪ್ರೋತ್ಸಾಹಿಸುವ ಕ್ರೈಸ್ತಮತವೂ ಯೂರೋಪ್ ಜನರಲ್ಲಿ ದಾಸಭಾವವನ್ನು ರೂಢಿಸುತ್ತಿದೆ. ಈ ಭಾವ ಮಂದೆ (herd) ಸರಿಯಾದುದೇ ಹೊರತು ಜಗತ್ತಿನಲ್ಲಿ ಶ್ರೇಷ್ಠರೆಂದು ಬಾಳಬೇಕಾದವ ತಕ್ಕುದಲ್ಲ.[2] ನಮಗೆ ಈಗ ಬೇಕಾದ ನೀತಿ ಯಜಮಾನನೀತಿ. ಜಗತ್ತಿನಲ್ಲಿ ನಾ ಪ್ರೌಢಿಮೆಯಿಂದ ಬಾಳಬೇಕೆಂದು ಬಯಸುವುದು ಒಳ್ಳೆಯದು. ಹೃದಯದೌರ್ಬಲ್ಯ ಅವಕಾಶಕೊಡದೆ ಬಲಿಷ್ಠರಾಗಿ ಆಢ್ಯತೆಯಿಂದ, ದರ್ಪದಿಂದ, ಬಾಳಬೇಕೆಂ ಇಷ್ಟಪಡುವುದರಲ್ಲಿ ತಪ್ಪಿಲ್ಲ. ವೈರಾಗ್ಯದ ಮನೋಭಾವ ಹಾನಿಕರ. ಈ ದೇ ನಶ್ವರವಾದುದೆಂದು ಭಾವಿಸಿ ಶಾರೀರಕ ಸೌಖ್ಯಗಳನ್ನು ತೊರೆಯುವುದು ಮೌ ಇದನ್ನು ಬಿಟ್ಟು ಇನ್ನೆಲ್ಲೋ ಮುಂದೆ ಶಾಶ್ವತ ಸುಖವನ್ನನುಭವಿಸುವೆವೆಂದು ಭಾವಿ ವುದು ಹಗಲುಗನಸು. ಮಾನವನ ಸ್ವಭಾವದಲ್ಲಿ ಅತ್ಯುತ್ಕೃಷ್ಟವಾದ ಗುಣ ಶೌರ್ಯ ಗಳು ಭೋಗೇಚ್ಛೆ, ದರ್ಪ. ಜನರು ಸಾಧಾರಣವಾಗಿ "ಸಾಧುತನ" ಎಂದು ಕರೆ ವುದು "ಹೇಡಿತನ"ದ ಪರ್ಯಾಯ ಶಬ್ದ. ತೀರ ಒಳ್ಳೆಯತನ ನಮ್ಮನ್ನು ಆವರಿಸಿ ಅಪಾಯ. ಈಗಿರುವುದಕ್ಕಿಂತಲೂ ಇನ್ನೂ ಹೆಚ್ಚು ದೌಷ್ಟ್ಯವನ್ನು ಅಭ್ಯಾಸಮಾ ದರೂ ಒಳ್ಳೆಯದೇ.[3] ಮಾರ್ದವಕ್ಕಿಂತಲೂ ಮನಸ್ಸಿನಲ್ಲಿ ಕಾಠಿಣ್ಯವಿದ್ದರೆ ಹೆಚ್ಚು ಪ್ರಯೋಜನ ಉಂಟು. ಶ್ರೇಷ್ಠನಾಗಿ ಬಾಳಬೇಕೆಂದು ಬಯಸುವವನು ತನ್ನ ಆದಷ್ಟುಮಟ್ಟಿಗೆ ರಾಜಸಗುಣಗಳನ್ನು ವೃದ್ಧಿಪಡಿಸಿಕೊಳ್ಳಬೇಕು. ರಾಜಸಗುಣಗ ವೃದ್ಧಿಯಾಗಬೇಕಾದರೆ ಅದಕ್ಕೆ ತಕ್ಕಂತೆ ಆಹಾರವಿಹಾರಗಳನ್ನು ಏರ್ಪಡಿಸಿಕೊಳ್ಳ ಬೇಕು. ಆಹಾರದಲ್ಲಿ ಸಾತ್ವಿಕ, ರಾಜಸ ಎಂಬ ಬೇಧವಿದೆ. ಸ್ಪರ್ಧಾರಂಗವಾದ ಈ ಪ್ರಪಂಚದಲ್ಲಿ ಯಶಸ್ವಿಯಾಗಿ ಬಾಳಬೇಕಾದರೆ ಸಾತ್ವಿಕ ಆಹಾರವನ್ನು ತೊರೆ ರಾಜಸಾಹಾರವನ್ನು ತೆಗೆದುಕೊಳ್ಳಬೇಕು. ಆಹಾರಕ್ಕೂ ಚಿತ್ತವೃತ್ತಿಗಳಿಗೂ ನಿಕ ಸಂಬಂಧವಿದೆಯೆಂದು ನೀಚ್ಷೆ ನಂಬಿದ್ದನು. ಬೌದ್ಧಮತದಂತಹ ಅಹಿಂಸಾ ಬೋಧ ವಾದ ಸಾತ್ವಿಕ ಶಾಂತಿ ಪ್ರತಿಪಾದಕ ಮತಗಳು ತಂಡುಲ ಮೊದಲಾದ ಸಸ್ಯಾಹಾರ

[1] "Europe is threatened with a new Buddhism."

[2] "The whole of the morality of Europe is based upon the values which are useful to the herd."

[3] "Man must become better and more evil."

ಫಲವೆಂದು ನೀಚ್ಛೆ ಅಭಿಪ್ರಾಯಪಟ್ಟನು. ಹಾಗೆಯೇ ಜರ್ಮನರು 'ಬೀರ್' ಕುಡಿದು ಕೆಟ್ಟರೆಂದು ಭಾವಿಸಿದನು. ಇದು ಶಕ್ತಿವರ್ಧಕವಲ್ಲವೆಂದು ತಿಳಿದನು. ಧರ್ಮದ ಮೂಲ ದಯೆಯಲ್ಲ ದರ್ಪ ಎಂಬುದು ನೀಚ್ಛೆಯ ನೀತಿಶಾಸ್ತ್ರದ ಸೂತ್ರ.

ದಯೆಯನ್ನೇ ಧರ್ಮದ ತಿರುಳನ್ನಾಗಿ ಮಾಡಿದ ಮತಗಳಲ್ಲಿ ಮುಖ್ಯವಾದುದು ಕ್ರೈಸ್ತ ಮತವೆಂದು ನೀಚ್ಛೆ ನಂಬಿದ್ದನು. ಇಂತಹ ಮತಗಳು ಜೀವನೋತ್ಸಾಹವನ್ನು ಕುಗ್ಗಿಸುವುವೆಂದೂ, ನಿರಾಶಾವಾದಿಗಳಿಗೆ ಬೆಂಬಲಕೊಡುವುವೆಂದೂ ಭಾವಿಸಿದನು. ಈ ಕಾರಣದಿಂದ ನೀಚ್ಛೆ ತನ್ನನ್ನು ಕ್ರಿಸ್ತ ಪ್ರತಿಕಕ್ಷಿ (Anti-Christ) ಎಂದು ಕರೆದು ಕೊಂಡಿದ್ದಾನೆ. ಅಪಕಾರಿಗೂ ಕೂಡ ಉಪಕಾರಮಾಡಬೇಕೆಂಬ ಯೇಸುವಿನ ನೀತಿ ಯನ್ನು ಯಾವ ಜನಾಂಗವಾದರೂ ಒಂದು ವಾರದ ಮಟ್ಟಿಗೆ ಆಚರಣೆಗೆ ತರಲಿ. ಆಗ ಅದರ ಗತಿ ಏನಾಗುವುದೆಂಬುದನ್ನು ನೀವೇ ನೋಡುವಿರಿ ಎಂದಿರುತ್ತಾನೆ. ಇದು ನಿಜವಿರಬಹುದು. ಆದರೆ ಈ ನೀತಿಗೆ ವಿರೋಧವಾದ ನೀತಿ ಮನುಷ್ಯನ ಮನುಷ್ಯತ್ವಕ್ಕೆ ಯೋಗ್ಯವಾದುದಲ್ಲವೆಂಬುದನ್ನು ನೀಚ್ಛೆ ಗಣಿಸಲಿಲ್ಲ. ಮಾನವನು ಇಂತಹ ಉತ್ತಮನೀತಿಯ ಅವಲಂಬನದಿಂದ ಪಶುಸ್ಥಿತಿಯಿಂದ ಮೇಲೇರಿ ದೇವತ್ವದ ಕಡೆಗೆ ಬಾಗಿರುತ್ತಾನೆ. ನೀಚ್ಛೆ ಒಪ್ಪುವ ನೀತಿಯನ್ನು ಅನುಸರಿಸುವುದರಿಂದ ಮಾನ ವನು ತನಗೂ ಇತರ ಪಶುಗಳಿಗೂ ಇರುವ ವ್ಯತ್ಯಾಸವನ್ನೇ ಮರೆತಂತಾಗುವುದು. ಇನ್ನೂ ಮಾನವನು ಮೃಗಪ್ರಾಯನಾಗಿ "ಅರಣ್ಯನೀತಿ" (Law of the Jungle) ಅಥವಾ "ಮತ್ಸ್ಯನ್ಯಾಯ"ವನ್ನು ಅನುಸರಿಸುತ್ತಿರುವುದು ವಿಷಾದಕ್ಕೆ ಕಾರಣ ವಾಗಿರಬೇಕಲ್ಲದೆ ಸ್ತುತ್ಯಾರ್ಹವಾದುದಲ್ಲ. ಆದರೆ ಇಂತಹ ಧೂರ್ತನೀತಿಯೇ ಸಾಧು ವಾದುದೆಂದು ಪ್ರತಿಪಾದಿಸುವ ನೀಚ್ಛೆಯ ತತ್ವಗಳಂತಹವು ನಮ್ಮನ್ನು ಅಂತಿಮ ವಿನಾಶಕ್ಕೆ ಒಯ್ಯುತ್ತಿರುವುದು ಈಗಾಗಲೇ ಗೋಚರವಾಗುತ್ತಿದೆ. ಸೌಮ್ಯನೀತಿ ಪ್ರತಿಪಾದಕವಾದ ಮತಗಳು ನೀತಿಪರಿಪಾಲನೆಯ ದೃಷ್ಟಿಯಿಂದ ಯಾವ ಗುಣಗಳನ್ನು ಶ್ರೇಷ್ಠವೆಂದು ಗಣಿಸುವುವೋ ಅವುಗಳನ್ನೇ ನೀಚ್ಛೆ ಮಾನವನ ದೌರ್ಬಲ್ಯಸೂಚಕ ವೆಂದು ಭಾವಿಸುವುದು ನಮಗೆ ಆಶ್ಚರ್ಯವನ್ನುಂಟುಮಾಡುತ್ತದೆ. ಆದರೆ ನೀಚ್ಛೆ ಕೆಲವು ಜನರು ಸೌಮ್ಯನೀತಿಯನ್ನು ಅವಲಂಬಿಸಲು ಕಾರಣ ಹೇಳುತ್ತಾನೆ. ಯಾವ ಜನಾಂಗ ವನ್ನು ತೆಗೆದುಕೊಂಡರೂ ಬಹುಮಂದಿ ದಾಸಭಾವವನ್ನೇ ಉಳ್ಳವರಾಗಿರುತ್ತಾರೆ. ಅವರಿಗೆ ಒಬ್ಬ ನಾಯಕನನ್ನು ವಿಧೇಯತೆಯಿಂದ ಹಿಂಬಾಲಿಸಿ ಹೋಗುವುದೇ ಹಿತವಾಗಿ ತೋರುವುದು. ಏತಕ್ಕೆಂದರೆ ಅವರಿಗೆ ಸ್ವಬುದ್ಧಿಯಿಂದ ಜೀವನದ ಉದ್ದೇಶಗಳನ್ನು ನಿರ್ಣಯಿಸಿ ನಡೆದುಕೊಳ್ಳುವುದು ಅವರ ಶಕ್ತಿಗೆ ಮೀರಿದ್ದು. ಬೆಳೆಯುವ ಮಕ್ಕಳು ತಮ್ಮ ರಕ್ಷಣೆ ಪೋಷಣೆಯನ್ನು ತಾವೇ ನೋಡಿಕೊಳ್ಳಲು ಶಕ್ತಿಸಾಲದೆ ತಮ್ಮ

ತಾಯಿತಂದೆಗಳನ್ನು ನಂಬಿರುವಂತೆ ಮಂದಿ ಮಾರ್ಗದರ್ಶಕನಾದ ಪ್ರತಿಭಾಶಾಲಿಯಾದ ನಾಯಕನೊಬ್ಬನನ್ನು ನಂಬುತ್ತದೆ. ನಾಯಕರಾಗಲು ಶಕ್ತಿಯುಳ್ಳವರ ಸಂಖ್ಯೆ ಯಾವಾಗಲೂ ವಿರಳ. ಆದರೂ ಬಹುಮಂದಿ ತಮ್ಮ ಕ್ಷೇಮಕ್ಕೆ ಇವರನ್ನೇ ನಂಬಬೇಕಾಗಿದೆ. ಆದ್ದರಿಂದ ಪ್ರತಿಯೊಂದು ಜನಾಂಗದಲ್ಲೂ ಒಂದು ನಾಯಕವರ್ಗ (Aristocracy) ಇರುವುದು ಸಹಜ.

ಇಂತಹ ನಾಯಕವರ್ಗವನ್ನು ಕಾಪಾಡಿಕೊಂಡು ಬರುವುದು ಲೋಕಕ್ಷೇಮ. ಇದನ್ನು ಪೋಷಿಸಿಕೊಂಡು ಬರುವ ರೀತಿನೀತಿಗಳನ್ನು ನೀಚ್ಛೆ ವಿವರಿಸಿರುವನು. ಸಮಾಜದ ವ್ಯವಸ್ಥೆ ನಾಯಕವರ್ಗದ ಪೋಷಣೆಗೆ ಅನುಕೂಲವಾದದ್ದಾಗಿರಬೇಕು. 'ಎಲ್ಲರೂ ಸಮಾನರು' ಎಂಬ ಹಾನಿಕರ ಸಿದ್ಧಾಂತದ ಮೇಲೆ ಸಮಾಜವ್ಯವಸ್ಥೆ ಮಾಡಿದರೆ ಈ ನಾಯಕವರ್ಗಕ್ಕೆ ಚ್ಯುತಿಬರುವುದರಲ್ಲಿ ಸಂದೇಹವಿಲ್ಲ. ಇಂತಹ ಸಿದ್ಧಾಂತಗಳಿಗೆ ಅವಕಾಶಕೊಡದ ಸಿದ್ಧಾಂತ ನೀಚ್ಛೆಯದು. ಈ ನಾಯಕವರ್ಗವನ್ನು ಉಳಿಸುವುದೆಂತು? ಇದಕ್ಕೆ ನೀಚ್ಛೆ ತನ್ನ ಏರ್ಪಾಡನ್ನು ಹೇಳುತ್ತಾನೆ. ಮಂದಿಯಲ್ಲಿ ಎಲ್ಲರೂ ನಾಯಕರಾಗಲು ಸಾಧ್ಯವಿಲ್ಲ. ಇದಕ್ಕಾಗಿ ಕೆಲವರಲ್ಲಿ ಹುಟ್ಟುಗುಣಗಳಿವೆ. ಇದೇ ಒಂದು ಪ್ರತ್ಯೇಕವಾದ ಜಾತಿ. ಈ ಜಾತಿಯ ಪರಿಶುದ್ಧಿಯನ್ನು ಉಳಿಸಿಕೊಳ್ಳಲು ಕೆಲವು ಸಂತಾನ ನಿಯಮಗಳನ್ನು ಏರ್ಪಡಿಸಬೇಕು. ಸಂತಾನಕ್ಕೆ ತಕ್ಕಂತೆ ಶಿಕ್ಷಣಪದ್ಧತಿ ಇರಬೇಕು. ಶ್ರೇಷ್ಠರಾದವರು ಶ್ರೇಷ್ಠರಾದವರನ್ನೇ ಮದುವೆಯಾಗಬೇಕು. ವರ್ಗಸಂಕರಕ್ಕೆ ಅವಕಾಶವಿರಬಾರದು. ವಿವಾಹ ಕೇವಲ ಸ್ತ್ರೀಪುರುಷರ ಪ್ರೇಮಸಂಬಂಧವಾಗಿರಬಾರದು; ಯುಕ್ತವಾದದ್ದಾಗಿರಬೇಕು. ತಮಗಿಂತಲೂ ಶ್ರೇಷ್ಠವಾದ ಉತ್ತಮವಾದ ಸಂತಾನೋತ್ಪತ್ತಿಗಾಗಿ ಕೈಗೊಂಡ ಸಂಕಲ್ಪವೇ ವಿವಾಹ ಎಂದು ನೀಚ್ಛೆಯ ಅಭಿಪ್ರಾಯ.[1] ಸಂತಾನಶಾಸ್ತ್ರದ (Eugenic) ವಿಷಯದಲ್ಲಿ ನೀಚ್ಛೆ ಕೊಟ್ಟ ಸಲಹೆಗಳು ಗ್ರೀಕರ ದಾರ್ಶನಿಕನಾದ ಪ್ಲೇಟೋವಿನ ಅಭಿಪ್ರಾಯವನ್ನು ಹೋಲುತ್ತವೆ. ರಕ್ತದಲ್ಲಿ ಶ್ರೇಷ್ಠನಲ್ಲದವನು ಗುಣ ಮತ್ತು ಕರ್ಮಗಳಲ್ಲಿ ಶ್ರೇಷ್ಠನಾಗಲಾರನೆಂಬುದು ನೀಚ್ಛೆಯ ಮತ. ಹೀಗೆ ಜನ್ಮತಃ ಶ್ರೇಷ್ಠನಾದವನಿಗೆ ತಕ್ಕ ಶಿಕ್ಷಣ ಏರ್ಪಡಿಸತಕ್ಕದ್ದು. ಶಾರೀರಕ ಮಾನಸಿಕ ಶಕ್ತಿಗಳು ಸಂಪೂರ್ಣ ವಿಕಾಸವಾಗುವಂತಹ ಶಿಕ್ಷಣ ಇದಾಗಿರಬೇಕು. ಯಾವ ವಿಧವಾದ ದೌರ್ಬಲ್ಯಕ್ಕೂ ಅವಕಾಶವಿರಬಾರದು. ದರ್ಪವನ್ನು ಹೆಚ್ಚುಮಾಡುವ ಅಂಶಗಳೆಲ್ಲವೂ ಒಳ್ಳೆಯವು; ಇದನ್ನು ಕಡಮೆಮಾಡುವವೆಲ್ಲವೂ ಕೆಟ್ಟದ್ದು. ಸಾಹಸಜೀವನ ಶಿಕ್ಷಣದ ಧ್ಯೇಯ

---

[1] "Marriage: Thus I call the will of two to create that one which is more than they who created it."

(Thus spake Zarathushtra)

ವಾಗಿರಬೇಕು. ಇಂತಹ ನಾಯಕವರ್ಗದಿಂದ ಕಡೆದು ತೇಲಿ ನಿಲ್ಲುವವನು ಅತಿಮಾನವ (Superman) ನಾಗುತ್ತಾನೆ. ಮಂದಿಯಲ್ಲಿ ನಾಯಕವರ್ಗದವರು ಶ್ರೇಷ್ಠರಾದಂತೆ, ನಾಯಕವರ್ಗದಲ್ಲಿ ಶ್ರೇಷ್ಠತಮನಾದವನು ಅತಿಮಾನವನು. ಇಂತಹ ಅತಿಮಾನವನ ಅವತಾರಕ್ಕೆ ಅಣಿಮಾಡುವುದೇ ಎಲ್ಲರ ಗುರಿ. ನಾಯಕರು ಇಂದು ವಿರಳವಾಗಿರಬಹುದು, ಆದರೆ ಇವರು ಮಂದಿಯಿಂದ ಆರಿಸಿ ತೆಗೆದವರು; ಜಳ್ಳಿನಿಂದ ಆರಿಸಿದ ಕಾಳಿನಂತೆ. ಇವರಲ್ಲಿ ಸರ್ವೋತ್ತಮನಾದವನು, ವಿಶಿಷ್ಟನಾದವನು, ಉತ್ಕೃಷ್ಟನಾದವನು ಅತಿಮಾನವನು. ಅತಿಮಾನವನ ಉದಯ ಇನ್ನೂ ಆಗಿಲ್ಲವಾದುದರಿಂದ ಆ ಗುರಿಯನ್ನೇ ಎದುರುನೋಡುತ್ತಿರುವುದು ಎಲ್ಲರ ಜೀವನದ ಪರಮ ಪುರುಷಾರ್ಥ.

ನೀಚೆಯ ಸಂಸ್ಕೃತಿ ಪೌರುಷಮಯವಾದುದು. ಎಲ್ಲರ ಸಮಾನತೆಯನ್ನು ಬೋಧಿಸುವ ಪ್ರಜಾತಂತ್ರವೂ, ನಮ್ರತೆ ದಯೆಗಳನ್ನು ಮುಖ್ಯವೆಂದು ಬೋಧಿಸುವ ಕ್ರೈಸ್ತಮತವೂ ಸ್ತ್ರೀ ಪ್ರಯುಕ್ತವಾದ ಅಂಶಗಳನ್ನು ಯೂರೋಪಿನ ಸಂಸ್ಕೃತಿಯಲ್ಲಿ ಬೆರಸಿ ಅದರ ಸಾರವನ್ನು ಹೀರುತ್ತಿವೆ ಎಂದು ಭಾವಿಸುದುದರಿಂದ ತಾನು ಅವೆರಡರ ವಿರೋಧಿ ಎಂದು ತಾನೇ ಸಾರಿದನು. ಸಮಾನತೆ ಸ್ತ್ರೀಪುರುಷರಲ್ಲಿಯೂ ಇರಲು ಸಾಧ್ಯವಿಲ್ಲವೆಂದು ನೀಚೆಯ ನಂಬಿಕೆ. ಪುರುಷನ ಕೈ ಯಾವಾಗಲೂ ಮೇಲಾಗಿರುವುದು ಪ್ರಕೃತಿ ನಿಯಮವೆಂದು ಬೋಧಿಸಿದನು. ಸ್ತ್ರೀಯರ ಜೀವನದ ಗುರಿ ತಾಯಿತನ, ಕುಟುಂಬದ ಸೇವೆ ಎಂದನು. ಸಂತಾನವೇ ಹೆಂಗಸಿನ ಗುರಿ, ಅದಕ್ಕೆ ಸಾಧನಮಾತ್ರ ಗಂಡಸು. ಮತ್ತು ಪರಾಕ್ರಮಿಯಾದ ಗಂಡಸಿಗೆ ವಿರಾಮದ ಸಮಯದಲ್ಲಿ ಮನಸ್ಸಿಗೆ ಅಹ್ಲಾದವನ್ನು ಕೊಡುವ ರಮಣಿ ಹೆಂಗಸು. ಸಂಗ್ರಾಮವೃತ್ತಿಗೆ ಸಾಧಕವಾದ ಶಿಕ್ಷಣವನ್ನು ಗಂಡಸಿಗೂ, ಮನೋರಂಜನ ಅಥವಾ ವಿಹಾರ ಯೋಗ್ಯವಾದ ಶಿಕ್ಷಣವನ್ನು ಹೆಂಗಸಿಗೂ ಕೊಡಬೇಕಾದದು ಉತ್ತಮ—ಹೀಗೆಂದು ನೀಚೆ ಬೋಧಿಸಿದನು. ರಾಜಕೀಯ ದೃಷ್ಟಿಯಿಂದ ನೋಡಿದರೆ, ಮತ್ತು ಇವನ ಸಿದ್ಧಾಂತದಲ್ಲಿ ಜನನಾಯಕರಾದವರಿಗೆ ಕೊಟ್ಟಿರುವ ಮಹತ್ವವನ್ನು ಅರಿತರೆ, ನೀಚೆಯ ಸಿದ್ಧಾಂತವು ಫಾಸ್ಸಿಸ್ಸಂ ಮತ್ತು ನಾಸ್ಸಿಸ್ಸಂ ಶಕ್ತಿತತ್ವಗಳ ತಳಹದಿಯಾಗಿದೆ. ನೀಚೆ ನಿರೂಪಿಸಿರುವ ಅತಿಮಾನವನ ಅಥವಾ ನಾಯಕವರ್ಗದವರ ಪದವಿಗೆ ಏರಲು ಯೋಗ್ಯತೆ ಇರಬಲ್ಲುದು ಬಹು ಕಡಮೆ ಜನರಿಗೆ. ಇಂತಹ ಪದವಿಗೆ ಏರಲು ಯೋಗ್ಯತೆಯುಳ್ಳವರು ಮಾತ್ರ ದಾಸನೀತಿಗೆ ಮನಸೋಲದಿರಬೇಕು. ದಾಸವರ್ಗದವರ ನೀತಿ ಕ್ರಮೇಣ ಇವರ ಶಕ್ತಿಯನ್ನು ಹೀರಿ ಇವರನ್ನು ಸಪ್ಪೆಯಾಗಿ ಮಾಡುವ ಅಪಾಯವಿದೆ. ಇಂತಹ ಸೌಮ್ಯನೀತಿಗೆ ಒಳಗಾಗದ ಹಾಗೆ ಯಾವಾಗಲೂ ರುದ್ರೋಪಾಸನೆ

ಯಲ್ಲಿ ತೊಡಗಿರಬೇಕಾದುದು ಶಕ್ತ್ಯುಪಾಸಕರ ಲಕ್ಷಣ. ಪ್ರಜಾಸಾಮಾನ್ಯಕ್ಕೆ ಅತಿಮಾನವತ್ವದ ಹಂತವನ್ನು ಏರಲು ಎಂದೆಂದೂ ಸಾಧ್ಯವಿಲ್ಲ. ಆದರೂ ಅನೇಕರು ಈ ಗಣ್ಯತೆಗಾಗಿ ಪ್ರಯತ್ನ ಮಾಡದೇ ಇರುವುದಿಲ್ಲ. ಈ ಯತ್ನದಲ್ಲಿ ಜಯಶೀ... ರಾಗುವವರು ಅತಿವಿರಳ. ಹಾಗೆ ಜಯಶೀಲರಾಗುವವರು ಮಾನವರಲ್ಲಿ ಕಡೆದು... ಕೆನೆ ಇದ್ದ ಹಾಗೆ. ಉತ್ಕರ್ಷ ಇಂಥವರಿಗೆ ಸಹಜವಾದುದು. ಇತರರ ಮೇ... ಒಡೆಯತನ ತಾನೇ ತಾನಾಗಿ ಇವರ ಕೈಸೇರುವುದು. ಇಂಥವರೇ ಜನನಾಯ... ಪುರುಷೋತ್ತಮರು. ಹೀಗಾಗಲು ಶಕ್ತಿಯುಳ್ಳವರು ಜಗತ್ತಿನ ಒಡೆತನಕ್ಕೆ ... ಪಟ್ಟರೆ ಆದರಲ್ಲಿ ತಪ್ಪೇನು ಎಂದು ನೀಚ್ಛೆ ಕೇಳುತ್ತಾನೆ.

ಈ ಸಂದರ್ಭದಲ್ಲಿ ನೀಚ್ಛೆ ಮಾನವನ ಸ್ವಭಾವವನ್ನು ಪರೀಕ್ಷಿಸಿ ಕೆಲ... ತೀರ್ಮಾನಗಳಿಗೆ ಬಂದಿರುತ್ತಾನೆ. ದರ್ಪಾಕಾಂಕ್ಷೆ (The will to power) ಸ... ಮಾನವರ ಹೃದಯದಲ್ಲಿಯೂ ಮನೆ ಮಾಡಿದೆ. ಮಾನವನಿಗೂ ಪಶುಗಳಿಗೂ ... ಸಂಬಂಧವಾದ ಮತ್ತು ಭಾವಸಂಬಂಧವಾದ ವ್ಯತ್ಯಾಸಗಳು ಅನೇಕವಿವೆ. ಪಶು... ಬಯಕೆಗೆ ಒಂದು ಪರಿಮಿತಿ ಇದೆ; ಅದಕ್ಕೆ ತೃಪ್ತಿ ಸಾಧ್ಯ. ಆದರೆ ಮಾನವನ ಕೆಲ... ಬಯಕೆಗಳಿಗೆ ತೃಪ್ತಿ ಅಸಾಧ್ಯವಾಗಿರುವಂತೆ ನಮಗೆ ಕಂಡುಬರುತ್ತದೆ. ಅನ್ನ ತಿನ್ನು... ವುದರಿಂದ ಹಸಿವು ಹಿಂಗುವುದು; ನೀರು ಕುಡಿಯುವುದರಿಂದ ಬಾಯಾರಿಕೆ ಆರುವು... ಕಾಮದ ತೃಪ್ತಿಯೂ ಬೇಗನೇ ಆಗಬಲ್ಲದು. ಇವೆಲ್ಲ ತೀರಿದಮೇಲೆಯೂ ಮನಸ್ಸಿ... ನಲ್ಲಿ ಪ್ರಬಲತಾ ವಾಂಛೆ, ದರ್ಪಾಕಾಂಕ್ಷೆ ಹಾಗೆಯೇ ಉಳಿಯುವುದು. ಈ... ಈಶತ್ವವನ್ನೇ ವಶಮಾಡಿಕೊಳ್ಳಬೇಕೆಂಬ ವಾಂಛೆ. ಇದಕ್ಕೆ ತೃಪ್ತಿಯೇ ಇಲ್ಲ. ... ಬಯಕೆಯನ್ನು ತೀರಿಸಲು ಪ್ರಯತ್ನಪಟ್ಟಷ್ಟೂ ಪ್ರಬಲವಾಗುವುದೇ ಇದರ ಸ್ವಭಾ... ಮಾನವನ ಹಂಬಲು ಬರಿ ಬದುಕಿಗಾಗಿ ಅಲ್ಲ; ಪೆರ್ಮೆಯ ಬದುಕಿಗಾಗಿ. ನೀ... ಹೇಳುವುದೇನೆಂದರೆ :

"ಉಸಿರಿರುವಲ್ಲೆಲ್ಲಾ, ಕಂಡುಬಂದಿದೆ ನನಗೆ, ಈ ಪ್ರಭುತ್ವಾಕಾಂಕ್ಷೆ. ಆಳ... ಆಳುವಾಸೆ. ಬರಿಯ ಆವಶ್ಯಕತೆಯೂ ಅಲ್ಲ, ಬರಿಯ ಅಭಿಲಾಷೆಯೂ ಅಲ್ಲ, ಪ್ರ... ವಾಗುವುದರಲ್ಲಿ ಅದಮ್ಯವ್ಯಾಮೋಹ. ಇದು ಮನುಷ್ಯವರ್ಗಕ್ಕೆ ಹಿಡಿದ ಭೂತ. ಜನ... ನೀವು ಬೇಕಾದ್ದನ್ನು ಕೊಡಿ—ಆರೋಗ್ಯ, ಆಹಾರ, ಆವಾಸ, ಭೋಗ—ಅಷ್ಟಕ್ಕೆ ಅವರು ತೃಪ್ತರಾಗುವುದಿಲ್ಲ. ಅವರನ್ನು ಏನೋ ಒಂದು ಅಶಾಂತಿ ಕದಡುತ್ತಿರುತ್ತದೆ. ಏಕೆಂದರೆ ಈ ಪ್ರಭುತ್ವಮೋಹದ ಭೂತ ತಣಿಗಾಗಿ ತಣಿವಿಲ್ಲದೆ ಕಾಯುತ್ತಿರುತ್ತದೆ.

"ಈ ಪ್ರಬಲತಾ ವಾಂಛೆ, ಭೂಕಂಪದಂತೆ, ಹುಸಿ ಹೊಳ್ಳುಗಳನ್ನೆಲ್ಲಾ ಬಿಚ್ಚಿ ತೂರುತ್ತದೆ. ಅಂತಶ್ಶೂನ್ಯವಾದ ಪ್ರಾಚೀನತಾ ಸಂಪ್ರದಾಯ ಗೋಪುರಗಳ...

ಬಡಿದುರುಳಿಸಿ ಸುಟ್ಟುರುಹುತ್ತದೆ. ಅನುಪಯುಕ್ತ, ಅಕಾಲಿಕ, ಮತ್ತು ಅಲ್ಪಾಯು ಗಳಾದ ನಿಕೃಷ್ಟ ಸಂತೃಪ್ತಿಗಳ ಮುಂದೆ ಪ್ರಶ್ನಚಿಹ್ನಾಕೃತಿಯ ತನ್ನಗ್ನಿಖಡ್ಗವನ್ನು ಝಳಪಿಸುತ್ತದೆ. ಪ್ರಬಲತಾವಾಂಛೆ: ಅದರ ದೃಷ್ಟಿಮಾತ್ರದಿಂದ ನರನು ಕ್ರಿಮಿ ಯಾಗುತ್ತಾನೆ, ಕುಗ್ಗುತ್ತಾನೆ, ಬೆನ್ನುರಿಯ ದುಡಿಯುತ್ತಾನೆ; ಹಾವು ಹಂದಿಗಳಿ ಗಿಂತಲೂ ಕೀಳಾಗಿ ತಿರಸ್ಕಾರವೇ ಮೂರ್ತಿಗೊಂಡಂತೆ ಆಗುತ್ತಾನೆ."

ಇವು ನೀಚ್ಚೆಯ ವಾಕ್ಯಗಳ ಅನುವಾದ. ಇದರಲ್ಲಿ ಪ್ರಭಾವಶಾಲಿಗಳ ದರ್ಪ ವನ್ನೂ ಅವರಿಗೆ ಅಡಿಯಾಳುಗಳಾದ ಕ್ಷುದ್ರ ಜೀವಿಗಳ ಹೇಯ ಜೀವನವನ್ನೂ ತನ್ನ ಭೈರವಶೈಲಿಯಲ್ಲಿ ವರ್ಣಿಸಿದ್ದಾನೆ.

ನೀಚೆಯ ದರ್ಶನದಲ್ಲಿ ಕರುಣೆಗೆ ಅವಕಾಶವಿಲ್ಲ. ಅತಿಮಾನವನಲ್ಲಿ ನಿಪುಣತೆ ಒಂದು ಮುಖ್ಯವಾದ ಗುಣ. ಕರುಣೆ ಹುಟ್ಟುವುದು ದುರ್ಬಲರ ವಿಷಯದಲ್ಲಿ. ಕರುಣೆಯ ದೆಸೆಯಿಂದ ದುರ್ಬಲವಾದುವು ಕೆಲಸಕ್ಕೆ ಬಾರದಿದ್ದರೂ ಉಳಿಯು ವಂತಾಗುವುದು. ಹೀಗಾಗಿ ದುರ್ಬಲವಾದುವುಗಳ ಸಂಖ್ಯೆಯೇ ಹೆಚ್ಚುತ್ತಾ ಹೋಗಿ ಸಮಾಜದ ದಾರ್ಢ್ಯ ಕೆಡುವುದು. ಆದ್ದರಿಂದ ಕರುಣೆಯನ್ನು ಬೋಧಿಸುವ ಕ್ರೈಸ್ತ ಮತದಂತಹ ಮತಗಳು ನಮ್ಮ ಅವನತಿಗೆ ಕಾರಣವಾಗುವುವು. ಡಾರ್ವಿನನಂತೆ ನೀಚ್ಚೆ ಜೀವನವನ್ನು ಒಂದು ಹೋರಾಟವೆಂದು ಭಾವಿಸುತ್ತಾನೆ. ಈ ಹೋರಾಟದ ಪೈಪೋಟಿಯಲ್ಲಿ ಸಬಲವಾದುವು ಉಳಿಯುತ್ತವೆ, ನಿರ್ಬಲವಾದುವು ಅಳಿಯುತ್ತವೆ. ಹೀಗಾಗಬೇಕಾದುದು ನೈಸರ್ಗಿಕ ನಿಯಮ. ದುರ್ಬಲವಾದುವುಗಳ ವಿನಾಶಕ್ಕಾಗಿ ಕಣ್ಣೀರು ಬಿಡುವುದು ಹೃದಯದೌರ್ಬಲ್ಯದ ಲಕ್ಷಣ. ಎದೆಯನ್ನು ಕನಿಕರದ ಬಾಣಗಳು ಇರಿಯದಂತೆ ಕಠೋರತೆಯ ವಜ್ರಕವಚವನ್ನು ತೊಡಬೇಕೆಂದನು. ಕನಿಕರದ ಬಾಣಗಳು ನೀಚ್ಚೆಯ ಎದೆಯನ್ನು ಕೊರೆಯುತ್ತಿದ್ದುದೇ ಇಂತಹ ಕಠೋರ ಪ್ರತಿಜ್ಞೆಗೆ ಬೆಂಬಲ ಕೊಟ್ಟಿತು. ಇತರರ ದುಃಖವನ್ನು ನೋಡಿ ಸಹಿಸದ ನೀಚ್ಚೆ ಅದನ್ನು ಹೋಗಲಾಡಿಸಲು ಬೇರೊಂದು ಉಪಾಯವನ್ನು ಈ ಲೋಕದಲ್ಲಿ ಕಾಣದೆ ಕನಿಕರಕ್ಕೆ ಪಾತ್ರರಾದವರನ್ನು ತೊಡೆದುಬಿಡುವುದೇ ಉಪಾಯವೆಂದು ಬಗೆದನು. ದುರ್ಬಲವಾದುವುಗಳ ವಿನಾಶಕ್ಕಾಗಿ ಕಣ್ಣೀರು ಬಿಡುವ ಅಭ್ಯಾಸವನ್ನು ಬಿಡಬೇಕೆಂದು ಬೋಧಿಸಿದನು. ದುರ್ಬಲವಾದುವುಗಳು ಜಳ್ಳು, ಸಬಲವಾದುವು ಕಾಳು. ಜಳ್ಳನ್ನು ತೂರಿ ಕಾಳನ್ನು ಆರಿಸುವುದೇ ಪ್ರಕೃತಿಯ ಕೆಲಸವಾದ್ದರಿಂದ ಅದಕ್ಕೆ ಸಹಾಯಕ ರಾಗಿ ನಾವು ನಿಲ್ಲುವುದು ನಮ್ಮ ಕರ್ತವ್ಯವೆಂದು ಭಾವಿಸಿದನು. ಹೋಗಬೇಕಾದು ದಕ್ಕೆ ಮರುಗುವುದೇಕೆ, ಕೊರಗುವುದೇಕೆ ಎಂಬುದು ನೀಚ್ಚೆಯ ಪಕ್ಷ.

ವ್ಯಕ್ತಿಗಳಲ್ಲಿ ಸಬಲರು ಅಬಲರು ಹೇಗೋ ಹಾಗೆ ಜನಾಂಗಗಳಲ್ಲಿಯೂ

ವ್ಯತ್ಯಾಸ ಉಂಟು. ಜನಾಂಗಗಳು ಪ್ರಾಬಲ್ಯವನ್ನು ಗಳಿಸುವುದಕ್ಕಾಗಲಿ, ಗಳಿಸಿ ದನ್ನು ಉಳಿಸಿಕೊಳ್ಳುವುದಕ್ಕಾಗಲಿ ಸತತವಾದ ಜಾಗರೂಕತೆ ಆವಶ್ಯಕ. ಜಾಗರೂಕತೆ ಸಂಗ್ರಾಮಮನೋಭಾವವನ್ನು ತಾಳುತ್ತದೆ. ಹೋರಾಟ ಸ್ಪರ್ಧೆ ಮುಗಿಯಿತೆಂದರೆ ಅಲ್ಲಿಗೆ ಜನಾಂಗಗಳ ಪ್ರಗತಿ ಮುಕ್ತಾಯವಾದ ಆದ್ದರಿಂದ ಯಾವುದಾದರೂ ಜನಾಂಗ ತಲೆಯೆತ್ತಿ ಜಗತ್ತಿನಲ್ಲಿ ನಿಲ್ಲಬೇಕಾದರೆ ಅದು ಯುದ್ಧೋನ್ಮುಖವಾಗಿರಬೇಕು. ಇಂತಹ ಜನಾಂಗಕ್ಕೆ ಜಯ ಲಭಿಸಬೇಕಾ ದುರ್ಬಲವಾದ ಜನಾಂಗಗಳು ಜಳ್ಳಿನಂತೆ ಬಲಪ್ರಯೋಗದ ಬಿರುಗಾಳಿಯಲ್ಲಿ ಹೋಗಬೇಕಾಗುತ್ತದೆ. ಈ ದೃಷ್ಟಿಯಿಂದ ನೀಜ಼ೆ ಯುದ್ಧನೀತಿಯನ್ನು ಪ್ರೋ ಹಿಸುವಂತಹ ಮಾತುಗಳನ್ನಾಡಿರುತ್ತಾನೆ. ಯುದ್ಧನೀತಿಯ ನಿರಾಕರಣೆ ನೀಜ಼ೆ ಊಹಿಸುವ ದೊಡ್ಡ ಆಪತ್ತೆಂದರೆ ಅಪಕೃಷ್ಟ ಜನಾಂಗಗಳು ಉತ್ಕೃ ಜನಾಂಗಗಳನ್ನು ಕ್ರಮೇಣ ಮುಳುಗಿಸುವುದು. ಈ ದೃಷ್ಟಿಯಿಂದ ಶಾಂತಿಪ್ರಿ (Pacifists) ದೇಶದ್ರೋಹಿಗಳು. ತಮ್ಮ ದೌರ್ಬಲ್ಯದ ದೆಸೆಯಿಂದ ಬಲಪ್ರಯೋ ಸಿದ್ಧರಲ್ಲದವರು ತಮಗಿಂತಲೂ ಬಲಿಷ್ಠರಾದವರನ್ನು ತಮ್ಮ ಮೇಲೆ ಬೀ ಮಾಡಲು ಹೂಡಿದ ನರಿಯ ಉಪಾಯವಿದೆಂದು ನೀಜ಼ೆ ಭಾವಿಸುತ್ತಾನೆ. ಜನಾ ಸತ್ವವನ್ನು ಉಳಿಸಿಕೊಳ್ಳಬೇಕಾದರೆ ಯುದ್ಧ ಅತ್ಯಾವಶ್ಯಕವೆಂದು ನೀಜ಼ೆಯ ಮತ. ಜನಾಂಗದಲ್ಲಿ ದೌರ್ಬಲ್ಯದ ಸೂಚನೆ ತೋರಿತೆಂದರೆ ಇದಕ್ಕೆ ಯುದ್ಧ ಬೇರೆ ಮದ್ದಿಲ್ಲವೆಂದು ನೀಜ಼ೆ ಬೋಧಿಸಿದನು. ಈ ಸಮರದರ್ಶನ (Militar ವನ್ನೇ ನೀಜ಼ೆಯ ಅನುಯಾಯಿಗಳಾದ ಜರ್ಮನಿಯ ಶಕ್ತಿ ಸಿದ್ಧಾಂತಿಗಳು ಇ ವರೆಗೂ ಪೋಷಿಸುತ್ತಾ ಬಂದಿರುತ್ತಾರೆ. ಈ ಶಕ್ತಿ ವಾದಿಗಳಲ್ಲಿ ಪ್ರಸಿದ್ಧ ಬರ್ನ್‌ಹಾರ್ಡಿ ಎಂಬಾತ ತನ್ನ "ಜರ್ಮನಿ ಮತ್ತು ಮುಂದಿನ ಯುದ್ಧ" (Germ and the Next War) ಎಂಬ ಗ್ರಂಥದಲ್ಲಿ ಈ ವಾದವನ್ನು ಅದರ ತಾ ತೀರ್ಮಾನದವರೆಗೂ ಎಳೆದೊಯ್ದಿರುತ್ತಾನೆ. ಅವನು ಹೇಳುವುದನ್ನು ಕೇ ಹೀಗೂ ಉಂಟೆ ಎಂದೆನಿಸುವುದು. "ಹೇಗಾದರೂ ಮಾಡಿ ಜನಾಂಗದ ಅಭ್ಯು ಕ್ಕಾಗಿ ಬೇಕಾಗಿ ಯುದ್ಧವನ್ನು ತಂದುಹಾಕುವುದು ರಾಜನೀತಿ ನಿಪುಣರ ನೈ ಮತ್ತು ರಾಜಕೀಯ ಕರ್ತವ್ಯವಾಗಿದೆ"[1] ಎಂದು ಬರ್ನ್‌ಹಾರ್ಡಿ ಬರೆದಿರು ತನ್ನ ಪುಸ್ತಕದ ಮುಖಪತ್ರದ ಮೇಲೆ ನೀಜ಼ೆಯ ಈ ವಾಕ್ಯವನ್ನು ತನ್ನ

[1] "War is one of the essential factors of morality. If circumsta require, it is not only the right but the moral and political duty of a states to bring about a war!"

ವಾಕ್ಯವನ್ನಾಗಿ ಆರಿಸಿ ಬರೆದಿದ್ದಾನೆ. "ಧೈರ್ಯೋತ್ಸಾಹಗಳನ್ನು ಹುರುಪುಗೊಳಿಸುವ ರಣನೀತಿ ನೆರೆಹೊರೆಯರನ್ನು ನಿನ್ನಂತೆ ಪ್ರೀತಿಸು ಎನ್ನುವ ನೀತಿಗಿಂತಲೂ ಜಗತ್ತಿಗೆ ಹೆಚ್ಚು ಉಪಕಾರವಮಾಡಿದೆ"—ಎಂಬುದೇ ಈ ವಾಕ್ಯ. ಈ ರೀತಿಯ ಸಿದ್ಧಾಂತಗಳ ರಣಭೇರಿಯೇ ಇಂದು ಜಗತ್ತಿನಲ್ಲಿ ಇಷ್ಟು ಅಶಾಂತಿಯನ್ನು ಎಬ್ಬಿಸಿರುವುದರಲ್ಲಿ ಸಂಶಯವಿಲ್ಲ.

ನೀತಿಬಾಹ್ಯವಾದ ಪ್ರಾಬಲ್ಯದ ಸ್ವೇಚ್ಛಾಪ್ರವರ್ತನೆ ಜನರ ಮನಸ್ಸನ್ನು ಆವರಿಸಿರುವುದು ನಮ್ಮ ಕಾಲದ ಭಯಂಕರ ಸನ್ನಿವೇಶ. ಈ ಸನ್ನಿವೇಶ ತೊಲಗಿ ಪುನಃ ಶಾಂತಿಸ್ಥಾಪನೆಯಾಗಬೇಕಾದರೆ ಅನಿಯತ ದುರಂತಶಕ್ತಿಗಳ ದಮನವಾಗಲೇಬೇಕು. ಇಂತಹ ಶಕ್ತಿಗಣಗಳ ದಮನವಾಗಬೇಕಾದರೆ ಅಧ್ಯಾತ್ಮ ಶಕ್ತಿಗಳು ಪ್ರಬಲವಾಗಬೇಕು, ಇವು ಎಚ್ಚತ್ತು ಆಸುರೀಶಕ್ತಿಗಳನ್ನು ತುಳಿಯಬೇಕು. ನಟರಾಜನ ನಾಟ್ಯಲೀಲೆಯಿಂದ ರಾಕ್ಷಸಶಕ್ತಿಗಳ ದಮನವಾಗಿ ಸುಖಶಾಂತಿಗಳ ಲಾಸ್ಯ ಜನರ ಮನಸ್ಸಿನ ಮೇಲೆ ತನ್ನ ಪ್ರಭಾವವನ್ನು ಬೀರಬೇಕು. ಮಾನವನಲ್ಲಿ ಹುದುಗಿರುವ ದೈವೀಶಕ್ತಿಯೇ ನಿಜವಾದ ಶಕ್ತಿ. ದೇವತ್ವದ ವಿಕಾಸ ಯಾವನಲ್ಲಿ ಸಂಪೂರ್ಣತೆಯನ್ನು ಹೊಂದಿ ಲೋಕಕಲ್ಯಾಣಕ್ಕಾಗಿ ತನ್ನ ಸ್ವಾರ್ಥವನ್ನು ಮರೆತು ದುಡಿಯುವನೋ ಅವನೇ ಅತಿಮಾನವನು, ಅವನೇ ಅವತಾರಪುರುಷ, ಧರ್ಮದ ಮೂರ್ತಿ, ಲೋಕರಕ್ಷಕ. ಇದನ್ನು ಬಿಟ್ಟು ಅಹಂಕಾರದಿಂದ, ಬರಿಯ ದರ್ಪದಿಂದ, ಅಧಿಕಾರಮದದಿಂದ 'ಈಶ್ವರೋಽಹಂ' ಎಂಬ ಅಮಲು ತಲೆಹತ್ತಿದವನು ಒಂದು ವಿಧವಾದ ಉನ್ಮತ್ತನೇ ಸರಿ. ಇಂತಹ ಉನ್ಮತ್ತರು ಶಕ್ತಿಯುತರಾದರೆ ಜಗತ್ತಿನ ಕ್ಷೋಭೆಗೆ ಕಾರಣರಾಗುವರು. ಈ ಪಾಠವನ್ನು ಚರಿತ್ರೆ ನಮಗೆ ಎಷ್ಟೋ ಸಾರಿ ಕಲಿಸಲು ಪ್ರಯತ್ನಪಟ್ಟಿದೆ.

ಯಾವ ವ್ಯಕ್ತಿಯಾಗಲಿ ಜನಾಂಗವಾಗಲಿ ನಿರ್ವೀರ್ಯವಾಗಿ ನಿಸ್ತೇಜವಾಗಿ ಬಾಳಲಾರದೆಂಬ ತತ್ವವನ್ನು ನೀಚ್ಚೆ ಪ್ರತಿಪಾದಿಸಿದಂತೆ ಇನ್ನಾವ ಜಗದ್ವಿಖ್ಯಾತ ಪುರುಷನೂ ಪ್ರತಿಪಾದಿಸಿಲ್ಲವೆಂದು ಧಾರಾಳವಾಗಿ ನಂಬಬಹುದು. ಆದರೆ ಈ ಬಲ, ಶಕ್ತಿ ಎಂತಹುದೆಂಬುದನ್ನು ನಿರ್ಣಯಮಾಡಿಕೊಂಡ ಹೊರತು ಶಕ್ತಿಸಿದ್ಧಾಂತಗಳು ನಮ್ಮನ್ನು ತಪ್ಪುದಾರಿಗೆ ಎಳೆಯುವುದರಲ್ಲಿ ಸಂದೇಹವಿಲ್ಲ. ಬಲದಲ್ಲಿಯೂ ಸಾತ್ವಿಕ, ರಾಜಸ, ತಾಮಸಗಳೆಂದು ವಿಂಗಡಿಸುವುದು ಒಳ್ಳೆಯದೆಂದು ನಮಗೆ ತೋರುವುದು. ನೀಚ್ಚೆಯಲ್ಲಿ ಇಂತಹ ವಿಂಗಡಣೆ ಇಲ್ಲದಿರುವುದು ಒಂದು ದೊಡ್ಡ ಲೋಪ. "ನಾಯಮಾತ್ಮಾ ಬಲಹೀನೇನ ಲಭ್ಯಃ" ಎಂದು ಉಪನಿಷತ್ತು ಸಾರುತ್ತದೆ. ಈ 'ಬಲ' ಎಂಬ ಮಾತಿನಿಂದ ಅಧ್ಯಾತ್ಮವಿಕಾಸಕ್ಕೆ ಒತ್ತಾಸೆಯಾಗುವ ದೈಹಿಕ ಮತ್ತು ಮಾನಸಿಕ ಬಲವೆಂದು ಅರ್ಥವಾದುದರಿಂದ ಇಂತಹ ಬಲ ಇರಬೇಕಾದುದು ಮನುಷ್ಯನಿಗೆ

ಅತ್ಯಗತ್ಯ. ಈ ವಿಷಯಗಳಲ್ಲಿ ದೌರ್ಬಲ್ಯ ಹಾನಿಕರ. ಆದರೆ ನೀಚ್ಚೆಯ ಅಭಿಪ್ರಾ ದಲ್ಲಿ 'ಬಲ' ಎನ್ನುವುದಕ್ಕೆ ಕ್ಷಾತ್ರಬಲ ಮಾತ್ರ ಎಂದೊಂದು ಸಲವೂ, ಬ ಬಲವೆಂದು ಕೆಲವೆಡೆಗಳಲ್ಲಿಯೂ ಅರ್ಥವಾಗುವುದು. ಇದನ್ನೇ ಅಧ್ಯಾತ್ಮಬಲ ನೀಚ್ಚೆ ಭ್ರಮೆಪಟ್ಟಿರುವನು. ಯೇಸು, ಬುದ್ಧ, ಝಾರತುಷ್ಟ್ರ ಮೊದಲಾದ "ಮಾನವರು" ಅಧ್ಯಾತ್ಮ ಬಲಪೂರಿತರಾಗಿದ್ದರು. ಇವರು ಅಹಂಕಾರ ರಾಗಿದ್ದರು. ತ್ಯಾಗ, ವೈರಾಗ್ಯ, ಭೂತದಯೆ ಪಶ್ಚಾತ್ತಾಪಪೂರಿತರಾಗಿ ಇವರ ಸುಂದರ ಪವಿತ್ರಜೀವನವು ತಮ್ಮ ಕಾಲದವರ ಮೇಲಲ್ಲದೆ ಎಲ್ಲಾ ಕಾಲ ಮೇಲೆಯೂ ತನ್ನ ಪ್ರಭಾವವನ್ನು ಬೀರಿತು. ನೀಚ್ಚೆ ನೆಪೋಲಿಯನ್‌ನಂಥ ಮಾತ್ರ ಆದರ್ಶಪುರುಷರನ್ನಾಗಿ ಜಗತ್ತಿಗೆ ತೋರಿಸಿದನು. ಆದರೆ ಮಾನವನ ಕಲ್ಯಾಣದ ದೃಷ್ಟಿಯಿಂದ ನೆಪೋಲಿಯನ್ ಅಂಥವರು ಅಷ್ಟೇನೂ ಅತಿಮಾನ ಮಾನವನನ್ನು ಕೈಹಿಡಿದು ಪಶುಜೀವನದಿಂದ ಮೇಲೆತ್ತಿ ಅವನಲ್ಲಿ ಹುದುಗಿರುವ ತೇಜಸ್ಸನ್ನು ಅವನಿಗೆ ತೋರಿಸಿಕೊಡುವವರು ನಿಜವಾದ 'ಅತಿಮಾನವರು' ಗಣಿಸಬೇಕಾಗಿದೆ. ಈ ಅಂಶವನ್ನು ನೀಚ್ಚೆ ಅನೇಕ ಕಾರಣಗಳಿಂದ ಮ ಇದರಿಂದ ಅವನ ದೃಷ್ಟಿ ಸಂಕುಚಿತವಾಯಿತು ಮತ್ತು ಕಳಂಕಿತವಾಯಿತು. ಅಧ್ಯಾತ್ಮದ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಪ್ರಚಾರದಲ್ಲಿದ್ದ ದೋಷಗ ನಿರ್ದಾಕ್ಷಿಣ್ಯವಾಗಿ ಮೂಲೋತ್ಪಾಟನ ಮಾಡಿದುದು ನೀಚ್ಚೆಯ ಮಹದುಪ ಶರೀರದಲ್ಲಿ ದೋಷ ಉತ್ಪತ್ತಿಯಾದರೆ ಅದನ್ನು ತೊಡೆಯಲು ವೈದ್ಯನು ಮ ಕೊಡುವನಷ್ಟೆ. ಆ ಮದ್ದು ರೋಗ ಇರುವವರೆಗೂ ಬಹಳ ಉಪಯೋಗವಾ ಆದರೆ ರೋಗ ಹೋಗಿ ಆರೋಗ್ಯ ತೋರಿದಾಗ ಅದೇ ಮದ್ದು ನಿತ್ಯದ ಆಹಾ ಲಾರದು. ಹಾಗೆಯೇ ನೀಚ್ಚೆ ಯೂರೋಪಿನ ನಾಗರಿಕತೆಯಲ್ಲಿ ತೋರಿದ ರೋ ವನ್ನು ತೊಡೆಯಲು ಬಂದ ರಣವೈದ್ಯ. ಆದರೆ ರೋಗಸ್ಥಿತಿಯಲ್ಲಿ ಇವನು ಕೊ ಮದ್ದು ಎಂದೆಂದಿಗೂ ಮಾನವರ ಆಹಾರವಾಗಲಾರದೆಂಬುದನ್ನು ನಾವು ನೆ ನಲ್ಲಿಟ್ಟುಕೊಳ್ಳಬೇಕು.

ನೀಚ್ಚೆ ತನ್ನ ಸುತ್ತಲೂ ಕಂಡ ಕಾಪಟ್ಯವನ್ನು ನೋಡಿ ಸಹಿಸಲಾರದವ ಲೋಕದಲ್ಲಿ ಜನರ ಬಡತನ ರೋಗ ಮತ್ತಿತರ ಕ್ಲೇಶಗಳನ್ನು ನೋಡಿ ಸಹಿಸಲಾ ಹೋದ. ಯಾರು ಯಾರು ಏನೇನು ಪ್ರಯತ್ನಗಳನ್ನು ಮಾಡಿದರೂ ಸಮಾ ಸ್ಥಿತಿ ಇದ್ದಹಾಗೆಯೇ ಇದ್ದದ್ದನ್ನು ನೋಡಿ ನಿರುಪಾಯನಾದ. ಏನು ಮಾ ವುದಕ್ಕೂ ತೋಚದೆ ಇರುವ ಸಮಾಜದ ವ್ಯವಸ್ಥೆಯನ್ನು ಅಳಿಸಿಹಾಕಿ ಹೊಸ ಸಮಾಜವನ್ನು ನಿರ್ಮಾಣಮಾಡಿದ ಹೊರತು ಗತಿ ಇಲ್ಲವೆಂದು ಮನಗಂ

ಇವೆಲ್ಲ ವಿಚಾರಗಳು ಇವನ ಮನಸ್ಸಿನಲ್ಲಿ ಎರಕಹುಯ್ದಂತಾಗಿ ಬಿಸಿಬಿಸಿಯಾಗಿ ಅವನ ಮನಸ್ಸಿನ ಭಾಂಡದಿಂದ ಹೊರಗೆ ಸುರಿಯಿತು. ಆ ಬಿಸಿಯನ್ನು ಅವನೇ ತಡೆಯಲಾರದವನಾದನು. ಮನಸ್ಸಿನ ನೆಮ್ಮದಿ ತಪ್ಪಿ ಚಿತ್ತಭ್ರಮೆ ಉಂಟಾಯಿತು. ಕಣ್ಣಿನ ದೃಷ್ಟಿ ಮಂದವಾಯಿತು. ಜಗತ್ತನ್ನು ಉದ್ಧಾರಮಾಡಲು ತಾನು ಅವತಾರ ವೆತ್ತಿರುವೆನೆಂದು ಭಾವಿಸಲು ಮೊದಲುಮಾಡಿದನು. ತನ್ನ ಮಹಿಮೆಯನ್ನು ತನ್ನ ಕಾಲದವರು ಅರಿಯಲಿಲ್ಲವೆಂದು ಎಲ್ಲರನ್ನೂ ದೂಷಿಸಲು ತೊಡಗಿದನು. "ನನ್ನ ಕಾಲ ಇನ್ನೂ ಒದಗಿಲ್ಲ; ಆದರೆ ನಾಳಿದ್ದು ನನ್ನದು" ಎಂದು ಅವನ ಕೊನೆಯ ಗ್ರಂಥದಲ್ಲಿ ಬರೆದನು.

ಇವನ ಕಡೆಯವರು ನೀಚ್ಚೆಯನ್ನು ಉನ್ಮತ್ತರ ವಿಶ್ರಾಂತಿ ಆಲಯಕ್ಕೆ ಕರೆ ದೊಯ್ದರು. ಆದರೆ ಇವನ ಮುದಿತಾಯಿ ಇವನನ್ನು ಬಹಳಕಾಲ ಅಲ್ಲಿ ಇರಗೊಡಲಿಲ್ಲ. ಕ್ರೈಸ್ತಧರ್ಮಶ್ರದ್ಧೆಯುಳ್ಳ ಈಕೆ ಅಷ್ಟು ದಿವಸವೂ ತನ್ನ ಮಗನ ಧರ್ಮಭ್ರಷ್ಟತೆ ಯನ್ನು ತಾಳ್ಮೆಯಿಂದ ಸಹಿಸಿದ್ದಳು. ಈಗ ನಿಸ್ಸಹಾಯಕನಾದ ತನ್ನ ಮಗನನ್ನು ಪುನಃ ತನ್ನ ಮಡಿಲಲ್ಲಿ ಹಾಕಿಕೊಂಡಳು. ತಾನಿರುವವರೆಗೂ ಆತನಿಗೆ ಬೇಕಾದ ಉಪಚಾರಮಾಡಿದಳು. ಅವಳು ತೀರಿದನಂತರ ಅವನ ಸಹೋದರಿಯು ಅವನನ್ನು ತನ್ನ ರಕ್ಷಣೆಗೆ ತೆಗೆದುಕೊಂಡಳು. ಈ ಸ್ಥಿತಿಯಲ್ಲಿ ಎಂದೂ ಕಾಣದ ಶಾಂತಿಯನ್ನು ನೀಚ್ಚೆ ಕಂಡನು. ಒಂದು ದಿನ ಅವನ ತಂಗಿ ಅವನ ಸ್ಥಿತಿಯನ್ನು ಕಂಡು ಕಣ್ಣೀ ರಿಟ್ಟಳು. ಆಗ ನೀಚ್ಚೆ ಅವಳನ್ನು ನೋಡಿ "ತಂಗಿ, ಅಳುವುದೇಕೆ? ನಾವೀಗ ಸುಖವಾಗಿರುವೆವಲ್ಲ" ಎಂದನಂತೆ.

ನೀಚ್ಚೆ ಅವನ ೫೬ನೆಯ ವಯಸ್ಸಿನಲ್ಲಿ ಗತಿಸಿದನು. ಆದರೆ ಅವನು ಜರ್ಮನಿಯ ಮನಸ್ಸಿನ ಮೇಲೆ ಒತ್ತಿದ ಮುದ್ರೆ ಅಚ್ಚಳಿಯದೆ ನಿಂತಿತು. ನೀಚ್ಚೆ ಜರ್ಮನಿಯ ಶಕ್ತಿ ಸಿದ್ಧಾಂತದ ಆಚಾರ್ಯನಾದ.

ಎಂ. ಯಾಮುನಾಚಾರ್ಯ.

# ವಾಲ್ಟ್ ವಿಟ್‌ಮನ್ ಇಂದ

ಪಶುಗಳೊಡನೆ ಪಶುವಾಗಿಯಾದರೂ ಬದುಕಲೇ? ಅವಕ್ಕೆನಿತು ಶಾಂತಿ, ಎನಿತು ತೃಪ್ತಿ!

ನೋಡುತ್ತಾ ನಿಂತೆನೆಂದರೆ ಘಂಟೆ ಘಂಟೆ ಹರಿದರೂ ಹೊತ್ತು ಗೊತ್ತಾಗುವುದಿಲ್ಲ.

ತಮ್ಮಿರವಿಗೆ ಮರುಗಿ ಅವು ಕುದಿಯುವುದಿಲ್ಲ, ಬಾಯಿ ಬಡಿದುಕೊಳ್ಳುವುದಿಲ್ಲ ಪರದಾಡುವುದಿಲ್ಲ.

ಇರುಳೆಲ್ಲಾ ನಿದ್ದೆಗೆಟ್ಟು ಪಾಪಗಳಿಗಾಗಿ ಪಶ್ಚಾತ್ತಾಪಪಡುವುದಿಲ್ಲ.

ದೇವರು ಧರ್ಮಗಳನ್ನು ಕುರಿತು ಜಿಜ್ಞಾಸೆಮಾಡುತ್ತಾ ನನಗೆ ರೇಜಿಗೆ ಹಿಡಿಸುವುದಿಲ್ಲ.

ಅವುಗಳಲ್ಲಿ ಯಾವೊಂದಕ್ಕೂ ಅತ್ಯಾಸೆಯಿಲ್ಲ; ಯಾವೊಂದೂ ವಸ್ತುಗಳಿಗೆ ಒಡೆಯನಾಗಬೇಕೆಂದು ತಲೆಕೆಡಿಸಿಕೊಂಡಿಲ್ಲ.

ಒಂದಾದರೂ ಮತ್ತೊಂದಕ್ಕೆ ಮೊಣಕಾಲು ಮಣಿಯುವುದಿಲ್ಲ, ಕಾಲಿಗೆ ಬೀಳುವುದಿಲ್ಲ, ಜೊತೆ ಇರುವವಕ್ಕಾಗಲಿ, ಶತಮಾನಗಳಿಗೆ ಹಿಂದೆ ಬದುಕಿದ್ದವುಗಳಿಗಾಗಲಿ.

ಯಾವೊಂದೂ ಶ್ರೀಶ್ರೀಶ್ರೀಯಾಗಿಲ್ಲ; ಹುಡುಕಿದರೂ ಮತ್ಸರದ ಆಸುಳಿ ದೊರೆಯುವುದಿಲ್ಲ.

ಯಾವೊಂದೂ ಬಿರುದುವೊತ್ತು ಗೌರವ ಪದವಿಗೇರಿಲ್ಲ.

"ಹ್ರೀಂ"

---

# ಕೈದಾಳದ ಗತವೈಭವ

## ಭಾಗ ೧

### ಸ್ಥೂಲವಿಚಾರ

ತುಮಕೂರಿನಲ್ಲಿ ಹುಟ್ಟಿ ಬೆಳೆದವರಿಗೆ ಕೈದಾಳವನ್ನೂ ದೇವರಾಯ ದುರ್ಗವನ್ನೂ ನೋಡಬೇಕೆಂಬುದು ಮಹತ್ಕಾಂಕ್ಷೆ. ಅದರಲ್ಲೂ ಕೈದಾಳಕ್ಕೆ ಹೋಗುವುದಕ್ಕೆ ಹೆಚ್ಚಿನ ಆಸೆ. ಏಕೆಂದರೆ ದೇವರಾಯ ದುರ್ಗವು ದೂರ; ಬೆಟ್ಟ ಹತ್ತುವುದು ಕಷ್ಟ ಸಾಧ್ಯ. ಕೈದಾಳವು ತುಮಕೂರಿಗೆ ಮೂರೇ ಮೈಲಿ; ಹೋಗಿಬರಲು ಛಾಟಾ ಮಾರ್ಗ. ಪ್ರಾಯಶಃ ಆಬಾಲವೃದ್ಧರಾರೂ ತಮ್ಮ ಜೀವಿತಕಾಲದಲ್ಲಿ ಕನಿಷ್ಠಪಕ್ಷ ಒಂದು ಸಾರಿಯಾದರೂ ಕೈದಾಳಕ್ಕೆ ಹೋಗದೆ ಇರುವುದಿಲ್ಲ. ಹಾಗಾದರೆ ಕೈದಾಳ ದಲ್ಲೇನಿದೆ? ಅಲ್ಲಿಗೆ ಹೋಗಲು ಜನರು ಸಂಭ್ರಮಪಡುವುದೇಕೆ? ಈ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದೇ ಈ ಉಪನ್ಯಾಸದ ಉದ್ದೇಶವಾಗಿದೆ.

ಪ್ರಾಚೀನ ಕೈದಾಳ—ಕೈದಾಳವು ಪುರಾತನ ಕಾಲದಲ್ಲಿ ಪ್ರಸಿದ್ಧವಾದ ನಗರ. ಶಿಲ್ಪಚಾತುರ್ಯವನ್ನು ವ್ಯಕ್ತಗೊಳಿಸುವ ದೇವಾಲಯಗಳು ಅಲ್ಲಿವೆ. ದೇಶ ವಾತ್ಸಲ್ಯದಿಂದ ಶತ್ರುಗಳೊಡನೆ ಏಕಾಂಗಿಗಳಾಗಿ ಹೋರಾಡಿ ಮಡಿದ ಯೋಧರ ಸ್ಮಾರಕಗಳಾದ ವೀರಗಲ್ಲುಗಳು ಅಲ್ಲಿವೆ. ಸಾಮಂತರಾಜನಾಗಿದ್ದ ಬಾಚಿದೇವನು ಬರೆಯಿಸಿದ ಶಾಸನಗಳು ಇರುವುದು ಅಲ್ಲಿಯೇ. ಎಲ್ಲಕ್ಕಿಂತಲೂ ಹೆಚ್ಚಾಗಿ ಬುದ್ಧ, ಜೈನ, ಈಶ್ವರ, ವಿಷ್ಣು ಮತವಾದಿಗಳು ಸರ್ವಸಮತಾಭಾವದಿಂದ ಬಾಳಿದ ಪವಿತ್ರ ಸ್ಥಳವದು. ಅಲ್ಲಿ ದುರ್ಗಮವಾದ ಕೋಟೆಯಿತ್ತು, ಅರಮನೆಯಿತ್ತು, ಸೈನ್ಯವಿತ್ತು, ಧನಕನಕ ವಸ್ತು ವಾಹನಗಳಿದ್ದುವು. ರಾಜರು, ಮಂತ್ರಿಗಳು, ಪಂಡಿತರು, ಕವಿಗಳು, ಯೋಧರು, ವಣಿಗ್ವರರು ಅಲ್ಲಿ ಜನ್ಮವೆತ್ತಿದ್ದರು. ಉತ್ತಮವಾದ ಉಪ್ಪರಿಗೆ ಮನೆ ಗಳು, ಉದ್ಯಾನಗಳು, ವನಗಳು, ಕಲ್ಯಾಣಿಗಳು ಅಲ್ಲಿ ರಾಜಿಸುತ್ತಿದ್ದುವು. ಆದರೆ ಈಗ ಕೈದಾಳವು ಒಂದು ಹಳ್ಳಿ, ಅರಮನೆಯು ನೆಲಸಮವಾಗಿದೆ. ಕೋಟೆಯು ಮಣ್ಣುಗುಡ್ಡೆಯಾಗಿದೆ. ಯಾವ ಪ್ರದೇಶದಲ್ಲಿ ರಾಜ್ಯ ಲಕ್ಷ್ಮಿಯು ತಾಂಡವವಾಡು ತ್ತಿದ್ದಳೋ ಅಲ್ಲಿ ಈಗ ನಿರ್ಜನವಾದ ಅರಣ್ಯವಿದೆ. ಯಾವ ಪ್ರದೇಶವು ಧನಲಕ್ಷ್ಮಿಯ ಆವಾಸಸ್ಥಾನವಾಗಿದ್ದಿತೋ ಅದು ಈಗ ಕಷ್ಟಜೀವಿಗಳಾದ ರೈತರ ಬೀಡಾಗಿದೆ. ಕಾಲಪುರುಷನ ವ್ಯಾಪಾರವು ಅಚಿಂತ್ಯವಾದುದು, ಅಪರಿಹಾರ್ಯವಾದುದು.

ಈಗ ಎಂಟುನೂರು ವರ್ಷಗಳ ಕೆಳಗೆ ಬರೆದ ಶಾಸನದಲ್ಲಿ ಕೈದಾಳವನ್ನು ಕುರಿತು ಹೀಗೆ ಹೇಳಿದೆ:—

ಅನೇಕ ವಿಳಾಸಕ್ಕಂ ಸಕಳ ಲಕ್ಷ್ಮೀನಿವಾಸಮುಮೆನಿಸಿ ಸೊಗಯಿಸುವ ಕೈದಾಳಂ.

ಪುರುಗಿದ ಮಾಮರದಿಂ ಬೆಳೆ |
ದೆರಗಿದ ಸೌಗಂಧ ಶಾಲಿಯಿಂ ಪೂಗೊಳದಿಂ ||
ಕೆರೆಯಿಂ ದೇವಾಳಯದಿಂ |
ನೆರೆ ಸೊಗಯಿಸಿ ತೋರ್ಕುಂ ಲೀಲೆಯಿಂ ಕಯ್ದಾಳಂ ||

ವಿವಿಧಾಳಂಕೃತ ದೇವಸೌಧ ತಳದಿಂ ವೇಶ್ಯಾಂಗನಾವಾಟದಿಂ |
ಕವಿರಾಜ ಪ್ರವರರ್ಕಳಿಂ ಸುಳಿವ ನಾನಾಗೇಯ ಚಾತುರ್ಯದಿಂ ||
ನವದೇಸೀಯ ವಿಳಾಸದಿಂ ಸುಬಗಿನಿಂ ಕಯ್ದಾಳವೊಪ್ಪಿರ್ದುದಾ |
ದಿವಿಜೇಂದ್ರೋನ್ನತ ಲೋಕಮಂ ನಗುವಪೋಲ್ ತನ್ನುದ್ಧಸೌಂದರ್ಯದಿಂ ||

ಧನದನನಿಳಿಪ ಪರದರಿಂ |
ಮನುಗಳನಿಳಿಪ ಮುನಿಗಳಿಂ ಬಗೆಗರಿದೆಂಬೊಲ್ ||
ಮನಸಿಜನನಿಳಿಪ ವಿಟರಿಂ |
ವನಿತೆಯರಿಂ ನಾಡೆ ಸೊಗಯಿಕುಂ ಕೈದಾಳಂ ||

ಈಗಿನ ಕೈದಾಳ—ಆದರೆ ಈಗಿನ ಕೈದಾಳವೋ ! ಅದೊಂದು ಕ್ಷುದ್ರಕೊಂಪೆ. ತುಮಕೂರಿನ ವಿಲಾಸಪಟುಗಳಿಗೂ ನಾಗರಿಕರಿಗೂ ಅದೊಂದು ವಿಹಾರ ಭೂಮಿ. ವಿರಾಮ ದೊರೆತಾಗ ಅವರು ವಿಹಾರಕ್ಕಾಗಲಿ, ಗಾಳಿಸವಾರಿ ವ್ಯಾಜದಿಂದಾಗಲಿ, ದೇವರ ದರ್ಶನಾರ್ಥಿಗಳಾಗಿಯಾಗಲಿ ಅಲ್ಲಿಗೆ ಹೋಗಿ ಬರುವರು. ಅವರು ಅಲ್ಲಿಗೆ ಹೋಗಿ ಮಾಡುವುದಾದರೂ ಏನು ? ಶ್ರೀ ಚೆನ್ನಕೇಶವಸ್ವಾಮಿಯವರ ದೇವಾಲಯವನ್ನು ನೋಡುವುದು, ದೇವರಿಗೆ ಹಣ್ಣುಕಾಯಿ ಮಾಡಿಸಿ ಮಂಗಳಾರತಿ ಮಾಡಿಸುವುದು, ಅರ್ಚಕರಿಂದ ದೇವರ ಪ್ರತಿಷ್ಠೆ ವಿಷಯವನ್ನು ತಿಳಿಯುವುದು, ಜಕಣಾಚಾರಿಯ ಕತೆಯನ್ನು ಕೇಳುವುದು—ಇಷ್ಟರಲ್ಲೇ ಕೃತಾರ್ಥರಾಗುವರು. ಪ್ರೇಕ್ಷಕರು "ಸರ್ವದೇವನಮಸ್ಕಾರಃ ಕೇಶವಂ ಪ್ರತಿಗಚ್ಛತಿ" ಎಂಬ ತತ್ತ್ವಾರ್ಥವನ್ನು ಚೆನ್ನಾಗಿ ಮನಗಂಡಿರುವರೋ ಎಂಬಂತೆ ಕೇಶವ ದೇವರನ್ನು ನೋಡಿದ ಮೇಲೆ ಮತ್ತಾವ ದೇವರನ್ನೂ ನೋಡಬೇಕಾದ ಅವಶ್ಯಕವಿಲ್ಲವೆಂದು ತಿಳಿದು "ತೃಪ್ತಾಸ್ಮಿ" ಎಂದು ಹೇಳಿಕೊಂಡು ಕೈದಾಳಕ್ಕೆ ಬೆನ್ನು ತಿರುಗಿಸುವರು. ಹೀಗೆ ಮಾಡುವುದರಿಂದ ಕೈದಾಳಕ್ಕೆ ಹೋಗಿ ಬರುವ ನೂರು ಮಂದಿಯಲ್ಲಿ ತೊಂಭತ್ತೊಂಭತ್ತು ಮಂದಿಗೆ ಹೆಚ್ಚು ಜ್ಞಾನಾರ್ಜನೆಯಾಗುವುದಿಲ್ಲ. ಈ ಸಂದರ್ಭದಲ್ಲಿ "ಅಣ್ಣಪ್ಪ ದಂಡಿಗೆ

ಹೋದರೂ ಒಂದೇ ಮನೆಯಲ್ಲಿದ್ದರೂ ಒಂದೇ" ಎಂದು ಸಾಮತಿಯು ಜ್ಞಾಪಕಕ್ಕೆ ಬರುತ್ತದೆ. ಯಾವುದಾದರೊಂದು ಸ್ಥಳಕ್ಕೆ ಹೋಗಿ ಬರುವುದರಿಂದ ನಿಜವಾದ ಪ್ರಯೋಜನವಾಗಬೇಕೆಂಬುದಕ್ಕೆ ಹಾಸನದ ಡಿಸ್ಟ್ರಿಕ್ಟಿನವರು ಹೇಳುವ ಕತೆಯೊಂದಿದೆ.

ಹಾಸನದಲ್ಲೊಬ್ಬ ಸಾಹುಕಾರ. ಅವನ ಮನೆಯಲ್ಲಿ ಮಾದನೆಂಬ ಒಬ್ಬ ಆಳು. ಅವನಿಗೆ ಪ್ರಪಂಚಜ್ಞಾನ ಕಡಿಮೆ. ಯಜಮಾನನ ಮನಸ್ಸನ್ನು ತಿಳಿದು ಕೆಲಸ ಮಾಡುವುದಿಲ್ಲವೆಂದು ಅವನಿಗೆ ಸದಾ ಆಕ್ಷೇಪಣೆ. ಹೀಗಿರುವಾಗ್ಗೆ ಒಂದಾನೊಂದು ರಾತ್ರಿ ಯಜಮಾನನು "ಬೇಲೂರಿಗೆ ಹೋಗಿ ಬರಬೇಕು" ಎಂದು ತನ್ನ ಹೆಂಡತಿಯೊಡನೆ ಹೇಳುತ್ತಿದ್ದನು. ಈ ಮಾತು ಮಾದನ ಕಿವಿಗೆ ಬಿತ್ತು. ಧಣಿಯ ಮೆಚ್ಚುಗೆಯನ್ನು ಪಡೆಯಲು ಒಳ್ಳೆಯ ಸಮಯ ಒದಗಿತೆಂದು ಯೋಚಿಸಿ ಅವನು ಬೆಳಗಿನಜಾವಕ್ಕೆ ಎದ್ದು ಬೇಲೂರಿಗೆ ಪ್ರಯಾಣಮಾಡಿದನು. ಬೆಳಗಾಗುತ್ತಲೇ ಮನೆಯ ಕೆಲಸಮಾಡಲು ಆಳು ಇಲ್ಲದುದು ಯಜಮಾನಿಗೆ ತಿಳಿದು ಆಕೆಯು ಸಿಡಿಮಿಡಿಗೊಂಡಳು. ವರ್ತಮಾನವು ಸಾಹುಕಾರನಿಗೂ ತಿಳಿದು ಅವನು ಜನರನ್ನು ಅಲ್ಲಿ ಇಲ್ಲಿ ಕಳುಹಿಸಿ ಆಳನ್ನು ಹುಡುಕಿಸಿದನು. ಏನುಮಾಡಿದರೂ ಆದಿನ ಸಾಯಂಕಾಲವಾಗುವ ವರೆಗೂ ಅವನ ಪತ್ತೆಯೇ ಹತ್ತಲಿಲ್ಲ. ರಾತ್ರಿಯೂ ಆಯಿತು. ಸಾಹುಕಾರನು ಊಟಮಾಡಿ ಆಳು ಎಲ್ಲಿ ಹೋದನೋ ಎಂದು ಚಿಂತಿಸುತ್ತ ಮಲಗಿದನು. ಕಣ್ಣಿಗೆ ನಿದ್ರೆಹತ್ತುವ ಸಮಯ. ಇದ್ದಕ್ಕಿದ್ದ ಹಾಗೆಯೇ ಹೊರಬಾಗಿಲಿನಲ್ಲಿ 'ಬುದ್ಧೀ' ಬುದ್ಧೀ ಎಂದು ಕೂಗಿದ ಸದ್ದು ಕೇಳಿಸಿತು. ಯಜಮಾನನೆದ್ದು ಬಂದು ಬಾಗಿಲು ತೆಗೆದು ನೋಡುತ್ತಾನೆ! ಎದುರಿಗೆ ನಿಂತಿದ್ದಾನೆ ಮಾದ!

ಸಾಹುಕಾರ—ಎಲ್ಲಿಗೆ ಹೋಗಿದ್ದೆಯೋ ಮಾದ?

ಮಾದ—ಬುದ್ಧೀ, ಬೇಲೂರಿಗೆ ಹೋಗಿದ್ದೆ?

ಸಾಹುಕಾರ—ಬೇಲೂರಿನಲ್ಲಿ ನಿನಗೇನು ಕೆಲಸವಿತ್ತು?

ಮಾದ—ಬುದ್ಧೀ, ತಾವು ನೆನ್ನೆರಾತ್ರಿ ಅಮ್ಮಾ ಅವರ ಸಂಗಡ "ಬೇಲೂರಿಗೆ ಹೋಗಿ ಬರಬೇಕು" ಎಂದು ಹೇಳುತ್ತಿದ್ದಿರಿ. ಬುದ್ಧಿಯವರಿಗೆ ಆಯಾಸವಾಗುತ್ತೆಂದು ಯೋಚಿಸಿ ನಾನೇ ಬೇಲೂರಿಗೆ ಹೋಗಿ ಬಂದೆ!

ಕೈದಾಳಕ್ಕೆ ಹೋಗಿಬರುವುದು ಮಾದ ಬೇಲೂರಿಗೆ ಹೋಗಿಬಂದ ಹಾಗಾಗಬಾರದು. ಕೈದಾಳದಲ್ಲೂ ಅದರ ಅಕ್ಕಪಕ್ಕದಲ್ಲೂ ನೋಡಬೇಕಾದ, ವಿಮರ್ಶೆಗರ್ಹವಾದ ಸ್ಥಳಗಳೂ ವಿಷಯಗಳೂ ಅನೇಕವಾಗಿವೆ. ಅಲ್ಲಿನ ಇತಿಹಾಸವು ಮಹತ್ತರವಾದುದು. ಮೈಸೂರು ದೇಶದವರು ಅದರಲ್ಲೂ ತುಮಕೂರಿನವರು ಹೆಮ್ಮೆಪಡಲರ್ಹವಾದುದು.

ಈ ಪುರಾತನ ನಗರದ ಮುಖ್ಯವಾದ ಸ್ಮಾರಕಗಳು ಯಾವುವೆಂದರೆ:—

(1) ಶ್ರೀ ಚೆನ್ನಕೇಶವದೇವರ ಗುಡಿ. ಇದರ ಮಹಾದ್ವಾರದಲ್ಲಿರುವ ಸಾಮಂತ ಬಾಚಿಯ ಶಿಲಾಪ್ರತಿಮೆ.

(2) ಶ್ರೀ ಗಂಗಾಧರೇಶ್ವರನ ಗುಡಿ, ಇದರ ಮುಂಭಾಗದಲ್ಲಿರುವ ವೀರಗಲ್ಲು, ಒಳಗೆ ನವರಂಗದಲ್ಲಿರುವ ಸಾಮಂತಬಾಚಿಯ ಧರ್ಮಶಾಸನದ ಕಲ್ಲುಗಳು.

(3) ಊರಿನ ಹೊರಗೆ ಕೈದಾಳದ ಕೆರೆಯ ಪಶ್ಚಿಮ ಕೋಡಿಬಳಿ ಇರುವ ರಾಮೇಶ್ವರನ ಗುಡಿ. ಇದರ ಪಕ್ಕದಲ್ಲಿರುವ ಗೌರೀಶ್ವರನ ಗುಡಿ. ಆವರಣದಲ್ಲಿ ದಿಕ್ಕಾಪಾಲಾಗಿ ಬಿದ್ದಿರುವ ವೀರಗಲ್ಲುಗಳು.

(4) ಊರಿನ ಉತ್ತರ ದಿಕ್ಕಿನಲ್ಲಿ ತೋಪಿನ ಮಧ್ಯೆ ಇರುವ ಅಮ್ಮನ ತೋಟದ ಬೃಂದಾವನ ಅಥವಾ ಭೀಮಜಿನಾಲಯವೆಂಬ ಅವಶೇಷ. ಮರದಡಿಯಲ್ಲಿರುವ ನಾಗಕನ್ಯೆಯ ವಿಗ್ರಹ—ಇವೆರಡೂ ಜೈನ ಯಾತ್ರಾಸ್ಥಳಗಳು.

(5) ದಕ್ಷಿಣಕ್ಕೆ ಕುಣಿಗಲ್ಲು ರಸ್ತೆಯಿಂದ ಕಾಣುವ ಶೂಲದ ಆಂಜನೇಯನ ಗುಡಿ. ಇದೇ ಕೈದಾಳ ನಗರದ ದಕ್ಷಿಣ ಗಡಿ. ತಪ್ಪಿತಸ್ಥರನ್ನು ಶೂಲಕ್ಕೆ ಹಾಕುತ್ತಿದ್ದ ಜಾಗ ಇದೇ.

(6) ಪೂರ್ವಕ್ಕೆ ಅನತಿದೂರದಲ್ಲಿ ಕಿತ್ತಿಗನ ಹಳ್ಳಿಯಲ್ಲಿರುವ ಚಲುವರೇಶ್ವರನ ಪಾಳುಬಿದ್ದ ಗುಡಿ.

(7) ಭಗ್ನಾವಶೇಷವಾಗಿರುವ ಕೋಟೆ, ಚತುರಂಗಬಲದ ಠಾಣ್ಯ, ಅರೆವಾಸಿ ಮುಚ್ಚಿಹೋಗಿರುವ ಮಾರಸಮುದ್ರ, ಆದಳಸಮುದ್ರ, ಗಂಗಸಮುದ್ರ, ಭೀಮ ಸಮುದ್ರ ಮೊದಲಾದ ಪ್ರಾಚೀನ ಸ್ಮಾರಕಗಳು.

**ಗಂಗಾಧರೇಶ್ವರಾಲಯ**—ಕೈದಾಳದಲ್ಲಿ ದ್ವಾರಸಮುದ್ರದ ಹೊಯ್ಸಳ ಬಳ್ಳಾಳ ನರಸಿಂಹನಕಾಲದ ಎಂದರೆ ೧೧೫೧ನೆಯ ಇಸವಿಯ ಶಾಸನಗಳಿರುವುವೆಂಬುದನ್ನು ಎಷ್ಟುಮಂದಿ ಬಲ್ಲರು? ಶ್ರೀ ಚೆನ್ನಕೇಶವ ದೇವಾಲಯದ ಪಕ್ಕದಲ್ಲೇ ಇರುವ ಗಂಗಾಧರೇಶ್ವರನ ದೇವಸ್ಥಾನವನ್ನು ಕೈದಾಳಕ್ಕೆ ಹೋಗುವವರು ಕಡೆಗಣ್ಣಿನಿಂದಲೂ ನೋಡುವಹಾಗಿಲ್ಲ. ಎಷ್ಟೋ ವೈಭವದಿಂದ ಪ್ರತಿಷ್ಠೆಯಾದ ಈ ದೇವರಿಗೆ ವಾರಕ್ಕೊಂದುಸಾರಿ ಪೂಜೆ; ಹಾಕಿದ ಬಾಗಿಲು ತೆರೆಯುವುದೇ ಅಪರೂಪ; ಯಾತ್ರಿಕರಿಗೆ ಈಶ್ವರದರ್ಶನವೇ ದುರ್ಲಭ. ಸಾಮಂತಬಾಚಿಯ ಶಾಸನಗಳಿರುವುದು ಈ ಗುಡಿಯಲ್ಲಿಯೇ. ಕೈದಾಳದಲ್ಲಿ ಮೊದಲು ಕಟ್ಟಲ್ಪಟ್ಟ ದೇವಸ್ಥಾನವು ಇದೇ. ಈ ದೇವಾಲಯವು ದ್ರಾವಿಡ ಶಿಲ್ಪಶಾಸ್ತ್ರವನ್ನನುಸರಿಸಿದುದು. ಇದರ ನವರಂಗದಲ್ಲಿ ಕರಿಕಲ್ಲಿನಲ್ಲಿ ಅತ್ಯಂತ ನಯುಗೆಲಸ ಮಾಡಿದ ನಾಲ್ಕು ಕಂಬಗಳಿವೆ. ಹೊಯ್ಸಳರ ಕಾಲದ ದೇವ

ಸ್ಥಾನಗಳಲ್ಲಿರುವಂತೆ ನವರಂಗದ ಮೇಲ್ಭಾವಣಿಯಲ್ಲಿ ಅಂದವಾಗಿ ಕಮಲ ಪುಷ್ಪವನ್ನು ಶಿಲ್ಪಿಯು ಕೊರೆದಿದ್ದಾನೆ. ಕಂಬಗಳ ನಾಲ್ಕು ಮುಖಗಳಲ್ಲಿಯೂ ಶಿವ, ಬ್ರಹ್ಮ, ವಿಷ್ಣು, ಭೈರವ, ಕೃಷ್ಣ, ಗಣಪತಿ, ವೀರಭದ್ರ ಮೊದಲಾದ ವಿಗ್ರಹಗಳಿವೆ. ನವರಂಗದ ಈಶಾನ್ಯಮೂಲೆಯಲ್ಲಿ ಪ್ರಸಿದ್ಧವಾದ ಶಾಸನಗಳಿವೆ. ಒಂದನೆಯ ಶಾಸನದ ಮೇಲ್ಭಾಗದಲ್ಲಿ ಲಿಂಗವೂ, ಮತ್ತೊಂದರ ಮೇಲ್ಭಾಗದಲ್ಲಿ ಒಂದರ ಪಕ್ಕದಲ್ಲೊಂದು ವಿಷ್ಣು ಮತ್ತು ಜಿನ ವಿಗ್ರಹಗಳೂ ಇವೆ.

**ಕೇಶವಾಲಯ**—ಈ ದೇವಾಲಯದ ಪಶ್ಚಿಮಕ್ಕೆ ಇದಕ್ಕೆ ಅಂಟಿಕೊಂಡಂತೆ ಇರುವ ಚೆನ್ನಕೇಶವ ದೇವಾಲಯವೂ ದ್ರಾವಿಡ ಶಿಲ್ಪಶಾಸ್ತ್ರವನ್ನನುಸರಿಸಿ ಮಹಾದ್ವಾರದ ಮೇಲ್ಗಡೆ ಗೋಪುರವುಳ್ಳುದಾಗಿದೆ. ನವರಂಗದ ಕಂಬಗಳಲ್ಲಿ ಉತ್ತಮವಾದ ಕೆತ್ತನೆಕೆಲಸ ಮಾಡಿದೆ. ಸಿಂಹಾರೂಢರ ಚಿತ್ರಗಳೂ ಆನೆಯ ಸಾಲುಗಳೂ ಅಶ್ವ ಮತ್ತು ಯಾಳಿ ಸಮೂಹಗಳೂ ಇಲ್ಲಿ ನಾಜೂಕಾಗಿ ಕಾಣುತ್ತವೆ. ಕೇಶವ ದೇವರ ವಿಗ್ರಹವು ಸುಮಾರು ಐದು ಅಡಿ ಎತ್ತರವಾಗಿ ಪಶ್ಚಿಮಾಭಿಮುಖವಾಗಿ ನಿಂತಿದೆ. ಪೀಠವು ಸುಮಾರು ಮೂರು ಅಡಿ ಎತ್ತರ. ಉಭಯಪಾರ್ಶ್ವಗಳಲ್ಲೂ ಶ್ರೀದೇವಿ ಭೂದೇವಿಯರು ನಿಂತಿದ್ದಾರೆ. ನವರಂಗಕ್ಕೆ ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಪ್ರವೇಶದ್ವಾರಗಳಿವೆ. ಉತ್ತರಬಾಗಿಲು ಮಹಾದ್ವಾರಕ್ಕೆ ಅಭಿಮುಖವಾಗಿದೆ. ಮಹಾದ್ವಾರದ ಎಡಗಡೆ ಕಂಬವೊಂದರಲ್ಲಿ ಗರ್ಭಗುಡಿಯಲ್ಲಿರುವ ಚೆನ್ನಕೇಶವದೇವರ ವಿಗ್ರಹದಂತೆಯೇ ಇರುವ ಚಿಕ್ಕಕೇಶವ ಪ್ರತಿಮೆಯು ಕೆತ್ತಲ್ಪಟ್ಟಿದೆ. ಈ ಕಂಬಕ್ಕೆ ಎದುರಾಗಿರುವ ಕಂಬದಲ್ಲಿ ಸುಮಾರು ಒಂದು ಅಡಿ ಮೂರು ಅಂಗುಲ ಎತ್ತರವಿರುವ, ಅಂಜಲಿಬದ್ಧವಾಗಿ ಉತ್ತರೀಯವನ್ನು ಧರಿಸಿ ಕೈಯಲ್ಲಿ ಈಟಿಯನ್ನು ಹಿಡಿದಿರುವ ವೀರಪುರುಷನ ವಿಗ್ರಹವಿದೆ. ಇದೇ ಸಾಮಂತಬಾಚಿಯ ಪ್ರತಿಮೆ. ಭಕ್ತನಾದ ಇವನು ಚೆನ್ನಕೇಶವ ದೇವರ ಎದುರಿಗೆ ಕೈಮುಗಿದುಕೊಂಡು ನಿಂತಿದ್ದಾನೆ. ಉತ್ತರ ಪ್ರಾಕಾರದ ಗೋಡೆಯಲ್ಲಿ ಸವೆದುಹೋಗಿರುವ ಎರಡು ಪುರುಷ ವಿಗ್ರಹಗಳಿವೆ. ಇವುಗಳಲ್ಲಿ ದೊಡ್ಡದು ಜಕಣಾಚಾರಿಯೆಂಬ ಶಿಲ್ಪಿಯದೆಂದೂ, ಸಣ್ಣದು ಡಂಕಣಾಚಾರಿಯದೆಂದೂ ಜನರು ಅಂದುಕೊಳ್ಳುತ್ತಾರೆ. ಈ ವಿಚಾರವು ಅನುಮಾನಾಸ್ಪದವಾದುದೆಂದು ಮುಂದೆ ತಿಳಿಯುವುದು.

**ಭೀಮಜಿನಾಲಯ**—ಕೈದಾಳದ ಪ್ರಾಚೀನ ವೈಭವಕ್ಕೆ ಕಾರಣನಾದ ಸಾಮಂತಬಾಚಿಯು ವಿಶೇಷವಾಗಿ ಜೈನಮತಾವಲಂಬಿ. ಆದರೂ ಇತರ ಮತಗಳ ದ್ವೇಷಿಯಲ್ಲ. ಅವನ ಪ್ರಿಯತಮೆಯಾದ ಭೀಮಳೆದೇವಿಯು ಮಾತ್ರ ಅನನ್ಯ ಸಾಧಾರಣ ಜಿನಭಕ್ತಳು. ಆಕೆಯ ಇಷ್ಟಾನುಸಾರ ಸಾಮಂತಬಾಚಿಯು ಭೀಮಜಿ

ನಾಲಯವೆಂಬ ಬಸದಿಯನ್ನು ಕಟ್ಟಿಸಿದನೆಂದು ಶಾಸನದಲ್ಲಿ ಹೇಳಿದೆ. ಆದರೆ ಆ ಬಸದಿಯ ಗುರುತೇ ಕೈದಾಳದಲ್ಲಿಲ್ಲ. ಈ ಬಸದಿಗೆ ಬಿಟ್ಟದತ್ತಿಯು ಯಾರ ಉದರಭರಣಕ್ಕೋ ಆಗಿಹೋಗಿದೆ. ಬಸದಿಯು ಕಾಲನ ಕರಾಳದಂಷ್ಟ್ರಕ್ಕೆ ಆಹುತಿಯಾಯಿತೋ, ಮತಾಂಧರ ಆಹುತಿಗೆ ಸಿಕ್ಕಿ ಧ್ವಂಸವಾಗಿ ಹೋಯಿತೋ ಹೇಳುವುದಕ್ಕಾಗುವುದಿಲ್ಲ. ಈ ಬಸದಿಯು ಕೈದಾಳದ ಕೆರೆಯ ಅಂಗಳದಲ್ಲಿತ್ತೆಂದೂಹಿಸಲವಕಾಶವಿದೆ.

**ರಾಮೇಶ್ವರ, ಗೌರೀಶ್ವರರು**—ಊರಹೊರಗಿರುವ ರಾಮೇಶ್ವರ, ಗೌರೀಶ್ವರರ ಪಾಳುಬಿದ್ದ ಗುಡಿಗಳನ್ನು ನೋಡಿದರೆ ಯಾರಿಗಾದರೂ ಮರುಕವುಂಟಾಗುವುದು. ಎತ್ತರವಾದ ದಿಣ್ಣೆಗಳ ಮೇಲೆ ಕಟ್ಟಿರುವ ಈ ಗುಡಿಗಳು ಒಂದಾನೊಂದು ಕಾಲದಲ್ಲಿ ಬಹು ಸುಂದರವಾಗಿದ್ದುವೆಂದು ತೋರುವುದು. ರಾಮೇಶ್ವರನ ಗುಡಿಯು ಬಾಚಿಯ ಮಗಳ ಸ್ಮಾರಕ. ಈ ದೇವರುಗಳಿಗೂ ಬಾಚಿಯು ದತ್ತಿಯನ್ನು ಬಿಟ್ಟಿದ್ದಾನೆ. ಆದರೆ ಅವುಗಳಿಗೆ ಪೂಜೆ ನಡೆಯುವುದು ಸಂದೇಹ.

**ವೀರಗಲ್ಲುಗಳು**—ಕೈದಾಳದಲ್ಲಿರುವ ವೀರಗಲ್ಲುಗಳ ಈಗಿನ ಸ್ಥಿತಿಯು ವಿಷಾದಕರವಾಗಿದೆ. ಪ್ರಾಣದ ಮೇಲಿನ ಆಸೆಯನ್ನು ತೊರೆದು ಗೋಗ್ರಹಣಾದಿ ಯುದ್ಧಗಳಲ್ಲಿ ಏಕಾಂಗಿಗಳಾಗಿ ಕಾದಿ ರಣರಂಗದಲ್ಲಿ ಮಡಿದ ಸ್ವಾಮಿ ಸೇವಾಧುರಂಧರರಾದ ಯೋಧರ ಸ್ಮಾರಕಗಳಾದ ವೀರಗಲ್ಲುಗಳು ರಾಮೇಶ್ವರ, ಗೌರೀಶ್ವರ ಗುಡಿಗಳ ಆವರಣದಲ್ಲಿ ಅಲ್ಲಲ್ಲಿ ಮಕ್ಕಡೆಯಾಗಿ ಬಿದ್ದು ಮಣ್ಣು ಮುಕ್ಕುತ್ತಿವೆ. ದನಕಾಯುವ ಹುಡುಗರಿಗೆ ಆಸನಗಳಾಗಿಯೋ, ಕುಡುಗೋಲು ಮಸೆಯುವುದಕ್ಕೆ ಚಕ್ಕಿ ಕಲ್ಲುಗಳಾಗಿಯೋ, ಅಜ್ಞರಾದ ಹೆಂಗಸರು ಕಾರ ಅರೆಯುವುದಕ್ಕಾಗಿಯೋ ಅವು ಉಪಯೋಗವಾಗುತ್ತಿವೆ. ಬಟ್ಟೆಯೊಗೆಯುವುದಕ್ಕೂ ಬೆರಣಿ ತಟ್ಟುವುದಕ್ಕೂ ಅವು ಇನ್ನೂ ಉಪಯೋಗವಾಗದಿರುವುದು ಸಂತೋಷದ ಸಂಗತಿ.

**ಚಲುವರೇಶ್ವರ ದೇವಾಲಯ**—ಕೈದಾಳದ ಆಗ್ನೇಯಕ್ಕೆ ಸುಮಾರು ಮೂರು ಮೈಲಿ ದೂರದಲ್ಲಿರುವ ಕಿತ್ತಿಗನ ಹಳ್ಳಿಯಲ್ಲಿ ಸಾಮಂತಬಾಚಿಯು ತನ್ನ ಪಿತಾಮಹನ ಜ್ಞಾಪಕಾರ್ಥವಾಗಿ ಚಲುವರೇಶ್ವರ ದೇವಾಲಯವನ್ನು ಕಟ್ಟಿಸಿದನು. ಅದರ ಈಗಿನ ಸ್ಥಿತಿಯು ಅತ್ಯಂತ ದುಃಖಾವಹವಾಗಿದೆ. ಈಗಿನ ಭಗ್ನಾವಶೇಷಾವಸ್ಥೆಯಲ್ಲೂ ಅದರ ತೇಜಸ್ಸು ಕುಂದಿಲ್ಲ. ಶಿಲ್ಪಿಯ ಉಚ್ಚತರವಾದ ಕೆಲಸವು ಈಗಲೂ ಅಚ್ಚಳಿಯದೆ ಇದೆ. ಇದರ ಅನೇಕ ಕಲ್ಲಿನ ದೂಲಗಳನ್ನು ದೈವದ್ರೋಹಿಗಳಾರೋ ಆಗಲೇ ಕದ್ದೊಯ್ದಿದ್ದಾರೆ. ಒಂದಾನೊಂದು ದೂಲವನ್ನು ರಾತ್ರಿವೇಳೆಯಲ್ಲಿ ಕದ್ದೊಯ್ಯುವಾಗ ಬಂಡಿಯ ಅಚ್ಚು ಮುರಿದುಹೋಗಿ ಅದು ಈಗಲೂ ಅಲ್ಲಿಯೇ ಬಿದ್ದು ಮಣ್ಣಿನಲ್ಲಿ ಹೂತುಹೋಗಿದೆ. ಗರ್ಭಗುಡಿಯಲ್ಲಿದ್ದ ಲಿಂಗವನ್ನು ಯಾರೋ

ಒಂದು ಪುರುಷ ಪ್ರಮಾಣ ಅಗೆದು ತೆಗೆದುಕೊಂಡು ಹೋಗಿರುತ್ತಾರೆ. ನವರಂಗದ ಮೇಲ್ಛಾವಣಿಯನ್ನು ಅರೂಪಮಾಡಿದ್ದಾರೆ. ಪೀಠವೂ ಲಿಂಗವೂ ಈಗಲೂ ಯಾರೋ ಪುಣ್ಯಾತ್ಮರ ಮನೆಯಲ್ಲಿ ಒರಳುಕಲ್ಲೂ ಗುಂಡೂ ಆಗಿವೆಯಂತೆ! ಈ ದೇವರಿಗೆ ಕಿತ್ತಿ ಗಳ್ಳಿಯಲ್ಲಿ ಬಾಚಿ ದೇವನು ಬಿಟ್ಟ ಜಮೀನು ಯಾರ ಪಾಲಾಗಿದೆಯೋ ಪರಮೇಶ್ವರ ನಿಗೇ ಗೊತ್ತು. ಈಚೆಗೆ ಈ ಗ್ರಾಮದಲ್ಲಿ ಸಿದ್ಧಲಿಂಗೇಶ್ವರ, ರಂಗನಾಥಸ್ವಾಮಿಯೆಂಬ ಹೊಸ ದೇವರುಗಳು ಹುಟ್ಟಿಕೊಂಡಿದ್ದಾರೆ. ಎಂಟುನೂರು ವರ್ಷಗಳ ಕೆಳಗೆ ಪ್ರತಿಷ್ಠಿತ ನಾದ ಚಲುವರೇಶ್ವರನು ಮಾಯವಾಗಿ ಹೋಗಿದ್ದಾನೆ. ಪಾಳು ಗುಡಿ ಮಾತ್ರ ಕೆರೆಯ ಅಂಗಳದಲ್ಲಿ ಎತ್ತರವಾದ ಮಣ್ಣು ಗುಡ್ಡೆಯ ಮೇಲೆ ನಿಂತಿದೆ. ಕೆರೆಯು ತುಂಬಿದಾಗ ಇದೊಂದು ದ್ವೀಪ. ಆವರಣದಲ್ಲಿ ನಿಲ್ಲಿಸಿರುವ ವಿಸ್ತಾರವಾದ ಚಪ್ಪಡಿ ಕಲ್ಲಿನಲ್ಲಿ ಏನೋ ಶಾಸನವಿತ್ತೆಂದು ಕಾಣುತ್ತದೆ. ಈಗ ಅದು ಸಾಣೆಯ ಕಲ್ಲಾಗಿದೆ. ಅಕ್ಷರಗಳೆಲ್ಲಾ ನುಣ್ಣಗೆ ಸವೆದುಹೋಗಿವೆ. ದುರಾತ್ಮರಾರೋ ಶಾಸನದಲ್ಲಿ ಒಂದು ಅಕ್ಷರವೂ ಕಾಣದಂತೆ ಕಲ್ಲನ್ನು ತೇದುಹಾಕಿರಬೇಕು. ಈ ಶೋಚನೀಯ ಪರಿಸ್ಥಿತಿಯು ಕಿತ್ತಿಗಳ್ಳಿ ಯವರಿಗೆ ಕೀರ್ತಿ ತರುವಹಾಗಿಲ್ಲ. ಆದ್ದರಿಂದ ಅವರು ದೇವಾಲಯವನ್ನು ದುರಸ್ತು ಮಾಡಿ ಮಾಯವಾಗಿ ಹೋಗಿರುವ ಚಲುವರೇಶ್ವರನ ಪ್ರತ್ಯಾಮ್ನಾಯವಾಗಿ ಬೇರೊಂದು ಲಿಂಗವನ್ನು ಪ್ರತಿಷ್ಠೆ ಮಾಡಿಸಿದರೆ ಅವರಿಗೆ ದೇವರು ಒಳ್ಳೆಯದನ್ನು ಮಾಡಿಯಾನು.

ಅಮ್ಮನ ತೋಟದ ಬೃಂದಾವನ—ಕೈದಾಳದ ಉತ್ತರ ದಿಕ್ಕಿನಲ್ಲಿರುವ ತೋಪಿನ ಮಧ್ಯೆ ಇರುವ ಅಮ್ಮನ ತೋಟವೆಂಬ ಬೃಂದಾವನವು ಪ್ರಾಯಶಃ ಭೀಮ ಜಿನಾಲಯವೆಂಬ ಬಸದಿಯು ಇದ್ದ ಸ್ಥಳವೆಂದು ತೋರುತ್ತದೆ. ಈಗ ನಾವು ಅಲ್ಲಿ ನೋಡುವ ಬೃಂದಾವನವು ಯಾರೋ ಪತಿವ್ರತೆಯು ಸಹಗಮನ ಮಾಡಿದ ಜ್ಞಾಪ ಕಾರ್ಥವಾಗಿ ಕಟ್ಟಲ್ಪಟ್ಟಿದೆಂದು ಜೈನರು ಹೇಳುತ್ತಾರೆ. ಈ ಅಭಿಪ್ರಾಯವು ಸಾಧುವಾಗಿ ಕಾಣುವುದಿಲ್ಲ. ಈ ಬೃಂದಾವನವನ್ನು ಜೈನ ನಿಷಿಧಿಯ ಸ್ಮಾರಕ ವೆಂದು ಹೇಳಲಾಗುವುದಿಲ್ಲ. ಆದರೂ ವಿಷಯವನ್ನು ಅಷ್ಟಕ್ಕೇ ಬಿಟ್ಟುಬಿಟ್ಟರೆ ಅನೇಕ ಶತಮಾನಗಳಿಂದ ವಂಶಪಾರಂಪರ್ಯವಾಗಿ, ಸಾಂಪ್ರದಾಯಕವಾಗಿ ನಡೆದು ಬಂದಿ ರುವ ಜಿನಮತಾಭಿಮಾನಿಗಳ ಅಭಿಪ್ರಾಯಕ್ಕೆ ಭಂಗಬರುವುದು. ಆದ್ದರಿಂದ ಹಿಂದಣ ಕಾಲದ ಜೈನಮತ ಸಂಪ್ರದಾಯವೊಂದನ್ನು ಕುರಿತು ಇಲ್ಲಿ ಪ್ರಸ್ತಾವಿಸಬೇಕಾದ ಪ್ರಸಂಗ ಬಂದಿದೆ. ವಾರ್ಧಕ್ಯದ ದೆಸೆಯಿಂದಲೂ, ಗುಣವಾಗುವ ಸಂಭವವೇ ಇಲ್ಲದ ಯಾವುದಾದರೊಂದು ರೋಗವು ಪ್ರಾಪ್ತವಾಗುವುದರಿಂದಲೂ, ಪ್ರಿಯತಮರಾದ ವರ ವಿಯೋಗದಿಂದುಂಟಾಗುವ ದುಃಖದಿಂದಲೂ, ಆಶಾಭಂಗದಿಂದಲೂ ಇಹ

ಲೋಕದ ಜೀವಿಕೆಯಲ್ಲಿ ಬೇಸರ ಉಂಟಾದಾಗ ಧೃಢಸಂಕಲ್ಪರಾದ ಜೈನರು ನಿರಕ್ಷ ವ್ರತವನ್ನು ಕೈಕೊಂಡು ಮರಣದ ದಾರಿಯನ್ನು ಹಿಡಿಯುತ್ತಿದ್ದರು. ಇದಕ್ಕೆ ಸಲ್ಲೇಖನ ವ್ರತವೆಂದು ಹೆಸರು. ಹೀಗೆ ಸತ್ತವರ ಮಹಿಮೆಯನ್ನು ಬರೆದಿರುವ ಕಲ್ಲಿಗೆ ನಿಷಿಧಿಯ ಕಲ್ಲು ಎಂದು ಹೆಸರು. ಈ ವ್ರತವನ್ನು ಕ್ರಿ.ಪೂ. 286 ರಲ್ಲಿ ಚಂದ್ರಗುಪ್ತನು ಶ್ರವಣಬೆಳಗೊಳದಲ್ಲಿಯೂ 982 ನೆಯ ಇಸವಿಯಲ್ಲಿ ರಾಷ್ಟ್ರಕೂಟ ಅರಸ ನಾಲ್ಕನೆ ಇಂದ್ರನು ಅದೇ ಶ್ರವಣಬೆಳಗೊಳದಲ್ಲಿಯೂ, ಚಾಳುಕ್ಯರ ಅರಸನಾದ ಇಮ್ಮಡಿ ಸೋಮೇಶ್ವರನು 1068 ನೆಯ ಇಸವಿಯಲ್ಲಿ ತುಂಗಭದ್ರಾನದಿಯಲ್ಲಿಯೂ, ಆಚರಿಸಿ ಪ್ರಾಣತ್ಯಾಗಮಾಡಿದರು. ಗುಬ್ಬಿ ತಾಲ್ಲೂಕು ನಿಟ್ಟೂರಿನಲ್ಲಿ ಆದೀಶ್ವರಬಸ್ತಿಯ ಉತ್ತರ ಕಡೆ ಗೋಡೆಯಲ್ಲಿ ಒಂದು ನಿಷದಿಯ ಕಲ್ಲಿನಲ್ಲಿ ಅತ್ತೆಯಾದ ಮಾಳವ್ವೆಯೆಂಬವಳು ತನ್ನ ಸೊಸೆ ಚಾಡಿಯಕ್ಕನನ್ನು ಯಮನು ಕೊಂಡೊಯ್ದನೆಂದು ದುಃಖಿತಳಾಗಿ ತಾನು ಅವಳ ಸಮಾಧಿಯನ್ನು ಪ್ರವೇಶಿಸಿ ಪ್ರಾಣತ್ಯಾಗ ಮಾಡಿಕೊಂಡುದನ್ನು ಹೇಳಿದೆ.

ಕೈದಾಳದಲ್ಲಿ ಜೈನಪ್ರಾಬಲ್ಯವು ಹನ್ನೆರಡನೆಯ ಶತಮಾನದಲ್ಲಿ ಹೆಚ್ಚಾಗಿತ್ತೆಂದು ತೋರುತ್ತದೆ. ಮೊನ್ನೆ ಮೊನ್ನೆವರೆಗೂ ಅಂದರೆ 1898 ನೆಯ ಇಸವಿಯವರೆಗೂ ಜೈನ ಸಂಸಾರಗಳು ಕೈದಾಳದಲ್ಲಿದ್ದವು. ಪ್ಲೇಗಿನ ಹಾವಳಿ ಅಲ್ಲಿ ಪ್ರಾರಂಭವಾದಂದಿನಿಂದ ಜೈನರು ಕೈದಾಳವನ್ನು ತ್ಯಜಿಸಿ ತುಮಕೂರನ್ನು ಸೇರಿದರು. ಜಿನಮತ ಪ್ರಾಬಲ್ಯ ಕಾಲದಲ್ಲಿ ಕೈದಾಳದಲ್ಲಿ ಎಷ್ಟೋ ಮಂದಿ ಸಲ್ಲೇಖನ ವ್ರತವನ್ನಾಚರಿಸಿರಬೇಕು. ಈ ವ್ರತವನ್ನು ಕೈಕೊಂಡು ಅದನ್ನು ಕೊನೆಗಾಣಿಸುವುದಕ್ಕೆ ಬಾಚಿದೇವನು ಕಟ್ಟಿಸಿದ್ದ ಬಸದಿಗಿಂತಲೂ ಪವಿತ್ರವಾದ ಸ್ಥಳ ಬೇರೊಂದಿರಲಾರದು. ಆದುದರಿಂದ ಅಮ್ಮನ ತೋಟ ಪ್ರದೇಶವು ಇಂತಹ ವ್ರತವನ್ನು ಆಚರಿಸಿದವರನೇಕರನ್ನು ನೋಡಿರಬೇಕು. ಆಧುನಿಕ ಕಾಲದಲ್ಲಿಯೂ ಜೈನರು ಹೇಳುವಂತೆ ಯಾರೋ ಒಬ್ಬಾಕೆಯು ಈ ಪ್ರದೇಶ ದಲ್ಲಿ ಸಲ್ಲೇಖನ ವ್ರತವನ್ನು ಆಚರಿಸಿರಬೇಕು. ಅದಕ್ಕೆ ಬಹು ಶತಮಾನಗಳ ಹಿಂದೆ ಕೈದಾಳವನ್ನು ಆಳಿದ ಬಾಚಿದೇವನೂ ಅವನ ರಾಣಿಯಾದ ಭೀಮಲೆಯೂ ಅಮ್ಮನ ತೋಟದ ಪ್ರದೇಶದಲ್ಲೇ ಸಮಾಧಿಯಾಗಿರಬೇಕು. ಆ ಸ್ಥಳದ ಪವಿತ್ರತೆಯು ಶತಶತಾಂತರಗಳಿಂದ ಜೈನರ ಚಿತ್ತಭಿತ್ತಿಯಲ್ಲಿ ಚಿತ್ರಿತವಾಗಿ, ಈಗ ಜೈನರ ಒಂದು ಪಿಳ್ಳೆಯೂ ಕೈದಾಳದಲ್ಲಿಲ್ಲದಿದ್ದರೂ ಪ್ರತಿ ಸಂವತ್ಸರದ ಕಾರ್ತಿಕ ಮಾಸದಲ್ಲಿ ತುಮ ಕೂರಿನ ಜೈನ ಪ್ರಜೆಗಳು ಅಮ್ಮನ ತೋಟಕ್ಕೆ ಯಾತ್ರಾರ್ಥಿಗಳಾಗಿ ಬಂದು ಹೋಗುವ ಪದ್ಧತಿಯಿದೆ.

ನಾಗಕನ್ನೆ—ಅಮ್ಮನ ತೋಟದ ಬೃಂದಾವನಕ್ಕೆ ಪಶ್ಚಿಮದಲ್ಲಿರುವ ಮರದ ಕೆಳಗೆ ನಾಗಕನ್ನೆಯ ವಿಗ್ರಹವಿದೆ. ಇದು ನೋಡುವುದಕ್ಕೆ ಬಹು ಸುಂದರವಾದುದು.

ವಿಗ್ರಹದ ತಲೆಯ ಮೇಲೆ ಸೂರ್ಯ ಚಂದ್ರಲಾಂಛನವೂ, ಛತ್ರಿಯಂತೆ ಸರ್ಪದ ಏಳು ಹೆಡೆಗಳೂ ಇವೆ. ನಾಗಕನ್ಯೆಯು ಕಂಕುಳುಗಳಲ್ಲಿ ಎರಡು ಸರ್ಪಗಳನ್ನು ಬಹು ಪ್ರೀತಿಯಿಂದ ಇರುಕಿಸಿಕೊಂಡಿದ್ದಾಳೆ. ಆಕೆಯ ಸೊಂಟದ ಮೇಲ್ಭಾಗವೆಲ್ಲಾ ಸ್ತ್ರೀಯಾಕಾರ, ಕೆಳಭಾಗವು ಸರ್ಪಪುಚ್ಛಾಕಾರ. ಇದೇ ಪ್ರಧಾನ ವಿಗ್ರಹ. ಇದರ ಸುತ್ತಲೂ ಇದನ್ನೇ ಹೋಲುವ ಅನೇಕ ಸಣ್ಣ ವಿಗ್ರಹಗಳು ಸಾಲು ಸಾಲಾಗಿ ನೆಡಲ್ಪಟ್ಟಿವೆ. ಇವುಗಳನ್ನು ನಾಗರ ಪ್ರತಿಷ್ಠೆಮಾಡಿದವರೂ, ಇತರ ಭಕ್ತರೂ ಮಾಡಿಸಿ ತಂದು ನೆಡಿಸಿದ ಹಾಗೆ ಕಾಣುತ್ತದೆ. ಈ ವಿಗ್ರಹಕ್ಕೂ ಅಮ್ಮನ ತೋಟದ ಬೃಂದಾವನಕ್ಕೂ ಜೈನರು ತಂಡತಂಡವಾಗಿ ಬಂದು ಹರಕೆಯನ್ನು ಸಲ್ಲಿಸುತ್ತಾರೆ.

**ಶೂಲದಾಂಜನೇಯನ ಗುಡಿ**—ಕೈದಾಳದ ದಕ್ಷಿಣಕ್ಕಿರುವ ಶೂಲದ ಆಂಜನೇಯನ ಗುಡಿಯ ಮುಂದೆ ತಪ್ಪಿತಸ್ಥರನ್ನು ಪೂರ್ವಕಾಲದಲ್ಲಿ ಶೂಲಕ್ಕೆ ಹಾಕುತ್ತಿದ್ದರು. ಈ ಗುಡಿಯು ನಿರ್ಜನ ಪ್ರದೇಶದಲ್ಲಿ ಎತ್ತರವಾದ ಮಣ್ಣುಗುಡ್ಡೆಯ ಮೇಲಿದೆ. ಇದು ಸಮುದ್ರ ಮಟ್ಟದಿಂದ 2771 ಅಡಿ ಎತ್ತರವಾಗಿದ್ದು ಹಿತಕರವಾದ ಹವೆಯುಳ್ಳುದಾಗಿದೆ. ಈ ಸ್ಥಳಕ್ಕೂ ಈಗಿನ ಕೈದಾಳ ಗ್ರಾಮಕ್ಕೂ ಮಧ್ಯೆ ಇರುವ ಪ್ರದೇಶದಲ್ಲಿ ಪ್ರಾಕ್ತನ ವಿಮರ್ಶಕರೂ ಭೂಗರ್ಭಶಾಸ್ತ್ರಜ್ಞರೂ ಯುಕ್ತವಾದ ಶೋಧನೆಯನ್ನು ನಡೆಯಿಸಿದಲ್ಲಿ ಭೂಗತವಾಗಿರಬಹುದಾದ ಪುರಾತನ ಸ್ಮಾರಕಗಳು ಹೇರಳವಾಗಿ ದೊರೆಯುವುದರಲ್ಲಿ ಸಂದೇಹವಿಲ್ಲ.

## ಭಾಗ ೨

## ಸೂಕ್ಷ್ಮವಿಚಾರ

ತುಮಕೂರಿಗೆ ದಕ್ಷಿಣದಲ್ಲಿ ಮೂರು ಮೈಲಿ ದೂರದಲ್ಲಿ ಕೈದಾಳ ಗ್ರಾಮವಿದೆ. ಹೊಯ್ಸಳರ ಕಾಲದಲ್ಲಿ ಎಂದರೆ ಈಗ್ಗೆ ೮೦೦ ವರ್ಷಗಳ ಕೆಳಗೆ ಅದು ಬಹಳ ಪ್ರಸಿದ್ಧವಾದ ಸ್ಥಳವಾಗಿತ್ತೆಂದು ಶಾಸನಗಳಿಂದ ತಿಳಿಯಬರುತ್ತದೆ. ಈ ಊರು ಪ್ರಸಿದ್ಧ ಶಿಲ್ಪಿಯಾದ ಜಕಣಾಚಾರಿಯ ಜನ್ಮಸ್ಥಳವೆಂದೂ, ಇದಕ್ಕೆ ಬಹಳ ಹಿಂದಿನಕಾಲದಲ್ಲಿ ಕ್ರೀಡಾಪುರವೆಂದು ಹೆಸರಿತ್ತೆಂದೂ, ನೃಪರಾಯನೆಂಬರಸನ ರಾಜ್ಯಕ್ಕೆ ರಾಜಧಾನಿಯಾಗಿತ್ತೆಂದೂ ಅದು ದಕ್ಷಿಣಕ್ಕೆ ಶೂಲದ ಆಂಜನೇಯನ ಗುಡಿಯವರೆಗೂ ವ್ಯಾಪಿಸಿತ್ತೆಂದೂ—ಇವೇ ಮೊದಲಾದ ಜನಜನಿತವಾದ ಕತೆಗಳಿವೆ. ಕೈದಾಳದ ರಾಜನೊಬ್ಬನಿಗೆ ಆಗ ಹಳ್ಳಿಯಾಗಿದ್ದ ತುಮಕೂರು ಸಹ ಸೇರಿತ್ತೆಂದೂ, ತುಮಕೂರನ್ನು ಆ ರಾಜನು ತನ್ನ ಟುಮುಕಿ ಹೊಡೆಯುವವನಿಗೆ ಇನಾಮಾಗಿ ಕೊಟ್ಟನೆಂದೂ ಪ್ರವಾದವಿದೆ. ಈ ಕತೆಗಳಲ್ಲಿ ಕೆಲವು ತಥ್ಯ, ಕೆಲವು ಮಿಥ್ಯ. ಅವುಗಳನ್ನು "ತುಮಕೂರಿನ ಇತಿಹಾಸ"

ವೆಂಬ ಉಪನ್ಯಾಸದಲ್ಲಿ ವಿಮರ್ಶೆಮಾಡಿರುವುದರಿಂದ ಇಲ್ಲಿ ಪುನಃ ಬರೆಯುವುದಲ್ಲಿ ಪ್ರಯೋಜನವಿಲ್ಲವೆಂದು ಕೈಬಿಟ್ಟಿದೆ.

**ಪೂರ್ವಚರಿತ್ರೆ**—ಕ್ರಿಸ್ತಶಕ 817 ರಿಂದ 845 ರ ವರೆಗೆ ಗಂಗರಾಜನಾಗಿದ್ದ ಒಂದನೆಯ ರಾಜಮಲ್ಲ ಸತ್ಯವಾಕ್ಯನ ಕಾಲದಲ್ಲಿ ರಾಷ್ಟ್ರಕೂಟರ ಅರಸ ನೃಪತುಂಗ ಅಥವಾ ಅಮೋಘವರ್ಷನ (815-878) ದಳಪತಿಯಾದ ಬಂಕೇಶನು ಕೈದಾಳಕ್ಕೆ ಮುತ್ತಿಗೆ ಹಾಕಿ ಅದನ್ನು ಹಿಡಿದುಕೊಂಡನೆಂದೂ ಆಗ್ಗೆ ಕೈದಾಳದಲ್ಲಿ ಬಲವಾದ ಸೈನ್ಯವೂ, ಭದ್ರವಾದ ಕೋಟೆಯೂ ಇತ್ತೆಂದೂ, ಕೈದಾಳದ ಸೈನ್ಯವು ಧೈರ್ಯ ಸಾಹಸಗಳಿಂದ ಶತ್ರುವಿನೊಡನೆ ಯುದ್ಧಮಾಡಿತೆಂದೂ ಚರಿತ್ರೆಯಿಂದ ತಿಳಿದು ಬರುತ್ತದೆ. ಕೈದಾಳವು ಬಹು ಪುರಾತನಕಾಲದ ಚರಿತ್ರಾರ್ಹವಾದ ಸ್ಥಳವೆಂಬುದಕ್ಕೆ ಇದೊಂದೇ ಸಂಗತಿಯು ಸಾಕು.

**ಜಕಣಾಚಾರಿಯ ಕತೆ**—ಕೈದಾಳದವರಿಗೆ ಜಕಣಾಚಾರಿಯೆಂಬ ಹೆಸರು ಸ್ವಪ್ನಾವಸ್ಥೆಯಲ್ಲಿಯೂ ಮರೆಯುವ ಹಾಗಿಲ್ಲ. ಕೈದಾಳ—ಜಕಣಾಚಾರಿ ಇವೆರಡು ಶಬ್ದಗಳಿಗೂ ಅವರ್ಣನೀಯವಾದ ನಿಕಟಸಂಬಂಧವಾಗಿ ಹೋಗಿದೆ. ಕೈದಾಳವೆಂದ ಕೂಡಲೇ ಜಕಣಾಚಾರಿಯ ಹೆಸರು ನೆನಪಿಗೆ ಬರುವುದಕ್ಕೆ ಒಂದು ವಿಚಿತ್ರವಾದ ಕತೆಯಿದೆ. ಕೈದಾಳಕ್ಕೆ ಹೋದವರ ಕಿವಿಗೆ ಆ ಹೆಸರು ಬೀಳದಿರುವುದಿಲ್ಲ. ಜಕಣಾಚಾರಿಯೆಂಬ ಶಿಲ್ಪಿಯು ತನ್ನ ಹೆಂಡತಿ ಗರ್ಭಿಣಿಯಾಗಿದ್ದಾಗ ಊರು ಬಿಟ್ಟುಹೋದವನು ಅನೇಕ ವರ್ಷಗಳ ವರೆಗೂ ಹಿಂತಿರುಗದೆ ದೂರದೇಶದ ರಾಜರ ಬಳಿಯಲ್ಲಿ ತನ್ನ ಶಿಲ್ಪಕೌಶಲ್ಯವನ್ನು ತೋರ್ಪಡಿಸುತ್ತ ಕಾಲ ಕಳೆಯುತ್ತಿದ್ದನು. ಇತ್ತಲಾಗಿ ಅವನ ಹೆಂಡತಿಯು ನವಮಾಸ ತುಂಬಿ ಗಂಡುಮಗುವನ್ನು ಹೆತ್ತಳು. ಆ ಹುಡುಗನು ಪ್ರಾಪ್ತ ವಯಸ್ಕನಾಗುವ ವರೆಗೂ ತನ್ನ ತಂದೆಯ ವಿಷಯವೇ ತಿಳಿಯದುದನ್ನು ನೋಡಿ ವ್ಯಸನಾಕ್ರಾಂತನಾಗಿ ತಾಯಿಯ ಅಪ್ಪಣೆ ಪಡೆದು ಜಕಣಾಚಾರಿಯನ್ನು ಹುಡುಕುವುದಕ್ಕೆ ಹೊರಟನು. ಈ ಸಂಚಾರದಲ್ಲಿ ಅವನು ಒಂದುದಿನ ಬೇಲೂರಿಗೆ ಬಂದು ಅಲ್ಲಿ ಕಟ್ಟುತ್ತಿದ್ದ ಚೆನ್ನಕೇಶವ ದೇವಸ್ಥಾನವನ್ನು ನೋಡಲು ಕುತೂಹಲದಿಂದ ಹೋಗಿ ಅಲ್ಲಿನ ಕೆಲವು ವಿಗ್ರಹಗಳನ್ನು ಪರೀಕ್ಷಿಸಿ, ನೆರೆದಿದ್ದ ಜನರ ಮುಂದೆ ಒಂದು ವಿಗ್ರಹವನ್ನು ತೋರಿಸಿ ಅದರಲ್ಲಿ ಕಳಂಕವಿದೆಯೆಂದು ಹೇಳಿದನು. ಆ ಜನರ ಗುಂಪಿನಲ್ಲಿಯೇ ಮುಖ್ಯಶಿಲ್ಪಿಯಾದ ಜಕಣಾಚಾರಿಯೂ ಇದ್ದನು. ಅವನೇ ಆ ವಿಗ್ರಹವನ್ನು ಮಾಡಿದ್ದನು. ಕಳಂಕವಿರುವ ವಿಗ್ರಹವು ಪೂಜಾರ್ಹವಲ್ಲವಾದುದರಿಂದ ಜಕಣಾಚಾರಿಯು ತಾನು ಮಾಡಿದ ಕೆಲಸದಲ್ಲಿ ಚಿಕ್ಕ ವಯಸ್ಸಿನ ಹುಡುಗನೊಬ್ಬನು ತಪ್ಪುಹುಡುಕಿದನೆಂದು ಕೋಪಿಷ್ಠನಾಗಿ, ತಪ್ಪನ್ನು ತೋರಿಸಿಕೊಟ್ಟದ್ದೇ

ಆದರೆ ತನ್ನ ಬಲಗೈಯನ್ನು ಕತ್ತರಿಸಿಕೊಳ್ಳುತ್ತೇನೆಂದು ಹುಡುಗನನ್ನು ಗದರಿಸಿದನು. ಜನರೆಲ್ಲರೂ ಕುತೂಹಲಾವಿಷ್ಟರಾದರು. ಹುಡುಗನು ಸ್ವಲ್ಪವೂ ಭಯಪಡದೆ ತಪ್ಪನ್ನು ತೋರಿಸಿಕೊಡುತ್ತೇನೆಂದು ಒಪ್ಪಿಕೊಂಡು ಕೂಡಲೇ ತೇದ ಗಂಧವನ್ನು ತರಿಸಿ ವಿಗ್ರಹಕ್ಕೆ ಬಳಿಸಿದನು. ಗಂಧವು ಎಲ್ಲಾ ಕಡೆಯಲ್ಲೂ ಒಣಗಿಹೋಗಿ ಹೊಕ್ಕಳಿನ ಪ್ರದೇಶದಲ್ಲಿ ಮಾತ್ರ ತೇವವಾಗಿಯೇ ಉಳಿಯಿತು. ಆ ಭಾಗವನ್ನು ಉಳಿಯಿಂದ ಕೆತ್ತಿ ನೋಡುವಾಗ್ಗೆ ಒಳಗಡೆಯ ಟೊಳ್ಳಿನಲ್ಲಿ ಒಂದು ಕಪ್ಪೆಯೂ ಸ್ವಲ್ಪ ನೀರೂ ಮರಳೂ ಕಂಡುಬಂದುವು. ಈ ಕಳಂಕವುಳ್ಳ ವಿಗ್ರಹವು ಈಗಲೂ ಬೇಲೂರು ದೇವಸ್ಥಾನದಲ್ಲಿದೆ. ಅದಕ್ಕೆ ಪೂಜೆಯಿಲ್ಲ. ಅದನ್ನು ಕಪ್ಪೆ ಚೆನ್ನಿಗರಾಯನೆಂದು ಕರೆಯುತ್ತಾರೆ. ಈ ಆಶ್ಚರ್ಯವನ್ನು ಕಂಡು ಜಕಣಾಚಾರಿಗೆ ತಡೆಯಲಾರದಷ್ಟು ದುಃಖವಾಯಿತು. ಪ್ರತಿಜ್ಞೆಯಂತೆ ತನ್ನ ಬಲಗೈಯನ್ನು ಕತ್ತರಿಸಿಕೊಂಡನು. ಅನಂತರ ಇಷ್ಟು ಚಿಕ್ಕವಯಸ್ಸಿನಲ್ಲಿಯೇ ಶಿಲ್ಪಶಾಸ್ತ್ರದಲ್ಲಿ ಅಸಾಧಾರಣವಾದ ಪಾಂಡಿತ್ಯವನ್ನು ಪಡೆದ ಬಾಲಕನಾರೆಂದು ವಿಚಾರಿಸಿದಾಗ ಅವನು ತನ್ನ ಮಗನೇ ಎಂದು ತಿಳಿಯಿತು. ಆಮೇಲೆ ಒಂದಾನೊಂದು ದಿನ ಜಕಣಾಚಾರಿಗೆ ಕನಸಿನಲ್ಲಿ ಅವನ ಜನ್ಮಸ್ಥಳವಾದ ಕ್ರೀಡಾಪುರದಲ್ಲಿ ಕೇಶವ ದೇವರಿಗೆ ಅಂದವಾದ ದೇವಸ್ಥಾನವನ್ನು ಕಟ್ಟಬೇಕೆಂದು ಭಗವಂತನ ಆಜ್ಞೆಯಾಯಿತು. ಮಾರನೆಯ ದಿನವೇ ತಂದೆಯೂ ಮಗನೂ ಕ್ರೀಡಾಪುರಕ್ಕೆ ಪ್ರಯಾಣಮಾಡಿ ಬಂದು ದೇವಸ್ಥಾನ ಕಟ್ಟಲು ಪ್ರಾರಂಭಿಸಿದರು. ಜಕಣಾಚಾರಿಯು ಎಡಗೈಯಲ್ಲೇ ಸಾಧ್ಯವಾದಷ್ಟು ಕೆಲಸಮಾಡಿದನು. ಮಗನೂ ಅವನ ಸಹಾಯಕ್ಕೆ ನಿಂತಿದ್ದರಿಂದ ದೇವಾಲಯನಿರ್ಮಾಣವೂ ಜಾಗ್ರತೆಯಾಗಿಯೇ ಮುಗಿಯಿತು. ದೇವಾಲಯವು ಪೂರ್ತಿಯಾದ ಉತ್ತರಕ್ಷಣದಲ್ಲಿಯೇ ಜಕಣಾಚಾರಿಯು ಕತ್ತರಿಸಿಕೊಂಡಿದ್ದ ಕೈ ಬೆಳೆದು ಮೊದಲಿನಂತೆ ಆಯಿತು. ಈ ಸಂಘಟನೆಯ ಜ್ಞಾಪಕಾರ್ಥವಾಗಿ ಕ್ರೀಡಾಪುರಕ್ಕೆ ಅಂದಿನಿಂದ 'ಕೈದಳ' ಅಂದರೆ ಪುನರ್ಲಭ್ಯವಾದ ಕೈಯೆಂದು ಹೆಸರಾಯಿತು.

**ಜಕಣಾಚಾರಿಯ ಕತೆ ವಿಮರ್ಶೆ**—ತಲತಲಾಂತರದಿಂದ ಜನಜನಿತವಾಗಿರುವ ಈ ಕತೆಯಲ್ಲಿ ಲವಲೇಶವೂ ನಿಜವಿಲ್ಲವೆಂದು ಹೇಳಲು ಸಂಕೋಚವಾಗುತ್ತದೆ. ಹೇಳದಿದ್ದರೆ ವಿಧಿಯಿಲ್ಲ. ಇದು ಕಲ್ಪಿತ ಕತೆಯೆಂಬುದಕ್ಕೆ ಆಧಾರಗಳು ಬೇಕಾದಷ್ಟಿವೆ. ಒಂದೆರಡು ಆಧಾರಗಳನ್ನು ಕೊಟ್ಟರೆ ಸಾಕೆಂದು ತೋರುವುದು. ಶಾಸನದಲ್ಲಿಯೂ ಅದಕ್ಕೆ ಮುನ್ನೂರು ವರ್ಷಗಳ ಹಿಂದೆಯೂ 'ಕಯಿದಳ' 'ಕಯ್ದಾಳ' ಎಂಬ ಹೆಸರುಗಳಿವೆ. ಈ ಹೆಸರುಗಳು ಅಪಭ್ರಂಶವಾಗಿ 'ಕೈದಾಳ'ವಾಗಿದೆ. ಆದ್ದರಿಂದ 'ಕೈದಾಳ'ವೆಂಬುದು ಕೃತಕನಾಮ. ಕೈದಾಳದ ಕೇಶವ ದೇವರ ದೇವಸ್ಥಾನವನ್ನು ಕಟ್ಟಿದುದು

1151 ನೆಯ ಇಸವಿಯಲ್ಲಿ. ಇದಕ್ಕೆ 300 ವರ್ಷಗಳ ಹಿಂದೆಯೇ ಎಂದರೆ ರಾಷ್ಟ್ರಕೂಟ ಅಮೋಘ ವರ್ಷನ ದಳಪತಿ ಬಂಕೇಶನು ಈ ಊರಿಗೆ ದಂಡೆತ್ತಿ ಬಂದಾಗ ಅದಕ್ಕೆ ಕಯದಳ ಅಥವಾ ಕಯ್ಯಾಳವೆಂಬ ಹೆಸರಿತ್ತು. ಆದ್ದರಿಂದ ದೇವಸ್ಥಾನ ಕಟ್ಟಿದ ಮೇಲೆ ಕೈದಳವೆಂಬ ಹೆಸರು ಬಂದಿತೆಂದು ಹೇಳುವುದು ಅಸಮಂಜಸವೂ ಅಬದ್ಧವೂ ಆಗಿದೆ. ಕೈದಾಳವು ಜಕಣಾಚಾರಿಯ ಸ್ಥಳವಲ್ಲವೆಂಬುದಕ್ಕೂ ಈ ಆಧಾರವೇ ಸಾಕ್ಷಿ. ಜಕಣಾಚಾರಿಯೆಂಬವನು ಪ್ರಸಿದ್ಧ ಶಿಲ್ಪಿಗಳಲ್ಲೊಬ್ಬನಾಗಿರಬೇಕು. ಅವನು ಕೈದಾಳದ ದೇವಸ್ಥಾನಗಳಲ್ಲಿ ಯಾವುದೊಂದನ್ನಾದರೂ ಕಟ್ಟಿದನೆಂಬುದಕ್ಕೆ ಯಾವ ಆಧಾರವೂ ಇಲ್ಲ. ಅವನ ಮಗನ ಹೆಸರೇನೋ ಅದೂ ಗೊತ್ತಾಗಿಲ್ಲ. ಡಂಕಣಾಚಾರಿ ಯೆಂದು ಕೆಲವರು ಹೇಳುತ್ತಾರೆ. ಇವರಿಬ್ಬರೂ ಜೀವಿಸಿದ್ದ ಕಾಲವೂ ನಿಷ್ಕರ್ಷೆ ಯಾಗಿಲ್ಲ. ಮೈಸೂರು ದೇಶದಲ್ಲಿರುವ ಅನೇಕ ದೇವಸ್ಥಾನಗಳನ್ನು ಜಕಣಾಚಾರಿಯು ಕಟ್ಟಿದನೆಂದು ಹೇಳುವುದು ವಾಡಿಕೆ. ಹಲವು ದೇವಸ್ಥಾನಗಳಲ್ಲಿಯೂ ಶಾಸನ ಗಳಲ್ಲಿಯೂ ಅವುಗಳನ್ನು ಕಟ್ಟಿದ ಅಥವಾ ಕೆತ್ತಿದ ಶಿಲ್ಪಿಗಳ ಹೆಸರುಗಳು ದೊರೆಯು ತ್ತವೆ. ಉದಾಹರಣೆಗಾಗಿ, ಬಿಡಿಗೋಜನೆಂಬ ಶಿಲ್ಪಿಯು ಶ್ರವಣಬೆಳಗುಳದ ಗೊಮ್ಮ ಟೇಶ್ವರ ವಿಗ್ರಹವನ್ನು ಕೆತ್ತಿದನು. ಕೇದಾರೋಜನು ಬೇಲೂರು ದೇವಸ್ಥಾನವನ್ನು ಕಟ್ಟಿದನು. ಪಲ್ಲವಾಚಾರಿ ಎಂಬವನು ಶ್ರವಣಬೆಳಗೊಳದ 21 ನೆಯ ಶಾಸನವನ್ನು ಕೊರೆದನು. ಇದೇ ರೀತಿಯಲ್ಲಿ ಧರಣೋಜ, ಓಬೋಜ, ತಿಪ್ಪಣೋಜ, ನಾಗೋಜ, ದಾಸೋಜ, ಗಂಗಾಚಾರಿ, ಮಲ್ಲಿತಮ್ಮ, ಧನಪತಿಯಾಚಾರಿ, ವರ್ಧಮಾನಾಚಾರಿ, ಮಧುರೋಜ ಮೊದಲಾದ ಶಿಲ್ಪಿಗಳ ಹೆಸರು ಅವರು ಕಟ್ಟಿದ ದೇವಾಲಯಗಳ ಪ್ರಾಕಾರದ ಗೋಡೆಗಳಲ್ಲಿ ಕಂಡುಬರುತ್ತವೆ. ಜಕಣಾಚಾರಿಯೆಂಬ ಹೆಸರು ಎಲ್ಲಿಯೂ ಕಾಣದಿರುವುದು ಆಶ್ಚರ್ಯ. ಹೀಗಿರುವಾಗ ಅವನು ಅನೇಕ ದೇವಾಲಯಗಳನ್ನು ಕಟ್ಟಿದನೆಂಬುದನ್ನು ನಂಬುವ ಬಗೆ ಹೇಗೆ ? ಬೇಲೂರು ಚೆನ್ನಕೇಶವ ದೇವಸ್ಥಾನವನ್ನು ಸ॥ 1117 ರ ಸುಮಾರಿನಲ್ಲಿ ಕಟ್ಟುವಾಗ್ಗೆ ಎಷ್ಟೋ ಕಡಿಮೆಯೆಂದರೂ ಇಪ್ಪತ್ತು ಪ್ರಸಿದ್ಧ ಶಿಲ್ಪಿಗಳು ಅಲ್ಲಿ ಕೆಲಸಮಾಡುತ್ತಿದ್ದರೆಂದು ತಿಳಿಯಬರುತ್ತದೆ. ಒಂದಲ್ಲ ಒಂದು ಬಳಿ ಅವರ ಹೆಸರುಗಳಿವೆ. ಜಕಣಾಚಾರಿಯ ಹೆಸರು ಅಲ್ಲಿಲ್ಲ. ಸ॥ 1141 ರಿಂದ 1173 ರ ವರೆಗೆ ಆಳಿದ ಹೊಯ್ಸಳ ಒಂದನೆಯ ನರಸಿಂಹರಾಜನಿಗೆ ಕೇದ್ದಾರೋಜನು ಆಸ್ಥಾನ ಶಿಲ್ಪಿಯಾಗಿದ್ದನು. ಕೈದಾಳದ ಚೆನ್ನಕೇಶವ ದೇವಾಲಯವನ್ನು ಕಟ್ಟಿದ್ದು 1151 ರಲ್ಲಿ. ಆದ್ದರಿಂದ ಕೇದಾರೋಜನ ಮೇಲ್ವಿಚಾರಣೆಗೊಳಪಟ್ಟ ಯಾವನೋ ಒಬ್ಬ ಶಿಲ್ಪಿಯು ಇದನ್ನು ಕಟ್ಟಿರಬೇಕು. ಜಕ್ಕಣ್ಣನೆಂಬೊಬ್ಬ ಶಿಲ್ಪಿಯು 1260 ರಲ್ಲಿ ಎಂದರೆ ಕೈದಾಳ ದೇವಸ್ಥಾನ ನಿರ್ಮಾಣವಾದ 110 ವರ್ಷಗಳ ತರುವಾಯ, ತುರುವೇ

ಕೆರೆ ಮೂಲಶಂಕರೇಶ್ವರ ದೇವಸ್ಥಾನವನ್ನು ಕಟ್ಟಿದನೆಂದು ಗೊತ್ತಾಗಿದೆ. ಹೀಗಿರುವಲ್ಲಿ ಈ ಜಕ್ಕಣ್ಣನು ಕೈದಾಳದ ದೇವಸ್ಥಾನವನ್ನು ಕಟ್ಟಿದನೆಂದು ಹೇಳುವುದಕ್ಕೂ ಸಹ ಸಾಧ್ಯವಿಲ್ಲ. ಜಕಣಾಚಾರಿಯೆಂಬ ಪ್ರಸಿದ್ಧ ಶಿಲ್ಪಿಯು ಅನೇಕ ಶತಮಾನಗಳ ಹಿಂದೆ ಬದುಕಿದ್ದನೆಂದು ಯೋಚಿಸೋಣ. ಅವನ ಕಾಲಾನಂತರ ಅವನಲ್ಲೇ ಶಿಲ್ಪವಿದ್ಯೆಯನ್ನು ಕಲಿತ ಅನೇಕ ಶಿಷ್ಯರು ಅವನಷ್ಟೇ ಅಥವಾ ಅವನನ್ನು ಮೀರಿಸಿದ ಕೌಶಲ್ಯದಿಂದ ದೇವಸ್ಥಾನಗಳನ್ನು ರಚಿಸಿ ಗುರುದಕ್ಷಿಣಾರೂಪವಾಗಿ ಆ ದೇವಸ್ಥಾನಗಳು ಜಕಣಾಚಾರಿ ಕೃತವೆಂದು ಹೇಳಿಕೊಂಡಿರಬಹುದು. ಹೀಗೆ ವಿಚಾರವು ಒಬ್ಬರಿಂದೊಬ್ಬರಿಗೆ ಹರಡಿ ಜಕಣಾಚಾರಿಯು ಈ ಲೋಕವನ್ನು ಬಿಟ್ಟು ಹೋದಮೇಲೆ ಅನೇಕ ಶತಮಾನಗಳಾಗಿ ಹೋಗಿದ್ದಾಗ್ಯೂ ಎಲ್ಲಾ ಉತ್ಕೃಷ್ಟ ದೇವಾಲಯಗಳೂ ಜಕಣಾಚಾರಿಯು ಕಟ್ಟಿದುದೆಂದು ಹೇಳಿಬಿಡುವುದು ಸಂಪ್ರದಾಯವಾಗಿ ಹೋಗಿದೆ. ಇಂತಹ ಸಂದರ್ಭಗಳಲ್ಲಿ 'ಜಕಣಾಚಾರಿಕೃತ' ಎಂಬುದಕ್ಕೆ "ಜಕಣಾಚಾರಿ ಶಿಲ್ಪ ಕ್ರಮವನ್ನನುಸರಿಸಿದುದು" ಎಂದು ಅರ್ಥಮಾಡುವುದು ಯುಕ್ತವೆಂದು ತೋರುತ್ತದೆ.

ಒಟ್ಟಿನಲ್ಲಿ ಮೇಲೆ ಹೇಳಿದ ಜಕಣಾಚಾರಿ ಕತೆಯು ಕೇವಲ ಕಲ್ಪನೆಯೆಂದು ಹೇಳಿದರೆ ತಪ್ಪಾಗುವುದಿಲ್ಲ. ಜಕಣಾಚಾರಿ, ಡಂಕಣಾಚಾರಿ ಎಂಬ ಶಬ್ದಗಳು "ದಕ್ಷಿಣಾಚಾರ" ಅಥವ "ದಖ್ಖಣಾಚಾರ" ಎಂಬುದರಿಂದ ಹುಟ್ಟಿದವುಗಳೆಂದೂ "ದಕ್ಷಿಣ ದೇಶದ ಶಿಲ್ಪಿ" ಎಂದು ಅವಕ್ಕೆ ಅರ್ಥವೆಂದೂ ನಾವು ತಿಳಿಯಬೇಕು.

**ವೀರಗಲ್ಲುಗಳು**—ಕೈದಾಳದಲ್ಲಿ ಒಟ್ಟು ಆರು ವೀರಗಲ್ಲುಗಳಿವೆ. ಇವುಗಳಲ್ಲಿ ನಾಲ್ಕು ರಾಮೇಶ್ವರ ದೇವಸ್ಥಾನದ ಆವರಣದಲ್ಲೂ, ಒಂದು ಪ್ರಸನ್ನಗಂಗಾಧರೇಶ್ವರನ ಗುಡಿಯ ಮುಂದೆಯೂ ಇನ್ನೊಂದು ಕೈದಾಳದ ಕೆರೆಯ ಪಶ್ಚಿಮಕೋಡಿಗೆ ಹೋಗುವ ದಾರಿಯಲ್ಲಿರುವ ಗೊಬ್ಬರದ ಗುಂಡಿಗಳ ಮಧ್ಯದಲ್ಲೂ ಇದೆ. ರಾಮೇಶ್ವರ ದೇವಸ್ಥಾನದ ಆವರಣದಲ್ಲಿರುವ ನಾಲ್ಕು ವೀರಗಲ್ಲುಗಳಲ್ಲಿಯೂ ಅಕ್ಷರಗಳೊಂದೂ ಕಾಣಿಸುವುದಿಲ್ಲ. ಅವುಗಳಲ್ಲಿರುವ ಪ್ರತಿಮೆಗಳು ಮಾತ್ರ ಅಂದವಾಗಿವೆ. ಕೆರೆಯ ಪಶ್ಚಿಮಕೋಡಿ ದಾರಿಯಲ್ಲಿರುವ ವೀರಗಲ್ಲು ಬಹಳ ವಿಸ್ತಾರವಾದುದು. ಇದರಲ್ಲೂ ಮುಕ್ಕಾಲು ಮೂರುವೀಸಪಾಲು ಅಕ್ಷರಗಳೆಲ್ಲಾ ಮಸುಣಿಸಿ ಹೋಗಿವೆ. ಇದು 1283 ನೆಯ ಇಸವಿಯದು, ಎಂದರೆ ಹೊಯ್ಸಳ ವೀರರಾಮನಾಥದೇವನ (1254-1295) ಕಾಲದ್ದು. ವಿಷಯವು ಸಮಗ್ರವಾಗಿ ಅರ್ಥವಾಗುವ ಹಾಗಿಲ್ಲ. ಯಾರೋ ಒಬ್ಬನ ಮಗಳ ಜೀತದ ಆಳಿನ ಮಗನು ಯುದ್ಧಮಾಡಿ ಕೈದಾಳದಲ್ಲಿ ಸತ್ತುದರ ಜ್ಞಾಪಕಾರ್ಥವಾಗಿ ಈ ಕಲ್ಲು ಸ್ಥಾಪಿಸಲ್ಪಟಿದೆ.

**ವೀರಗಲ್ಲು ಕ್ರಿ. ಶ. 1121**—ಪ್ರಸನ್ನ ಗಂಗಾಧರೇಶ್ವರನ ಗುಡಿಯ ಮುಂ ರುವ ವೀರಗಲ್ಲು ಸಹ ಬಹಳ ಆರೂಪವಾಗಿದೆ. ಭಾಷೆಯು ಸ್ವಲ್ಪವೂ ಚೆನ್ನಾಗಿಲ್ಲ ಗ್ರಾಮ್ಯ ಶಬ್ದಗಳೂ ಅಕ್ಷರ ದೋಷಗಳೂ ಬಹಳವಾಗಿವೆ. ಅಲ್ಲಲ್ಲಿ ಅಕ್ಷರಗಳ ಜಜ್ಜಿ ಹೋಗಿರುವುದರಿಂದ ವಿಷಯವು ಅಪೂರ್ಣವಾಗಿದೆ. ಕೊನೆಯಲ್ಲಿ ಅಶುದ್ಧವಾದ ಒಂದು ಕಂದಪದ್ಯವೂ ಒಂದು ವೃತ್ತವೂ ಇವೆ. ಈ ಕಲ್ಲಿನಲ್ಲಿ ವಾಡಿಕೆಯಲ್ಲಿದ್ದ ಶಾಲಿ ವಾಹನ ಶಕವನ್ನು ಹೇಳದೆ ಚಾಳುಕ್ಯ ವಿಕ್ರಮಾದಿತ್ಯ ಶಕೆಯನ್ನು ಹೇಳಿರುವುದು ವಿಶೇಷದ ಸಂಗತಿ. ಈ ಶಕವು 1076 ನೆಯ ಇಸವಿಯಲ್ಲಿ ಪ್ರಾರಂಭವಾಯಿತೆಂದು ನಿರ್ಧರವಾಗಿರುವುದರಿಂದಲೂ, ಈ ವೀರಗಲ್ಲಿನಲ್ಲಿ "ವಿಕ್ರಮ ವರ್ಷ ನಲವತ್ತೈದನೆಯ" ಎಂದಿರುವುದರಿಂದಲೂ, ಇದು 1121 ನೆಯ ಇಸವಿಯಲ್ಲಿ ಸ್ಥಾಪಿಸಲ್ಪಟ್ಟಿದು. ಕೀರ್ತಿ ಶೇಷರಾದ ಮಿ|| ರೈಸ್ ಸಾಹೇಬರವರು ಇದರ ಇಸವಿ 1112 ಎಂದು ಹೇಳಿರುವುದಕ್ಕೆ ಆಧಾರವಿಲ್ಲ. ಈ ಕಲ್ಲಿನಲ್ಲಿ "ಜೆಲ್ಲೆನ ಸೀಬನೂ ಬರಮನೂ ಕಯ್ದಾಳಕ್ಕೆ ದಂಡೆತ್ತಿ ಬಂದಾಗ ಭಂಟನಾದ ಚಿರುಕುರುಪಾಲನೆಂಬುವನು ಸೈನ್ಯವನ್ನು ಏಕಾಂಗಿಯಾಗಿ ಎದುರಿಸಿ ರಣರಂಗದಲ್ಲಿ ಬಿದ್ದನು" ಎಂದು ಹೇಳಿದೆ. ಕ್ರಿ.ಶ. 800 ರಿಂದ 1121ರ ವರೆಗೆ ಕೈದಾಳದಲ್ಲಿ ನಡೆದ ಹಲವು ಯುದ್ಧಗಳ ಫಲವಾಗಿ ಈ ವೀರಗಲ್ಲುಗಳು ಸ್ಥಾಪಿತವಾಗಿವೆಯೆಂಬುದರಲ್ಲಿ ಸಂದೇಹವಿಲ್ಲ.

**ಶಿಲಾಶಾಸನಗಳು**—ಕೈದಾಳದಲ್ಲಿರುವ ಎರಡು ಶಿಲಾಶಾಸನಗಳೂ ಪ್ರಸನ್ನ ಗಂಗಾಧರೇಶ್ವರ ದೇವಸ್ಥಾನದ ನವರಂಗದ ಈಶಾನ್ಯ ಮೂಲೆಯಲ್ಲಿವೆ. ಇವುಗಳನ್ನು ಹೊಳಪುಕೊಟ್ಟ ಬಳಪದ ಕಲ್ಲಿನ ಚಪ್ಪಡಿಗಳಲ್ಲಿ ಶಿಲ್ಪಿಯು ಕೆತ್ತಿದ್ದಾನೆ. ಭಾಷೆಯು ಗದ್ಯ ಪದ್ಯ ಮಿಶ್ರವಾಗಿ ದಂಡಾಕಾರವಾಗಿ ಬರೆಯಲ್ಪಟ್ಟಿದೆ. ಒಂದೊಂದು ಚಪ್ಪಡಿಯೂ ಐದು ಅಡಿ ಎತ್ತರ, ಎರಡುವರೆ ಅಡಿ ಅಗಲವಾಗಿದೆ. ಒಂದನೆಯ ಚಪ್ಪಡಿಯಲ್ಲಿ ಅರವತ್ತೊಂದು ಪಙ್ಕ್ತಿಗಳೂ, ಎರಡನೆಯ ಚಪ್ಪಡಿಯಲ್ಲಿ ಐವತ್ತಾರು ಪಙ್ಕ್ತಿಗಳೂ ಒಟ್ಟು 117 ಪಙ್ಕ್ತಿಗಳು ಇವೆ. ಅಂಚುಗಳಲ್ಲಿ ಬರೆದ ಕೆಲವು ಅಕ್ಷರಗಳು ಜಜ್ಜಿ ಹೋಗಿವೆ. ಆದ್ದರಿಂದ ಕೆಲವೆಡೆಗಳಲ್ಲಿ ಅರ್ಥಸಮನ್ವಯ ಮಾಡುವುದಕ್ಕೆ ಸಾಧ್ಯವಿಲ್ಲ ಆದರೂ ಶಾಸನದ ಬರವಣಿಗೆಯು ಸ್ಫುಟವಾಗಿದೆ. ಶಿಲ್ಪಿಯ ಅಜ್ಞತೆಯಿಂದುಂಟಾದ ಕಾಗುಣಿತ ದೋಷಗಳೂ ಛಂದೋದೋಷಗಳೂ ಅಲ್ಲಲ್ಲಿ ಕಂಡುಬರುತ್ತವೆ. ಗದ್ಯ ವಲ್ಲದೆ 25 ವೃತ್ತಗಳೂ 28 ಕಂದಪದ್ಯಗಳೂ ಶಾಸನಗಳಲ್ಲಿ ಸೇರಿವೆ. ಮೂಲದ ಭಾಷಾಸ್ಖಾಲಿತ್ಯಗಳು ವಿಷಯಗ್ರಹಣಕ್ಕೇನೂ ಅಡ್ಡಿಮಾಡಲಾರವು.

ಚರಿತ್ರೆಯ ದೃಷ್ಟಿಯಿಂದ ಈ ಶಾಸನಗಳು ಬಹಳ ಮಹತ್ವವುಳ್ಳುವಾಗಿವೆ ಇವುಗಳನ್ನು ಬರೆದುದು 1151 ನೆಯ ಇಸವಿಯಲ್ಲಿ ; ಸ್ಕ 1141 ರಿಂದ 1173 ರ ವರೆಗೆ

ದ್ವಾರಸಮುದ್ರದಲ್ಲಿ ಆಳಿದ ಹೊಯ್ಸಳ ಒಂದನೆಯ ನರಸಿಂಹನ ಕಾಲಕ್ಕೆ ಸೇರಿದುವು. ಇವನಿಗೆ ಪ್ರತಾಪ ನರಸಿಂಹನೆಂತಲೂ ಹೆಸರಿದೆ. ಇವನ ರಾಜ್ಯವು ಸರಿಸುಮಾರಾಗಿ ಕೃಷ್ಣಾನದಿಯಿಂದ ರಾಮೇಶ್ವರದ ವರೆಗೂ ವ್ಯಾಪಿಸಿತ್ತು. ಇವನ ಕೈಕೆಳಗಿನ ಅಧಿರಾಜರುಗಳಲ್ಲಿ ತುಮಕೂರು ತಾಲ್ಲೂಕಿನ ಮಧ್ಯಭಾಗವಾದ ಮರುಗೆರೆನಾಡು ಎಂಬ ಪ್ರಾಂತವನ್ನು ಆಳುತ್ತಿದ್ದವನು ಈ ಸಾಮಂತ ಬಾಚಿದೇವನೆಂಬವನೊಬ್ಬನು. ಈ ಬಾಚಿದೇವನೇ ಕೈದಾಳದ ಶಾಸನವನ್ನು ಬರೆಯಿಸಿದವನು.

**ಸಾಮಂತ ಬಾಚಿದೇವ**—ಇನ್ನು ಮುಂದೆ ಹೇಳುವುದು ಸಾಮಂತ ಬಾಚಿದೇವನ ವಿಷಯವಾದುದರಿಂದ ಇವನು ಯಾರೆಂಬುದನ್ನು ತಿಳಿಯುವುದು ಅವಶ್ಯಕವಾಗಿದೆ. ಬಾಚಿದೇವನ ಪೂರ್ವಜರು ರಾಷ್ಟ್ರಕೂಟ ಅರಸರ ಆಶ್ರಿತರಾಜರು. ರಾಷ್ಟ್ರಕೂಟರು ಹೊಯ್ಸಳರಿಂದ ಪರಾಜಿತರಾದ ಮೇಲೆ (ಕ್ರಿ.ಶ. 950) ಇವರು ಮಾನ್ಯಖೇಟಪುರದಲ್ಲಿ ಎಂದರೆ ರಾಷ್ಟ್ರಕೂಟ ರಾಜಧಾನಿಯಾಗಿದ್ದು ಈಗ ಹೈದರಾಬಾದಿನಲ್ಲಿ ಮಳ್ಖೇಡ್ ಎಂದು ಕರೆಯಲ್ಪಡುವ ಊರಿನಲ್ಲಿ, ಹೊಯ್ಸಳರಸರ ಸಾಮಂತರಾಗಿ ಅಧಿಕಾರಮಾಡುತ್ತಿದ್ದರು. ಇವರು ಅದಳವಂಶ ಅಥವಾ ಮಿತ್ರಕುಲದವರು ಎಂದರೆ ಸೂರ್ಯವಂಶದವರು. ಇವರಿಗೆ ಗಂಗಪುತ್ರರೆಂಬ ಅನ್ವರ್ಥನಾಮವಿದೆ. ಇವರು ಪೌರುಷರು, ವೀರರಸಪ್ರಿಯರು, ಸಾಮಂತ ಸಂಕ್ರಂದರು, ಸಾಮಂತಕಾಳಾನಳರು ಎಂದು ಹೇಳಿದೆ. ಕೈದಾಳದ ಸಮೀಪದಲ್ಲಿರುವ ಅದಳಾಪುರದ ಕೆರೆಯನ್ನೂ ಗಂಗಸಂದ್ರವನ್ನೂ, ನಿಟ್ಟೂರು ಹೋಬಳಿಯಲ್ಲಿರುವ ಅದಲಗೆರೆಯನ್ನೂ ಕಟ್ಟಿಸಿದವರು ಈ ವಂಶದವರೇ.

**ಬಾಚಿದೇವನ ವಂಶವೃಕ್ಷ**—ಈ ವಂಶದ ಮೂಲಪುರುಷ ಬಾಸಯ. ಬಾಸಯನ ಮಗ ಗಡ್ಡದಗಂಗ, ಇವನ ಮಗ ನಾಯಕಬಸವ, ಇವನ ಮಗ ಗಂಗ, ಇವನ ಮಗ ಬಸವ, ಇವನ ಮಗ ಚಲುವರ, ಇವನ ಮಗ ವೀರಗಂಗ. ಕೊನೆಯಲ್ಲಿ ಹೇಳಿದ ವೀರಗಂಗನು ಹೊಯ್ಸಳ ವಿಷ್ಣುವರ್ಧನನ (1106-1141) ಸಾಮಂತನಾಗಿ ದೊರೆಯ ಮೆಚ್ಚುಗೆಗೋಸ್ಕರ ವಿಷ್ಣುಸಾಮಂತನೆಂದು ಹೆಸರಿಟ್ಟುಕೊಂಡಿದ್ದನು. ಇವನು ಶಿವಗಂಗೆ ಬೆಟ್ಟದ ಮೇಲೆ ಗಂಗಾಧರೇಶ್ವರನ ಗುಡಿಕಟ್ಟಿಸಿ ದತ್ತಿಯನ್ನು ಬಿಟ್ಟನು. ತುಮಕೂರು ತಾಲ್ಲೂಕು ಬ್ರಹ್ಮಸಂದ್ರ ಗ್ರಾಮವನ್ನೂ ಅಲ್ಲಿನ ಬ್ರಹ್ಮೇಶ್ವರ ದೇವಾಲಯವನ್ನೂ ತನ್ನ ತಂದೆ ಚಲುವರನ ಜ್ಞಾಪಕಾರ್ಥವಾಗಿ ಕಟ್ಟಿಸಿದನು. ತನ್ನ ತಾಯಿ ಬೆನವಾಂಬಿಕೆಯ ಹೆಸರಿನಲ್ಲಿ ಅನೇಕ ಜಿನಾಲಯಗಳನ್ನೂ ಅದಳೇಶ್ವರ ದೇವಾಲಯಗಳನ್ನೂ ತುಮಕೂರು ತಾಲ್ಲೂಕಿನ ವಿಷ್ಣುಸಮುದ್ರ, ಬೋಚಸಮುದ್ರ (ಬಾಚೆಂದ್ರ) ಎಂಬ ಕೆರೆಗಳನ್ನೂ ಕಟ್ಟಿಸಿದನು. ವೀರಗಂಗನು ಜಯಾಂಗನಾ ರಮಣನೂ ಕದನೋದ್ಯೋಗ ಧುರಂಧರನೂ ಹೌದು. ಇವನು

ಭೀಮಂಗೆಣೆ ಭುಜಬಳದಿಂ
ರಾಮಂಗೆಣೆ ಶೌರ್ಯದೇಳ್ಗೆಯಿಂ ರೂಪಿನೊಳಾ |
ಕಾಮಂಗೆಣೆಯೆನಲೊಪ್ಪಿದ
ನೀ ಮಹಿಯೊಳ್ ಗಂಗನಮಳ ಲಕ್ಷ್ಮೀಸಂಗಂ ||

ಈ ವೀರಗಂಗನ ಮಗನೇ ಬಾಚಿದೇವ. ಇವನು ಜನ್ಮವೆತ್ತಿದುದನ್ನು ಶಾಸ
ಕವಿಯು ಹೀಗೆ ವರ್ಣಿಸಿದ್ದಾನೆ:—

ಅದಳ ಕುಳವೆಂಬ ಕುಲದೊಳ |
ಗುದಯಿಸಿದಂ ದಿನಪನಂತೆ ತೇಜೋನಿಳಯಂ ||
ಕದನ ಧನಂಜಯನಹಿತರ |
ಮದಹರಣಂ ಶೂರಬಾಚಿ ತೊದರ್ದರ ಡೊಂಕೀ ||

ಇವನಿಗೆ ಗೂಳಿ ಬಾಚಿಯೆಂತಲೂ, ಬಾಚಯನೆಂತಲೂ ಹೆಸರಿದೆ. ನೀಲಗ್ರೀ
ಪದಾಬ್ಜ ಭೃಂಗಂ, ಹರಪಾದಾಂಬುಜ ಭೃಂಗ ಬಾಚಯಂ ಎಂದು ಹೇಳಿದೆಯಾ
ರಿಂದ ಇವನು ಶೈವನು. ಆದರೂ ಕಾಲದೇಶಕ್ಕನುಸಾರವಾಗಿ ಜೈನಮತಾವಲ
ಯಾಗಿಯೂ, ವೈಷ್ಣವನಾಗಿಯೂ ವರ್ತಿಸಿದ್ದಾನೆ. ಬಾಚಿದೇವ, ಬಾಚ
ಬಾಸೆಯ ಎಂಬ ಹೆಸರುಗಳು ವಾಸುದೇವ ಎಂಬುದರ ಅಪಭ್ರಂಶಗಳೆಂದು ಚರಿತ್ರಾ
ಧಾರದಿಂದ ಕಂಡುಬಂದಿದೆ. ಇವನ ಹೆಂಡತಿಯ ಹೆಸರು ಭೀಮಳೆನಾಯಿಕಿತಿ, ಮ
ಹೆಸರು ಚೆನ್ನವ್ವೆನಾಯ್ಕಿಕಿತಿ. ಇದು ಬಾಚಿದೇವನ ವಂಶವೃಕ್ಷ.

ಮೇಲೆ ಹೇಳಿದ ಪ್ರಕಾರ ಬಾಚಿದೇವನು ಹೊಯ್ಸಳ ನರಸಿಂಹನ ಸಾಮ
ತನೂ, ಮಾನ್ಯಖೇಡ ಪುರವರಾಧೀಶ್ವರನೂ, ಮರುಗೆರೆ ನಾಡಾಳುವವನೂ ಆಗಿದ್ದ
ಕ್ರಿ. ಶ. 1151 ರಲ್ಲಿ ಕೈದಾಳ ನಗರದಲ್ಲಿ ಅನೇಕ ದೇವಸ್ಥಾನಗಳನ್ನೂ ಕೆರೆಗಳನ್ನೂ
ಬಸದಿಯನ್ನೂ ಕಟ್ಟಿಸಿ ಎಲ್ಲ ದೇವರುಗಳಿಗೂ ಗೂಳೂರು, ಕಿತ್ತಿಗಳ್ಳಿ, ಮಾಸಂ
ಭೀಮಸಮುದ್ರ, ದಿಬ್ಬೂರು ಮೊದಲಾದ ಗ್ರಾಮಗಳಲ್ಲಿ ತರಿ, ಖುಷ್ಕಿ ಜಮೀನ
ಗಳನ್ನು ದತ್ತಿಯಾಗಿ ಬಿಟ್ಟು ಶಾಸನ ಬರೆಯಿಸಿಕೊಟ್ಟನು. ಇವನು ಶೈವನಾಗಿದ್ದ
ಈಶ್ವರ, ಬ್ರಹ್ಮ, ಬುದ್ಧ, ವಿಷ್ಣು, ಜಿನ—ಇವರೆಲ್ಲರೂ ಒಂದೇ ಎಂಬ ಭಾವನೆಯನ್ನು
ಹೊಂದಿದ್ದನು. ಆದ್ದರಿಂದಲೇ ಇವನನ್ನು "ಚತುಸ್ಸಮಯ ಧರ್ಮೋದ್ಧಾ
ಧೌರೇಯಂ" ಎಂದು ಹೇಳಿದೆ. ಇವನು ಬರೆಯಿಸಿರುವ ಶಾಸನದಲ್ಲಿ

ಶಿವಾಯ ಧಾತ್ರೇ ಸುಗತಾಯ ವಿಷ್ಣವೇ
ಜಿನಾಯ ತಸ್ಮೈ ಸಕಳಾತ್ಮನೇ ನಮಃ

ಎಂಬ ಅಮೂಲ್ಯವಾಕ್ಯವು ಆರಂಭದಲ್ಲಿಯೇ ಇದೆ. ಇದನ್ನು ನೋಡಿದರೆ ಬಾಚಿದೇವನು ಪಕ್ಷಪಾತವಿಲ್ಲದೆ ಎಲ್ಲ ಮತಗಳಿಗೂ ಆಶ್ರಯದಾತನಾಗಿದ್ದನೆಂದು ವ್ಯಕ್ತಪಡುತ್ತದೆ. ತನ್ನ ಪೂರ್ವಜರಂತೆ ಇವನೂ ಉದಾರಿಯೂ, ಧರ್ಮಿಷ್ಠನೂ, ಆಚಾರಸಂಪನ್ನನೂ, ಕಲಾಪ್ರೇಮಿಯೂ, ವಿದ್ವಜ್ಜನಸನ್ಮಾನಿತನೂ ಆಗಿದ್ದನು. ಕೈದಾಳವನ್ನು ಇವನು ಅತ್ಯಂತ ಶೋಭಾಯಮಾನವಾದ ನಗರವನ್ನಾಗಿ ಮಾಡಿದನು.

ಸಾಮಂತಬಾಚಿಯ ಬಿರುದುಗಳ, ಧೈರ್ಯ ಶೌರ್ಯ ಔದಾರ್ಯ ಸಾಹಸಾದಿಗಳ ವಿಚಾರವಾಗಿಯೂ ಕೈದಾಳದ ಗತಶೋಭೆಯ ವಿಚಾರವಾಗಿಯೂ ಕೆಲವು ಪದ್ಯಗಳನ್ನು ಶಾಸನದಿಂದೆತ್ತಿ ಕೊಟ್ಟಿದೆ.

ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾಸಾಮಂತಂ, ವೀರಲಕ್ಷ್ಮೀಕಾಂತಂ, ನಾಲ್ವತ ನಾಲ್ವರ ಗಂಡ, ಮಾನ್ಯಖೇಡ ಪುರವರಾಧೀಶ್ವರಂ ಚತುರ್ಮುಖದಾಯಿಗ ಗೊಂದಳಂ ಬಡಿವಂ, ತೊಡರ್ದರ ಡೊಂಕಿಯದಳರಾದಿತ್ಯಂ ಮರುಗೆರೆ ನಾಡಾಳ್ವಂ ಸಾಮಂತಬಾಚಿಗೆ,

ಜಿನಪತಿ ಕೂರ್ತು ಬೇಳ್ಪ ಸುಖಸಂಪದಮಂ ಹರನೊಲ್ದು ಕೀರ್ತಿಯಂ |
ಕನಕಸರೋದ್ಭವಂ ವರಚಿರಾಯುವನಿಂಬಿನಲೀಗಳಚ್ಯುತಂ ||
ಮನಮೊಸೆದೊಪ್ಪುತಿರ್ಪ ಸಿರಿಯಂ ವರಬುದ್ಧ ಜಯಾಭಿವೃದ್ಧಿಯಂ |
ಮನಸಿಜರೂಪ ಬಾಚಿ ನಿನಗೀಗೆ ಶಶಾಂಕ ಕುಳಾದ್ರಿಯುಳ್ಳಿನಂ ||

ಸಿಂಗದ ಶೌರ್ಯವಂಗಜನ ರೂಪು ಮುರಾರಿಯ ಶಕ್ತಿಯಾಗಳುಂ |
ಪಿಂಗದೆ ಕರ್ಣನೀವಗುಣವಿಂದ್ರನ ಲೀಳೆ ಭುಜಂಗ ರಾಜನೊಳ್ ||
ಸಂಗಳಿಸಿರ್ದ ಪೆರ್ಮೆ ಸುರಶೈಳದ ಬಿಜ್ಪುವೊರಲ್ದು ನಿಂದವೀ |
ಗಂಗನ ಪುತ್ರನೊಳ್ ಸುಭಟ ಬಾಚಿಯೊಳೂರ್ಜಿತ ಸಬ್ಯಸಾಚಿಯೊಳ್ ||

ತೊಡರ್ದ ವಿರೋಧಿಗಂತಕನು ಬೇಡಿದ ವಂದಿಗೆ ಕಲ್ಪಭೂರುಹಂ |
ತಡೆಯದೆ ಬಂದು ಕಂಡ ಶರಣಾರ್ತಿಗೆ ವಜ್ರದ ಕೋಟೆಯೆಂಬುದೀ ||
ಪೊಡವಿ ನಿರಂತರಂ ಜಸಕೆ ನಲ್ಲನನಂಬುಜನಾಭ ನಂದನಂ |
ತೊಡರ್ದರ ಡೊಂಕಿಯಂ ಸುಭಟ ಬಾಚಿಯಮಾರ್ಜಿತ ಸಬ್ಯಸಾಚಿಯಂ ||

ತೊಡರ್ದರ ಗಂಡ ವೈರಿಗಳ ಗಂಡ ಮದಾಂಧರ ಗಂಡ ಬೀರದಿಂ |
ದೆಡರ್ವರ ಗಂಡ ಮೆಚ್ಚದರ ಗಂಡ ಪಿಸುಣ್ಬರ ಗಂಡನೆಂದುದಂ ||
ತೊಡೆಯದ ಗಂಡನಾಹವಕೆ ಸೋಲದ ಗಂಡನದೆಂದ್ಕು ನೋಳ್ಪೊಡಂ |
ತೊಡರ್ದರ ಡೊಂಕಿ ಬಾಚಿ ನಿನಗಾರ್ದೊರೆ ಗಂಡರಿಳಾ ತಳಾಗ್ರದೊಳ್ ||

ಅಲ್ಲದೆ "ಬಾಚಿದೇವಂ, ಪೆಂಪಿನಿಂ ರವಿಸುತಂ, ಸಂಗ್ರಾಮದೊಳ್ ರಾಮನಿಂ ಪಿರಿಯಂ, ಶೌಚದೊಳಂ ಜನಾತನಯಂ, ಅದಳ ಕುಳಕಮಳ ಹಂಸಂ, ಇಳೆಯೊಳ್

ನಿರ್ಮಳ ಧರ್ಮಸೂನು, ಆದಳಾನ್ವಯ ರಾಜ್ಯಭವನಮಣಿ ತೋರಣಂ, ತ್ಯಾಗ
ದಿನೇಶಸೂನು ಸದೃಶಂ, ಶೌರ್ಯಕ್ಕೆ ತಾಸರವಿಂದೋದರಂ, ನಿಜರೂಪಿಂಗೆ ಪು
ಯುಧಂ, ಬುಧ ಜನಕಂ ತಾಂ ಬಲಿಯೆನಿಪಂ "—ಎಂದು ಮುಂತಾಗಿ ಬಾಚಿದೇವ
ಗುಣಗಳನ್ನು ಕವಿಯು ವರ್ಣಿಸಿದ್ದಾನೆ.

ಇವನು ಕೈದಾಳದಲ್ಲಿ ಕಟ್ಟಿಸಿದ ಜೈನ, ಶೈವ, ವೈಷ್ಣವ ದೇವಾಲಯ
ವಿಚಾರವಾಗಿ ಕವಿಯು ಹೀಗೆ ಹೇಳಿದ್ದಾನೆ:—

ಉದ್ಧರಿಸಿ ಜೈನ ಭವನಮ |
ನುದ್ಧರಿಸಿ ಶಿವಾಲಯಂಗಳಂ ಮುದದಿಂದ ||
ನ್ನುದ್ಧರಿಸಿ ವಿಷ್ಣುಗೇಹಮ |
ನುದ್ಧರಿಸಿದನಲ್ತೆ ಬಾಚಿ ಜಸದುನ್ನತಿಯಂ ||

ಕೈದಾಳದವರು ಬಾಚಿದೇವನಿಗೆ ಋಣಿಗಳು. ಈಗ ನಾವು ನೋಡುತ್ತಿರುವ ಕೈದಾ
ಳಕ್ಕೂ ಬಾಚಿದೇವನ ಕಾಲದ ಕೈದಾಳಕ್ಕೂ ಅಜಗಜಾಂತರವಿದೆ. ಆಗಿನದು ನ
ಈಗಿನದು ಗ್ರಾಮ; ಆಗಿನದು ರಾಜಧಾನಿ, ಈಗಿನದು ಪಾಳುಭೂಮಿ; ಆಗಿನ
ಧನಿಕರು, ಈಗಿನವರು ಕೃಷಿಕರು; ಆದರೇನು? ಬಾಚಿದೇವನ ಸತ್ವವಿನ್ನೂ ಕೈದಾ
ವನ್ನು ಬಿಟ್ಟುಹೋಗಿಲ್ಲ. ಕೈದಾಳದ ಸೌಭಾಗ್ಯವಿನ್ನೂ ಅಲ್ಪಸ್ವಲ್ಪವಾದರೂ ಉಳಿದ
ಈ ಸೌಭಾಗ್ಯಾವಶೇಷಕ್ಕೆ ಸಾಮಂತಬಾಚಿಯೇ ಕಾರಣನು. ಆದರೂ ಕೈದಾಳದ
ಬಾಚಿದೇವನ ಹೆಸರು ಕೂಡ ಗೊತ್ತಿಲ್ಲ. ಗೊತ್ತಿದ್ದರೆ ಅವರು ಅವನ ಜ್ಞಾಪಕಾ
ವಾಗಿ ವರ್ಷದ ಯಾವುದಾದರೊಂದು ದಿನ ಅವನು ಕಟ್ಟಿಸಿರುವ ದೇವಸ್ಥಾನಗ
ಉತ್ಸವ, ಭಜನೆ ಮೊದಲಾದವುಗಳನ್ನು ನಡೆಯಿಸುತ್ತಿದ್ದರೆಂದು ತೋರುತ್ತ
ಈ ದೇವಾಲಯಗಳಲ್ಲಿ ಪೂಜಾಸಮಯದಲ್ಲಿ ರಾಜಾಶೀರ್ವಾದ ಹೇಳುವಾಗ ಸಾಮ
ಬಾಚಿದೇವನ ಹೆಸರನ್ನೂ ಸಹ ಉಚ್ಚರಿಸುವುದಿಲ್ಲ. ಎಂತಹ ಕೃತಘ್ನತೆ! ಕೈದಾ
ಮಹಾಶಯರು ಇನ್ನು ಮುಂದಾದರೂ ತಮಗೆ ಈ ರಾಜನು ಒದವಿಸಿಕೊ
ದೇವಾಲಯಗಳು, ಕೆರೆಗಳು ಮೊದಲಾದ ಸೌಕರ್ಯಗಳಿಗಾಗಿ ಅವನ ಜ್ಞಾಪಕಾ
ವಾಗಿ ವರ್ಷಕ್ಕೊಂದು ದಿನವಾದರೂ ಉತ್ಸವ ಸಮಾರಂಭಗಳನ್ನಿಟ್ಟುಕೊಳ್ಳುವು
ಉಚಿತವಾದುದು ಮತ್ತು ಗೌರವವಾದುದು. ಅವರ ಊರಿನ ಕೀರ್ತಿಯು ಸಾಧಾ
ವಾದುದಲ್ಲ. ಅದನ್ನು ಕಾಪಾಡಿಕೊಳ್ಳುವುದು ಅವರಿಗೆ ಧರ್ಮವೂ ಶ್ರೇಯಸ್ಕರ
ಆಗಿದೆ. ಸಾಮಂತಬಾಚಿಯು ದೇವರುಗಳನ್ನು ಪ್ರತಿಷ್ಠೆಮಾಡಿಸಿ ಶಾಸನವ
ಬರೆಯಿಸಿದುದು ಶಾಲಿವಾಹನಶಕ 1072 ನೆಯ ಪ್ರಮಾಥಿ ಸಂವತ್ಸರದ ಫಾಲ್ಗು
ಬಹುಳ ಅಮಾವಾಸ್ಯೆಯ ದಿನವಾದುದರಿಂದ ಪ್ರತಿ ವರ್ಷದಲ್ಲೂ ಬರುವ ಆ ದಿನ

ಬಾಚಿದೇವನ ಸ್ಮಾರಕೋತ್ಸವಕ್ಕೆ ಅತ್ಯುತ್ತಮವಾದ ದಿನವೆಂದು ತೋರುತ್ತದೆ. ಅವನು ಮಾಡಿರುವ ಕಾರ್ಯಗಳು ಕೈದಾಳದವರ ಕೃತಜ್ಞತೆಗೂ, ಕೇಶವದೇವಾಲಯದ ಮಹಾದ್ವಾರದಲ್ಲಿರುವ ಅವನ ವಿಗ್ರಹವು ದೇಶವತ್ಸಲರ ಮತ್ತು ಗ್ರಾಮಾಭಿಮಾನಿಗಳ ಪೂಜೆಗೂ ಅರ್ಹವಾಗಿವೆ. ಈ ವಿಗ್ರಹವು ಕೈದಾಳದಲ್ಲಿ ಇದುವರೆಗೂ ಉಳಿದಿರುವುದು ಅಲಭ್ಯವಾದ ಪುಣ್ಯವೆಂದು ಅವರು ಭಾವಿಸಬೇಕು.

**ದೇವಾಲಯಗಳು, ದತ್ತಿಗಳು, ಕೆರೆಗಳು**—ಬಾಚಿದೇವನು ಕಟ್ಟಿಸಿದ ದೇವಾಲಯಗಳ, ಕೆರೆಗಳ, ಮತ್ತು ದೇವಾಲಯಗಳಿಗೆ ಬಿಟ್ಟ ದತ್ತಿಗಳ ವಿಚಾರವಾಗಿ ಒಂದೆರಡು ಮಾತನ್ನು ಹೇಳದಿದ್ದರೆ ಈ ಉಪನ್ಯಾಸವು ಪೂರ್ಣವಾಗಲಾರದು. ಆದುದರಿಂದ ಅವುಗಳನ್ನು ಒಂದೊಂದಾಗಿ ಕೆಳಗೆ ಕೊಟ್ಟಿದೆ.

(1) ಚೆನ್ನಕೇಶವ ದೇವಸ್ಥಾನ. ಇದು ಸುಂದರವಾದ ಕಟ್ಟಡವೆಂದು ಮೊದಲೇ ಹೇಳಿದೆ. ಶ್ರೀ ನಾರಾಯಣ ಗೃಹವೆಂಬುದೂ ಇದೇ. ಬಾಚಿಯ ಸ್ಮಾರಕವೂ ಹೌದು.

ಶ್ರೀ ನಾರಾಯಣ ಗೃಹಮಂ
ಶ್ರೀ ನಾರೀ ರಮಣನದಳವಂಶ ಕುಳಾಂಬರ|
ಭಾನುವೆನಿಸಿರ್ದ ಬಾಚಿಯ
ನೂನಂ ಮಾಡಿಸಿದನಲ್ತೆ ತೊಡರ್ದರ ಡೊಂಕಿ ||

ಈ ದೇವರ ಅಂಗಭೋಗಕ್ಕೂ, ಅಷ್ಟವಿಧಾರ್ಚನೆಗೂ, ಬ್ರಾಹ್ಮಣರಾಹಾರ ದಾನಕ್ಕೂ, ದೇವಾಲಯದ ಖಂಡಸ್ಫುಟ ಜೀರ್ಣೋದ್ಧಾರಕ್ಕೂ ದಿಬ್ಬೂರು ಕೆರೆಯ ಕೆಳಗೆ ಹತ್ತು ಸಲಗೆ ಗದ್ದೆ, ಆ ಗದ್ದೆಯ ಬಳಿಯ ತೋಟ ಮತ್ತು ಹೊಲವನ್ನು ದತ್ತಿಯಾಗಿ ಬಿಟ್ಟನು.

(2) ತನ್ನ ತಂದೆ ವೀರಗಂಗನ ಜ್ಞಾಪಕಾರ್ಥವಾಗಿ ಪ್ರಸನ್ನ ಗಂಗಾಧರ ದೇವ ಸ್ಥಾನವನ್ನು ಕಟ್ಟಿಸಿದನು.

ಶ್ರೀ ಲೀಲಾಯತನಕ್ಕೆ ತಾನೇ ನೆಲೆಯಾಯ್ತೆಂಬೊಂದು ಸಂಸೇವ್ಯದಿಂ|
ನೀಲಗ್ರೀವ ಪದಾಬ್ಜ ಭೃಂಗನಧಿಕಂ ಶ್ರೀ ಬಾಚಿದೇವಂ ಯಶೋ ||
ಲೋಲಂ ವೀರಗುಣಾಂಬುರಾಸಿ ಮುದದಿಂ ಕಯ್ದಾಳದೊಳ್ ಚೆಲ್ವಿನಿಂ|
ಕೈಲಾಸಕ್ಕೆಣೆಯಾಗಿ ಮಾಡಿಸಿದನೀ ಗಂಗೇಶ್ವರಾವಾಸಮಂ||

ಈ ದೇವರಂಗ ಭೋಗ, ಅಷ್ಟವಿಧಾರ್ಚನೆ, ತಪೋಧನರಾಹಾರದಾನ ಮೊದಲಾದುವುಗಳಿಗೆ ಹಿರಿಯಕೆರೆ ಎಂದರೆ ಗೂಳೂರು ಕೆರೆಯ ಕೆಳಗೆ ಮತ್ತು ಮಾನಂಗಿ ಗ್ರಾಮದಲ್ಲಿ ಒಟ್ಟು ಆರು ಸಲಗೆ ಗದ್ದೆ, ಒಂದು ಸಲಗೆ ಹೊಲ ದತ್ತಿ ಬಿಟ್ಟುದಲ್ಲದೆ

ತಂದೆಯ ಆತ್ಮಪ್ರೀತ್ಯರ್ಥವಾಗಿ ದಿಬ್ಬೂರನ್ನು ಸಬ್ರಾಹ್ಮಣರಿಗೆ ಸರ್ವಮಾನ್ಯವಾ ಧಾರಾಪೂರ್ವಕವಾಗಿ ಕೊಟ್ಟನು—

ದಿರ್ಬೂರಂ ವಿಪ್ರಾಳಿಗೆ
ಸರ್ಬಜ್ಞ ಪದಾರವಿಂದನದಳರ ರಾಮಂ |
ದೋರ್ಬಲ ವಿಭಾಸಿ ಬಾಚಂ
ಸರ್ಬಾಬಾಧಂ ಪರಿಹಾರವೆನಿಸಿಯೆ ಕೊಟ್ಟಂ ||

(3) ತನ್ನ ಅಜ್ಜ ಸಾಮಂತ ಚಲುವರನ ಜ್ಞಾಪಕಾರ್ಥವಾಗಿ ಕಿತ್ತಿ ಹಳ್ಳಿಯಲ್ಲಿ

ಚಲುವರಿವೇಶ್ವರಗಾ ಗುಣ
ಜಲಧಿ ಜಯಶ್ರೀಗಧಿಪಂ ಬುಧಜನಕಂ ತಾ |
ಬಲಿಯೆನಿಪ ಬಾಚಿದೇವಂ
ಕುಲನಗಮಂ ಮಿಗುವ ಪೆಂಪಿನಿಂ ಮಾಡಿಸಿದಂ ||

ಈ ದೇವರಂಗ ಭೋಗಾದಿಗಳಿಗೆ ಕಿತ್ತಿಗಳ್ಳಿಯ ಕೆರೆಯ ಕೆಳಗೆ ಮೂರು ಸ ಗದ್ದೆ ಒಂದು ಸಲಗೆ ಹೊಲವನ್ನು ದತ್ತಿಯಾಗಿ ಬಿಟ್ಟನು. ಈಗ ಈ ದೇವಸ್ಥಾ ಪಾಳುಬಿದ್ದಿದೆ. ದೇವರ ಗತಿ ಏನಾಯಿತೋ ತಿಳಿಯದು. ಇದಕ್ಕೆ ಬಿಟ್ಟಿದ್ದ ದತ್ತಿ ಈಗ ಗೂಳೂರು ಶ್ರೀನಿವಾಸ ದೇವರಿಗಾಗಿದೆಯೆಂದು ತಿಳಿಯಬರುತ್ತದೆ.

(4) ತನ್ನ ಮಗಳು ಕುಮಾರಿ ಚೆನ್ನವ್ವೆ ನಾಯಿಕಿತಿಯ ಹೆಸರಿನಲ್ಲಿ

ಶ್ರೀಮಹಿಮಂ ಗುಣನಿಳಯಂ
ಭೀಮ ಪರಾಕ್ರಮನು ಬಾಚಿದೇವಂ ಮುದದಿಂ |
ರಾಮೇಶ್ವರ ಸದನಮನಾ
ಹೇಮಾದ್ರಿಗೆ ಮಿಗಿಲೆಂಬಿನಂ ಮಾಡಿಸಿದಂ ||

ಈ ದೇವರಂಗ ಭೋಗಾದಿಗಳಿಗೆ ಹಿರಿಯ ಕೆರೆ ಎಂದರೆ ಗೂಳೂರು ಕೆರೆ ಕೆಳಗೂ ಮಾಸಂಗಿಯಲ್ಲೂ ಒಟ್ಟು ಆರು ಸಲಗೆ ಗದ್ದೆ, ಒಂದು ಸಲಗೆ ಹೊಲ, ದೇವ ನಂದಾದೀವಿಗೆಗೆ ಒಂದು ಎತ್ತು ಗಾಣ ಸಹ ದತ್ತಿಯಾಗಿ ಕೊಟ್ಟನು.

ಒಂದು ಸಮಸ್ಯೆ—ಈ ಗುಡಿಯ ದಕ್ಷಿಣಕ್ಕಿರುವ ಚಿಕ್ಕ ಈಶ್ವರನ ಗುಡಿಗೆ ಗೌ ಶ್ವರ ದೇವಾಲಯವೆಂದು ಹೆಸರು. ಇದರ ವಿಚಾರವಾಗಿ ಶಾಸನದಲ್ಲಿ ಏನನ್ನೂ ಹೇಳ ವಾದುದರಿಂದ ಇದು 1151 ನೆಯ ಇಸವಿಯ ಈಚೆಗೆ ಪ್ರತಿಷ್ಠೆಯಾಗಿರಬಹುದೆಂದು ತೋರುತ್ತದೆ. ಒಂದು ವೇಳೆ ಕಿತ್ತಿಗಳ್ಳಿಯಲ್ಲಿ ಮಾಯವಾಗಿ ಹೋಗಿರುವ ಚಲುವ ರೇಶ್ವರ ಲಿಂಗವನ್ನು ಯಾರಾದರೂ ಇಲ್ಲಿಗೆ ತಂದು ಪ್ರತಿಷ್ಠೆಮಾಡಿರಬಹುದೆಂದು

ಹಿಸಲವಕಾಶವಿದೆ. ಏಕೆಂದರೆ, ಬಾಚಿದೇವನು ತನ್ನ ಅನುಬಂಧಿಗಳಾದ ತಂದೆ, ಹೆಂಡತಿ, ಮಗಳು—ಇವರ ಹೆಸರಿನಲ್ಲಿ ದೇವಾಲಯಗಳನ್ನು ಕೈದಾಳದಲ್ಲಿ ಮಾಡಿಸಿ ತನ್ನ ಪಿತಾಮಹನ ಹೆಸರಿನಲ್ಲಿ, ದೂರವಾದ ಕಿತ್ತಿಗಳ್ಳಿಯಲ್ಲಿ ದೇವಾಲಯ ಕಟ್ಟಿಸಿದುದು ಔಚಿತ್ಯವಾಗಿ ಕಾಣುವುದಿಲ್ಲ. ಆದುದರಿಂದ ಶಾಸನ ಬರೆದನಂತರ ಚಲುವರೇಶ್ವರ ನನ್ನು ಕೈದಾಳಕ್ಕೇ ತಂದು ರಾಮೇಶ್ವರನ ಗುಡಿಯ ಪಕ್ಕದಲ್ಲಿ ಪ್ರತ್ಯೇಕ ಗುಡಿ ಕಟ್ಟಿ ಪ್ರತಿಷ್ಠೆ ಮಾಡಿರಬಹುದೆಂದು ತೋರುತ್ತದೆ. ಹೀಗೆ ಮಾಡಿದ್ದರೆ ಚಲುವರೇಶ್ವರನಿಗೆ ಗೌರೀಶ್ವರನೆಂದು ಏಕೆ ಹೆಸರಾಯಿತೆಂಬುದಕ್ಕೆ ತೃಪ್ತಿಕರವಾದ ಸಮಾಧಾನ ಕೊಡು ವುದು ಕಷ್ಟವಾಗಿದೆ. ಕಿತ್ತಿಗಳ್ಳಿಯವರು ಚಲುವರೇಶ್ವರನ ಅಂಗಪೀಠಗಳು ಆ ಹಳ್ಳಿ ಯಲ್ಲೇ ಯಾರ ಮನೆಯಲ್ಲೋ ಒರಳುಕಲ್ಲು ಗುಂಡಾಗಿವೆಯೆಂದು ಹೇಳುತ್ತಾರೆ. ಕಿತ್ತಿಗಳ್ಳಿಯವರ ಮಾತು ನಿಜವಾದಲ್ಲಿ ಸಮಸ್ಯೆಯು ಪರಿಹಾರವಾದಂತೆಯೇ.

(5) ತನ್ನ ಹೆಂಡತಿಯಾದ "ಮನಸ್ಸರೋವರಾಳಂಕಾರ ರಾಜಹಂಸಿನಿ, ಪುಣ್ಯ ಗುಣಾಭಿರಾಮೆ, ಮಹಾಸೌಭಾಗ್ಯಶೀಳ ಸೌಂದರ್ಯಸಂಪನ್ನೆ, ಪರಿವಾರ ಸುರಭಿ." ಭೀಮಲೆ ನಾಯಿಕಿತಿಯ ಹೆಸರಿನಲ್ಲಿ ಭೀಮಜಿನಾಲಯವೆಂದು ಬಸದಿಯನ್ನು ಮಾಡಿಸಿ, ಭೀಮಸಮುದ್ರವೆಂಬ ಕನ್ನೆ ಗೆರೆಯನ್ನು ಕಟ್ಟಿಸಿ ಆ ಕೆರೆಯ ಕೆಳಗೆ ಭೀಮಜಿನಾಲಯದ ಶ್ರೀ ಚೆನ್ನಪಾರಿಶ್ವದೇವರಂಗಭೋಗಾದಿಗಳಿಗೆ ಎಂಟು ಸಲಗೆ ಗದ್ದೆಯನ್ನೂ ಭೀಮ ಸಮುದ್ರಗ್ರಾಮದಲ್ಲಿ ಎರಡು ಸಲಗೆ ಹೊಲವನ್ನೂ ದತ್ತಿಯಾಗಿ ಕೊಟ್ಟನು. ಈಗಿನ ಮೆಳೆಕೋಟೆಗ್ರಾಮವು ಭೀಮಳೆ ನಾಯಿಕಿತಿಯ ಹೆಸರಿನಲ್ಲಿ ಕಟ್ಟಿದುದೆಂದು ತೋರು ತ್ತದೆ. ಭೀಮಳೆಕೋಟೆಯೆಂಬ ಹೆಸರು ಕಾಲಕ್ರಮೇಣ ಮೆಳೆಕೋಟೆಯೆಂದು ಪರಿವರ್ತನ ವಾಗಿರಬಹುದು.

ಭೀಮಜಿನಾಲಯಕ್ಕೆ ಸೇಸಬೋವ ಎಂದರೆ ಶಾನುಭೋಗ ಮಾರಮಯ್ಯ ನೆಂಬವನು ಬಾಚಿದೇವನಿಂದ ಭೂಮಿಯನ್ನು ಪಡೆದು ಮಾರಸಮುದ್ರವೆಂಬ ಕನ್ನೆಗೆರೆ ಯನ್ನು ಕಟ್ಟಿಸಿ ಅದನ್ನೂ ಚೆನ್ನಪಾರಿಶ್ವದೇವರಿಗೆ ದತ್ತಿಯಾಗಿ ಬಿಟ್ಟನು. ಭೀಮ ಜಿನಾಲಯವೆಂಬ ಬಸದಿಯು ಈಗ ಇಲ್ಲ. ಇದನ್ನು ಬಾಚಿದೇವನು ಅಮ್ಮನ ತೋಟದ ಬೃಂದಾವನ ಸಮೀಪದಲ್ಲಿ ಕಟ್ಟಿದನೆಂದು ಹೇಳಬಹುದು. ಮಾರಸಮುದ್ರವೆಂಬುದೇ ಕೈದಾಳದ ಕೆರೆ. ಈ ಕೆರೆಯಂಗಳದಲ್ಲಿ ಬಸದಿಯು ಕಟ್ಟಿರಬೇಕು.

**ಮಾರಸಮುದ್ರ, ಅದಳಸಮುದ್ರ**—ಒಟ್ಟಿನಲ್ಲಿ ಸಾಮಂತಬಾಚಿಯು ಕೈದಾಳ ಮತ್ತು ಅಕ್ಕಪಕ್ಕ ಪ್ರದೇಶಗಳಲ್ಲಿ ಭೀಮಜಿನಾಲಯ ಬಸದಿಯೂ ಸೇರಿ ಐದು ದೇವಸ್ಥಾನಗಳನ್ನೂ ಭೀಮಸಮುದ್ರ, ಮಾರಸಮುದ್ರ, ಅದಳಸಮುದ್ರಗಳೆಂಬ ತಟಾಕಗಳನ್ನೂ ಕಟ್ಟಿಸಿದನು. ದೇವಸ್ಥಾನಗಳ ವಿಚಾರವನ್ನು ವಿಸ್ತಾರವಾಗಿ ಮೇಲೆ

ಹೇಳಿಯಾಯಿತು. ಭೀಮಸಮುದ್ರದ ಕೆರೆಗೆ ಈಗಲೂ ಅದೇ ಹೆಸರಿದೆ. ಅದಳಸಮುದ್ರ ವೆಂಬುದು ಈಗ ಕೈದಾಳಕ್ಕೆ ಪಶ್ಚಿಮದಲ್ಲಿ ಮೂರುಮೈಲಿ ದೂರದಲ್ಲಿರುವ ಅದ... ಪುರದ ಕೆರೆ. ಈ ಕೆರೆಗಳೆರಡನ್ನೂ ಕನ್ನೆಗೆರೆಗಳೆಂದು ಹೇಳಿರುವುದರಿಂದ ಇವು ಹೊ... ದಾಗಿ ನಿರ್ಮಾಣವಾಗಿರಬೇಕೆಂಬುದು ಖಂಡಿತ. ಇನ್ನುಳಿದುದು ಮಾರಸಮುದ್ರ ಇದೂ ಕನ್ನೆಗೆರೆಯೇ. ಇದು ಕೈದಾಳಕೆರೆಯೆಂದು ಮೇಲೆಯೇ ಹೇಳಿದೆಯಾದ... ಇದರ ವಿಚಾರವಾಗಿ ಸ್ವಲ್ಪ ಜಿಜ್ಞಾಸೆ ಅವಶ್ಯಕವಾಗಿದೆ. ಮಾರಸಮುದ್ರವನ್ನು ಕಟ್ಟಿದುದು "ಮುದುಗೆರೆಯ ಬಾಗಿನೊಳ್" ಎಂದು ಶಾಸನದಲ್ಲಿ ಹೇಳಿದೆ. ತುಮಕೂ... ತಾಲ್ಲೂಕಿನಲ್ಲಿರುವ ಮದುಗೆರೆಗೂ ಶಾಸನದಲ್ಲಿ ಹೇಳಿರುವ ಮುದುಗೆರೆಗೂ ಸಂಬ... ವಿಲ್ಲ. ಕೈದಾಳದಿಂದ ಉತ್ತರಕ್ಕೆ ಸುಮಾರು ಆರು ಮೈಲಿ ದೂರದಲ್ಲಿ ಮುದು... ಗ್ರಾಮವಿದೆ. ಆ ಗ್ರಾಮದ ಉತ್ತರಭಾಗದಲ್ಲಿ ಮುದುಗೆರೆ ಕೆರೆಯಿದೆ. ಆದರೆ ... ಮಾರಮಯ್ಯನು ಕಟ್ಟಿಸಿದುದಲ್ಲ. ಮಾರಸಮುದ್ರವು ಕೈದಾಳದ ಉತ್ತರಕ್ಕಿರು... ಭಗ್ನಾವಶೇಷವಾದ ಕೆರೆ. ಕೈದಾಳವು ಈ ಕೆರೆಯ ಅಂಗಳದಲ್ಲಿದೆ. ಈ ಕೆ... ಏರಿಯು ಮರಳೂರು ಕೆರೆಯ ಮಧ್ಯಕೋಡಿ ಸಮೀಪದಲ್ಲಿ ಪ್ರಾರಂಭವಾಗಿ ಪಶ್ಚಿಮಕ್ಕೆ ಸುಮಾರು ಮೂರು ಫರ್ಲಾಂಗುಗಳ ವರೆಗೆ ಹಬ್ಬಿದೆ. ಇದರ ಅಗಲ ಕಮ್ಮಿ. ಅ... ದಲ್ಲಿ ಒಂದು ಕಾಲುವೆಯಂತಿದೆ. ಏರಿಯು ಬಹಳ ಹಳೆಯದೆಂದು ನೋಡಿದ... ಕಾಣುತ್ತದೆ. ಕೆಲವು ಸ್ಥಳಗಳಲ್ಲಿ ಆಳ ಜಾಸ್ತಿ. ಶಾಸನದಲ್ಲಿರುವ 'ಮುದುಗೆ... ಎಂಬ ಶಬ್ದಕ್ಕೆ ಮೂಡುಕೆರೆ ಎಂದರೆ ಪೂರ್ವಕ್ಕಿರುವ ಮರಳೂರು ಕೆರೆಯೆಂದು 'ಬಾಗಿನೊಳ್' ಎಂಬ ಶಬ್ದಕ್ಕೆ ಮರಳೂರು ಕೆರೆ ಏರಿಯು ಡೊಂಕಾಗಿ ಬಾ... ಕೊಂಡಿರುವ ಕಡೆಯೆಂತಲೂ ಅರ್ಥಮಾಡಿದರೆ ಮಾರಸಮುದ್ರವು ಕೈದಾಳದ ಕೆ... ಯೆಂದೇ ಸಿದ್ಧಾಂತವಾಗುವುದು.

ಈ ಶಾಸನವನ್ನು ಬರೆದ ಕವಿ ಯಾರು ?

**ಹೊಸ ವಿಷಯ, ಮಾಚಿರಾಜಕವಿ 1151**—ಈ ಶಾಸನವನ್ನು ಬರೆದವ... ಮಾಚಿರಾಜಕವಿಯೆಂದು ಶಾಸನದ ಕೊನೆಯ ಪದ್ಯದ ಮೇಲಿರುವ ಪದ್ಯದಿಂ... ತೋರಿಬರುತ್ತದೆ. ಗ್ರಂಥಕರ್ತರು ಗ್ರಂಥಾಂತದಲ್ಲಿ ತಮ್ಮ ಹೆಸರನ್ನು ಹೇಳಿಕೊ... ವುದು ಪ್ರಾಚೀನವಾದ ವಾಡಿಕೆ. ಅನೇಕ ಶಾಸನಗಳಲ್ಲಿಯೂ ಈ ಪದ್ಧತಿಯು ಕಂಡು ಬರುತ್ತದೆ. ಈ ಶಾಸನ ಬರೆದ ಕವಿಯು ತಾನು ಬರೆದೆನೆಂದು ಕಂಠೋಕ್ತವಾ... ಹೇಳದಿದ್ದರೂ ಶಾಸನದ ಮುಖ್ಯ ವಿಷಯಗಳನ್ನೆಲ್ಲಾ ಉಲ್ಲೇಖಿಸಿದನಂತರ ಕಟ್ಟಕ... ಯಲ್ಲಿ ಮಂಗಳಪದ್ಯವನ್ನು ಹೇಳುವ ಮೊದಲು ಮಾಚಿರಾಜನೆಂಬ ವಿದ್ವಾಂಸ... ಸಾಮಂತಬಾಚಿಯು ಸಂತೋಷಭರಿತನಾಗಿ ದಿಬ್ಬೂರಲ್ಲಿ ಗದ್ದೆ, ಹೊಲ, ತೋ...

ಮನೆಗಳನ್ನು ಸಂಭಾವನೆಯಾಗಿ ಕೊಟ್ಟುದನ್ನು ಹೇಳಿದೆ. ಈ ಸಂಭಾವನೆಯನ್ನು ಅವನ ಪಾಂಡಿತ್ಯಕ್ಕೆ ಕೊಟ್ಟುದೆಂದು ಹೇಳುವುದು ಅಷ್ಟೇನೂ ಸಾಧುವಾದ ಅಭಿಪ್ರಾಯವಲ್ಲ, ಶಾಸನ ಬರೆದುಕೊಟ್ಟುದಕ್ಕೆಂದು ಭಾವಿಸಬೇಕು.

ಶಾಸನಗಳನ್ನು ಬರೆದ ಕವಿಗಳಲ್ಲಿ ಕೆಲವರು ತಾವು ಬರೆದೆವೆಂದು ಹೇಳಿಕೊಂಡಿರುವುದಕ್ಕೂ ಹಾಗೆ ಹೇಳದೆ ಇರುವುದಕ್ಕೂ ಉದಾಹರಣೆಗಳಿವೆ. ಅರಸೀಕೆರೆಯ ಕೇಶವ ದೇವಸ್ಥಾನದ ಶಾಸನದ ಕೊನೆಯಲ್ಲಿ

ಭುವನನುತ ವಾಜಿವಂಶೋ
ದ್ಭವಕರವಿಭು ಸೋಮನಾಥ ರುದ್ರಂ ಪೇಳ್ದಂ |
ಕವಿರಾಜಂ ಕಾಶ್ಯಪಗೋ
ತ್ರವರ್ಧನಂ ದೇವಪಾರ್ಶ್ವನೀ ಶಾಸನಮಂ ||

ಆದರೆ ಸೊರಬದ ತಾಲ್ಲೂಕು ಕೊಡಕಣಿ ಗ್ರಾಮದಲ್ಲಿರುವ ಶಾಸನದ ಕೊನೆಯಲ್ಲಿ "ಕಡುಜಾಣಂ ಸತ್ಕವೀಂದ್ರ ಶಂಕರ ವಿಬುಧಂ" ಎಂದು ಮಾತ್ರ ಇದೆ. ಹೀಗಿದ್ದಾಗ್ಯೂ ಈ ಶಾಸನವನ್ನು ಅವನೇ ಬರೆದನೆಂದು ಪ್ರಾಜ್ಞರ ಅಭಿಪ್ರಾಯ.

ಈ ವಿಷಯಕ್ಕೆ ಸಂಬಂಧಪಟ್ಟ ಪದ್ಯವು ಹೀಗಿದೆ:—

ಪರಮಾನಂದದೆ ಬಾಚಿದೇವನ ಭಯಂ ದಿಬ್ಬೂರಲ್ಕೆಗಂಡುಗಂ |
ದೊರೆವೆತ್ತಗ್ಗದ ಗರ್ದೆ ಬಿರ್ದಲೆಯನಂತ್ತಾ ತೋಂಟ ಸದ್ಗೇಹಮಂ ||
ಸ್ಥಿರತೇಜಂ ಕುಡಲಿಂತುದಾತ್ತ ಪಡೆದಂ ಚಾತುರ್ಯ ಚಕ್ರೇಶ್ವರಂ |
ವರವಿದ್ಯಾನಿಧಿ ಮಾಚಿರಾಜ ವಿಬುಧಂ ಚಂದ್ರಾರ್ಕರುಳ್ಳನ್ನೆಗಂ ||

ಪದ್ಯದ ಅರ್ಥವು ಸುಲಭವಾಗಿಯೇ ಇದೆ:—

ಸಾಮಂತ ಬಾಚಿದೇವನು ಸಂತೋಷದಿಂದ ದಿಬ್ಬೂರಲ್ಲಿ ಭೂಸ್ಥಿತಿಯನ್ನು ಚಾತುರ್ಯ ಚಕ್ರೇಶ್ವರನೂ ವರವಿದ್ಯಾನಿಧಿಯೂ ಆದ ಮಾಚಿರಾಜನೆಂಬ ವಿದ್ವಾಂಸನಿಗೆ ಕೊಟ್ಟನು.

ಕವಿಚರಿತ್ರೆಯಲ್ಲಿ ಸೇರಿಲ್ಲ—ಈ ಕಾಲದಲ್ಲಿ, ಎಂದರೆ ಹನ್ನೆರಡನೆಯ ಶತಮಾನದಲ್ಲಿ ಮಾಚಿರಾಜನೆಂಬ ಹೆಸರಿನ ಕವಿ ಯಾರೂ ಇರಲಿಲ್ಲವೆಂದು ಕರ್ಣಾಟಕ ಕವಿಚರಿತೆಯ ಪ್ರಥಮ ಸಂಪುಟದಿಂದ ತಿಳಿಯಬರುತ್ತದೆ. ಆದರೆ 71 ನೆಯ ಪುಟದಲ್ಲಿ ಮಾಚಿರಾಜನೆಂಬ ಹೆಸರು ಹೇಳಲ್ಪಟ್ಟಿದೆ. ಆ ಮಾಚಿರಾಜನು ಚಾಳುಕ್ಯರಾಜ ಜಯಸಿಂಹದೇವನ ಮಹಾ ಸಾಮಂತರಲ್ಲೊಬ್ಬನು. ಅವನು ಕವಿಯಲ್ಲ, ಕವಿಗಳ ಪೋಷಕನಾಗಿದ್ದನು. ಅವನು ಬದುಕಿದ್ದುದು 1079 ನೆಯ ಇಸವಿಯಲ್ಲಿ. ಕೈದಾಳದ ಶಾಸನವು ಬರೆಯಲ್ಪಟ್ಟುದು 1151 ನೆಯ ಇಸವಿಯಲ್ಲಿ. ಮಾದಿರಾಜನೆಂಬ ಹೆಸರಿನ ಕವಿಗಳು ನಾಲ್ಕಾರು ಮಂದಿ ಇದ್ದಾರೆ. ಆದರೆ ಅವರಾರೂ ಈ ಶಾಸನಕ್ಕೆ ಸಂಬಂಧಪಟ್ಟವರಲ್ಲ—ಇತ್ಯಾದಿ

ಕಾರಣಗಳಿಂದ ಕರ್ಣಾಟಕ ಕವಿಚರಿತೆಯಲ್ಲಿ ಈ ಕವಿಯ ಹೆಸರು ಪ್ರಮಾದದಿ
ಕೈಬಿಟ್ಟು ಹೋಗಿದೆಯೆಂದು ತೋರುತ್ತದೆ.

ಬ್ರಾಹ್ಮಣ ಕವಿ—ಈ ಮಾಚಿರಾಜ ಕವಿಯು ಬ್ರಾಹ್ಮಣನೆಂಬುದರಲ್ಲಿ ಸಂದೇ
ವಿಲ್ಲ. ಏಕೆಂದರೆ ಬಾಚಿದೇವನು ಮಾಚಿರಾಜನಿಗೆ ಭೂಸ್ಥಿತಿಯನ್ನು ಕೊಟ್ಟ
ದಿಬ್ಬೂರಲ್ಲಿ. ದಿಬ್ಬೂರು ಗ್ರಾಮವನ್ನು ಸರ್ವಮಾನ್ಯವಾಗಿ ಸಬ್ರಾಹ್ಮಣ
ಬಾಚಿಯು ಕೊಟ್ಟನೆಂದು ಶಾಸನದಲ್ಲಿದೆ. ಆ ಕಾಲದಲ್ಲಿ ದಿಬ್ಬೂರಲ್ಲಿ ಬ್ರಾಹ್ಮಣ
ಹೆಚ್ಚಾಗಿದ್ದಿತು. ಮಾಚಿರಾಜನು ಅನ್ಯಮತದವನಾಗಿದ್ದರೆ ಅವನು ದಿಬ್ಬೂ
ಭೂಸ್ಥಿತಿಯನ್ನು ಪಡೆಯುವುದಕ್ಕೆ ಅಪೇಕ್ಷಿಸುತ್ತಿರಲಿಲ್ಲ. ಇವನ ಜನ್ಮಸ್ಥ
ದಿಬ್ಬೂರೇ ಆಗಿರಬೇಕು. ಕೈದಾಳಕ್ಕೂ ದಿಬ್ಬೂರಿಗೂ ಸುಮಾರು ನಾಲ್ಕು ಮೈ
ದೂರವಿದೆ. ಕೈದಾಳವು ಅನೇಕ "ಕವಿರಾಜ ಪ್ರವರರ್ಕಳಿಂ" ತುಂಬಿತ್ತಾದ
ಮಾಚಿರಾಜನ ಜನ್ಮಭೂಮಿಯು ಕೈದಾಳವೇ ಆಗಿದ್ದರೆ ಅವನು ಭೂಸ್ಥಿತಿಯ
ದೂರವಾದ ಅನ್ಯಗ್ರಾಮದಲ್ಲಿ ಅಪೇಕ್ಷಿಸುತ್ತಿರಲಿಲ್ಲ. ಒಂದುವೇಳೆ ಮಾಚಿರಾ
ಸಾಮಂತಬಾಚಿಯ ಆಸ್ಥಾನ ವಿದ್ವಾಂಸನಾಗಿದ್ದರೂ ಇರಬಹುದು. "ವರವಿ
ನಿಧಿ" "ಚಾತುರ್ಯ ಚಕ್ರೇಶ್ವರಂ" ಎಂಬಿವು ಅವನ ಬಿರುದುಗಳೆಂಬುದ
ಲೇಶವೂ ಸಂದೇಹವಿಲ್ಲ.

ಶಾಸನದಲ್ಲಿರುವ ಟೀಕುಗಳ ಪ್ರಯೋಗ, ಭಾಷಾಶೈಲಿ, ಅರ್ಥಗಾಂಭೀರ
ಪದಬಂಧಗಳನ್ನು ನೋಡಿದರೆ ಮಾಚಿರಾಜನು ಇವನ ಸಮಕಾಲೀನರಾದ ರಾ
ದಿತ್ಯ, ಬ್ರಹ್ಮಶಿವ, ಕರ್ಣಪಾರ್ಯ, ಇಮ್ಮಡಿನಾಗವರ್ಮ, ಮಧುಸೂದನ
ಸುಮನೋಬಾಣ, ಶಾಂತಿನಾಥನೇ ಮೊದಲಾದವರ ಗುಂಪಿಗೆ ಸೇರಲರ್ಹನೆ
ತೋರುತ್ತದೆ. ಇವನ ಹೆಸರನ್ನು ಯಾವ ಕವಿಗಳೂ ಹೇಳಿಲ್ಲ. ಇವನು ಬ
ಯಾವ ಗ್ರಂಥವೂ ಸಿಕ್ಕಿಲ್ಲ.

ಹೊಯ್ಸಳ ನರಸಿಂಹನ ಕಟಕೋಪಾಧ್ಯಾಯನಾಗಿದ್ದ ಸುಮನೋಬಾ
ನಾಗಲಿ, ಶಾಂತಿನಾಥನಾಗಲಿ ಈ ಶಾಸನ ಬರೆದಿರಬಹುದೆಂದೂಹಿಸಲು
ಸ್ವಲ್ಪ ಅವಕಾಶವಿದೆ. ಆದರೆ ನಿರ್ದಿಷ್ಟವಾದ ಆಧಾರವಿಲ್ಲ. ಅಂತಹ ಊಹೆಯ
ಬಹು ಕ್ಷಣಿಕವಾದುದು. ಕನ್ನಡಕವಿಗಳ ಮತ, ದೇಶ, ಕಾಲ ವರ್ತಮಾನಗಳ ವಿಷ
ದಲ್ಲಿ ಭಿನ್ನಾಭಿಪ್ರಾಯಕ್ಕೆ ತುದಿ ಮೊದಲಿಲ್ಲ. ಪ್ರಾಚೀನ ಸಾಹಿತ್ಯದ ಹಣೆಯ
ಹವೇ ಇಷ್ಟೆಂದು ತೋರುತ್ತದೆ. ಈ ಭಿನ್ನಾಭಿಪ್ರಾಯಕ್ಷೇತ್ರದಲ್ಲಿ ಪ್ರಾಜ್ಞ
ಸಮಾಲೋಚನೆಗೆ ಯಾವಾಗಲೂ ಅವಕಾಶವಿದ್ದೇ ಇದೆ.

ಎ. ಶ್ರೀಕಂಠಯ್ಯ

---

# ಕಾಲೇಜುಗಳಲ್ಲಿ ಭಾಷೇತರ ವಿಷಯಗಳನ್ನು ಕನ್ನಡದಲ್ಲಿ ಬೋಧಿಸುವುದು

[ಇದೇ ಜೂನ್ ತಿಂಗಳು ಹನ್ನೆರಡನೆಯ ತಾರೀಖು ಮೈಸೂರು ಪ್ರಜಾಪ್ರತಿನಿಧಿ ಸಭೆ ಸೇರಿದ್ದಾಗ ಅಲ್ಲಿ, ಗುಂಡ್ಲುಪೇಟೆಯ ಶ್ರೀಮಾನ್ ಬಿ. ತಿಮ್ಮಾಜಯ್ಯನವರು, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡವೇ ಶಿಕ್ಷಣ ಭಾಷೆಯಾಗಿರಬೇಕೆಂಬ ಒಂದು ನಿರ್ಣಯವನ್ನು ತಂದರು. ಅದು ಬಹುಮತದಿಂದ ಅಂಗೀಕೃತವಾಯಿತು. ವಿದ್ಯಾಮಂತ್ರಿಗಳು ಅಂದು ಅಪ್ಪಣೆ ಕೊಡಿಸಿದಂತೆ "ಈ ನಿರ್ಣಯದಲ್ಲಿರುವ ಒಂದು ಮುಖ್ಯ ತತ್ವವು ಎಲ್ಲರಿಗೂ ಬೇಕಾದುದಾಗಿದೆ. ಅದು ಎಲ್ಲರ ಆಸೆ, ಕನ್ನಡಿಗರ ಆಸೆ, ಮತ್ತು ಒಟ್ಟು ಮೈಸೂರು ಸಂಸ್ಥಾನದಲ್ಲಿರುವ ಎಲ್ಲರ ಆಸೆ." ಆದ್ದರಿಂದ, ಈ ನಿರ್ಣಯದ ಸಂಬಂಧವಾಗಿ ನಡೆದ ಭಾಷಣಾದಿಗಳ ಪೂರ್ತಿಯೂ ಅಧಿಕೃತವೂ ಆದ ವರದಿಯನ್ನು ಮುಂದೆ ಕೊಟ್ಟಿದ್ದೇವೆ —ಸಂ.]

### ಶ್ರೀಮಾನ್ ಬಿ. ತಿಮ್ಮಾಜಯ್ಯನವರು

ಸ್ವಾಮಿ, ನನ್ನ ಹೆಸರಿನಲ್ಲಿರುವ ಈ ನಿರ್ಣಯವನ್ನು ಸಭೆಯ ಮುಂದಿಡುತ್ತೇನೆ :

"ಸರ್ಕಾರದ ವಿದ್ಯಾಭ್ಯಾಸದ ಇಲಾಖೆಯವರು ಸಂಸ್ಥಾನದ ಹೈಸ್ಕೂಲುಗಳಲ್ಲಿ ಯಾವ ರೀತಿ ಕನ್ನಡವನ್ನು ಭಾಷೇತರ ವಿಷಯಗಳನ್ನು ಬೋಧಿಸುವುದಕ್ಕಾಗಿ ಶಿಕ್ಷಣ ಭಾಷೆಯನ್ನಾಗಿ ಮಾಡಿರುತ್ತಾರೆಯೋ, ಅದೇ ರೀತಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದವರೂ ಸಹ ಸಂಸ್ಥಾನದ ಇಂಟರ್‌ಮಿಡಿಯೆಟ್ ಕಾಲೇಜುಗಳಲ್ಲಿ ಕನ್ನಡವನ್ನು ಶಿಕ್ಷಣ ಭಾಷೆಯನ್ನಾಗಿ ಮಾಡಿ ಅದರಲ್ಲಿಯೇ ಪಾಠ ಹೇಳುವಂತೆ ಅವರಿಗೆ ಸೂಚಿಸಬೇಕೆಂದು ಈ ಸಭೆಯವರು ಶ್ರೀಮನ್ಮಹಾರಾಜರವರ ಸರ್ಕಾರದವರಿಗೆ ಸಲಹೆ ಮಾಡುತ್ತಾರೆ."

ಎಲ್ಲಾ ದೇಶಗಳಲ್ಲಿಯೂ ಆಯಾ ದೇಶದ ಮಾತೃಭಾಷೆಗೆ ಒಂದು ಮುಖ್ಯ ಸ್ಥಾನವಿರುತ್ತದೆ. ನಮ್ಮ ಮೈಸೂರು ದೇಶದ ಮಾತೃಭಾಷೆ ಕನ್ನಡ. ಈ ಕಾರಣದಿಂದ ಹೈಸ್ಕೂಲುಗಳಲ್ಲಿ ಭಾಷೇತರ ಶಿಕ್ಷಣ ಭಾಗಗಳನ್ನು ಯಾವ ರೀತಿ ಕನ್ನಡದಲ್ಲೇ ಬೋಧಿಸುತ್ತಿದ್ದಾರೆಯೋ ಅದೇ ರೀತಿಯಲ್ಲಿ ವಿಶ್ವವಿದ್ಯಾನಿಲಯದವರೂ ಸಹ ಇಂಟರ್ ಮಿಡಿಯೇಟ್ ಮತ್ತು ಬಿ.ಎ. ತರಗತಿಗಳಲ್ಲೂ ಸಹ ಮಾತೃಭಾಷೆಯಾದ ಕನ್ನಡ ಭಾಷೆಯ ಮೂಲಕವೇ ಬೋಧಿಸುವಂತೆ ಏರ್ಪಾಡುಮಾಡಬೇಕೆಂದು ನನ್ನ ಪ್ರಾರ್ಥನೆ.

## ಶ್ರೀಮಾನ್ ಬಿ. ಆರ್. ಪುಟ್ಟನಂಜಪ್ಪನವರು

ಸ್ವಾಮಿ, ಈ ನಿರ್ಣಯವನ್ನು ಅನುಮೋದಿಸುತ್ತಾ ಒಂದೆರಡು ಅಂಶಗಳನ್ನು ತಮ್ಮ ಗಮನಕ್ಕೆ ತರಲಿಚ್ಛಿಸುತ್ತೇನೆ. ಈಗ ನಮ್ಮ ಸಂಸ್ಥಾನದಲ್ಲಿರುವ ಹೈಸ್ಕೂಲುಗಳಲ್ಲಿ ಕನ್ನಡವು ಶಿಕ್ಷಣ ಭಾಷೆಯಾಗಿದೆ. ೧೯೩೧–೩೨ನೆಯ ವರ್ಷದಲ್ಲಿ ಈ ಪದ್ಧತಿಯು ಜಾರಿಗೆ ಬಂದಿತು. ಪ್ರಾರಂಭದಲ್ಲಿ ಚರಿತ್ರೆ, ಭೂವಿವರಣೆಯನ್ನು ಕನ್ನಡದಲ್ಲಿಯೇ ಬೋಧಿಸಬೇಕೆಂದು ಹೇಳಿದರು. ಅದೇ ಪ್ರಕಾರ ಕನ್ನಡವು ಶಿಕ್ಷಣ ಭಾಷೆಯಾಗಿ ಏರ್ಪಟ್ಟು ಅದು ಬಹಳ ಪರಿಣಾಮಕಾರಿಯಾಗಿದೆ. ವಿದ್ಯಾರ್ಥಿಗಳು ವಿಷಯ ಗ್ರಹಣ ಮಾಡಿಕೊಳ್ಳುವುದಕ್ಕೆ ಬಹಳ ಮಟ್ಟಿಗೆ ಇದು ಸಾಧಕವಾಗಿದೆ. ಈ ವಿಷಯವನ್ನರಿತು ೧೯೩೪–೩೫ ರಲ್ಲಿ ಗಣಿತವನ್ನು ಕೂಡ ಕನ್ನಡದಲ್ಲಿ ಬೋಧಿಸಬೇಕೆಂದು ಇಲಾಖೆಯವರು ಅಪ್ಪಣೆಮಾಡಿದರು. ಆಮೇಲೆ ೧೯೩೬–೩೭ ರಿಂದೀಚೆಗೆ ವಿಜ್ಞಾನ ಶಾಸ್ತ್ರವನ್ನು ಕೂಡ ಕನ್ನಡದಲ್ಲಿಯೇ ಹೇಳಿಕೊಡಲು ಏರ್ಪಾಡಾಯಿತು. ಹೀಗೆ ಕನ್ನಡವನ್ನು ಹೈಸ್ಕೂಲುಗಳಲ್ಲಿ ಶಿಕ್ಷಣ ಭಾಷೆಯನ್ನಾಗಿ ಮಾಡಿದ ಮೇಲೆ, ಇದು ಬಹಳ ಯಶಸ್ವಿಯಾಗಿ ನಡೆಯುತ್ತಿದೆಯೆಂದು ಸರ್ಕಾರದವರಿಗೆ ಇಲಾಖೆಯವರು ವರದಿ ಮಾಡಿರುವುದು ಸರ್ಕಾರದವರು ಹೊರಡಿಸಿರುವ ಹುಕುಮುಗಳಿಂದಲೇ ವ್ಯಕ್ತವಾಗಿದೆ. ಅಂತು ಹೈಸ್ಕೂಲಿನಲ್ಲಿ ಕನ್ನಡದ ಮೂಲಕ ಶಿಕ್ಷಣ ಕೊಡುವುದು ಯಶಸ್ವಿಯಾಗಿರುವುದೆಂಬುದು ವ್ಯಕ್ತವಾದಂತಾಯಿತು. ಕನ್ನಡದಲ್ಲಿ ಶಿಕ್ಷಣ ಕೊಟ್ಟರೆ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಚೆನ್ನಾಗಿ ತೇರ್ಗಡೆ ಹೊಂದುತ್ತಾರೆಂದು ಉಪಾಧ್ಯಾಯರುಗಳು ಕೂಡ ಅಭಿಪ್ರಾಯಪಟ್ಟಿದ್ದಾರೆ. ಈಗ ನಾವು ಕೇಳುತ್ತಿರುವುದು ಇದೇ ಮಾರ್ಗವನ್ನನುಸರಿಸಿ ಇನ್ನೊಂದು ಹೆಜ್ಜೆ ಮುಂದಕ್ಕೆ ಹೋಗಬೇಕೆಂದು. ವರ್ಷೇ ವರ್ಷೇ ೧,೦೦೦–೧,೫ ಮಂದಿ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಇಂಟರ್‌ಮೀಡಿಯಟ್ ತರಗತಿಗಳಿಗೆ ಹೋಗುತ್ತಿರುವುದು ಎಲ್ಲರಿಗೂ ತಿಳಿದ ಅಂಶ ಆಗಿದೆ. ಅವರ ಪೈಕಿ ಬಹಳಮಂದಿ ಕನ್ನಡದಲ್ಲಿಯೇ ಹೆಚ್ಚು ಪರಿಶ್ರಮವುಳ್ಳವರಾಗಿರುತ್ತಾರೆ. ಅವರಿಗೆ ಎಸ್.ಎಸ್.ಎಲ್.ಸಿ. ಯಲ್ಲಿ ಕನ್ನಡವೇ ಶಿಕ್ಷಣ ಭಾಷೆಯಾಗಿ ಇಂಟರ್ ಮೀಡಿಯಟ್ ತರಗತಿಗೆ ಬಂದಾಗ ಇಂಗ್ಲಿಷಿನಲ್ಲಿ ಪಾಠವನ್ನು ಕಲಿತುಕೊಳ್ಳುವುದು ಕಷ್ಟವಾಗುತ್ತದೆ. ಇಂಗ್ಲಿಷಿನಲ್ಲಿ ಪಾಠ ಪ್ರವಚನಗಳನ್ನು ಕಲಿಯುವುದರಿಂದ ತಮ್ಮ ದೇಶಭಾಷೆಯಾದ ಕನ್ನಡಕ್ಕೆ ಚ್ಯುತಿ ಬರುತ್ತದೆಂದು ಯಾರು ಹೇಳುತ್ತಾರೆಯೋ ಅವರಿಗಾಗಿಯೇ ಅಲ್ಲವೇ ಸರ್ಕಾರದವರು ಮೈಸೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿರುವುದು? ಅಂಥಾದ್ದರಲ್ಲಿ ಈಗ ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡದಲ್ಲಿ ಪಾಠ ಪ್ರವಚನಗಳನ್ನು ಮಾಡಲು ತಕ್ಕ ಅನುಕೂಲವನ್ನು ಮಾಡಿಕೊಡದೆ ಹೋದರೆ

ಅದನ್ನು ತಾವು ಸ್ಥಾಪಿಸಿರುವ ಧ್ಯೇಯವು ನೆರವೇರಿದಂತಾಗುವುದಿಲ್ಲ. ಮೈಸೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದ ಕಾಲದಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರು "ವಿದ್ಯಾಭ್ಯಾಸಕ್ಕೆ ಉತ್ತೇಜನ ಕೊಡುವುದು, ಪ್ರೌಢವಿದ್ಯಾಭ್ಯಾಸವನ್ನು ಅಭಿವೃದ್ಧಿ ಪಡಿಸುವುದು, ಸಂಸ್ಕೃತಿಯ ಒಂದು ಕೇಂದ್ರವನ್ನಾಗಿ ಮಾಡಬೇಕೆಂಬುದು, ಸಂಸ್ಥಾನದ ಮೂಲೆ ಮೂಲೆಗಳಲ್ಲೂ ಅಜ್ಞಾನವೆಂಬ ಕತ್ತಲನ್ನು ಹೋಗಲಾಡಿಸುವಂಥ ಒಂದು ಬೆಳುದೀವಿಗೆಯನ್ನು ಏರ್ಪಡಿಸುವುದು ಇವುಗಳೇ ಸಾಮಾನ್ಯ ಉದ್ದೇಶಗಳೆಂದು ಸ್ಥೂಲವಾಗಿ ಹೇಳಬಹುದು" ಎಂದು ಹೇಳಿ ಆ ಮೂಲಕ ತಮ್ಮ ಧ್ಯೇಯವನ್ನು ಸೂಚಿಸಿದ್ದಾರೆ. ನಮ್ಮನ್ನಾಳಿದ ಮಹಾಸ್ವಾಮಿಯವರು, ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯ ಪ್ರಾರಂಭೋತ್ಸವ ಕಾಲದಲ್ಲಿ ಮಾಡಿದ ಭಾಷಣದಲ್ಲಿಯೂ ಇದೇ ಅಂಶವನ್ನೇ ವ್ಯಕ್ತಪಡಿಸಿದ್ದಾರೆ.

ಮಹಾಸ್ವಾಮಿಯವರು ಆಗ ಅಪ್ಪಣೆಕೊಡಿಸಿದುದೇನೆಂದರೆ—"ವಿಶ್ವವಿದ್ಯಾನಿಲಯದ ಯೋಜನೆಯಲ್ಲಿ ಕನ್ನಡ ಸಾಹಿತ್ಯಕ್ಕೆ ವಿಶೇಷ ರೀತಿಯಲ್ಲಿ ಉತ್ತೇಜನವು ದೊರೆಯುವಂತೆ ಏರ್ಪಾಟು ಮಾಡಿರುವುದಕ್ಕಾಗಿ ನಮಗೆ ಸಹಜವಾದ ಆಸಕ್ತಿಯನ್ನುಂಟುಮಾಡಿದೆ; ಈಗಿನ ಕಾಲದಲ್ಲಿ ಕಾಲೇಜುಗಳಲ್ಲಿಯೂ ಮತ್ತು ಸ್ಕೂಲುಗಳಲ್ಲಿಯೂ ದೇಶಭಾಷೆಗಳ ವ್ಯಾಸಂಗವು ಉಪೇಕ್ಷೆಮಾಡಲ್ಪಡುತ್ತಿರುವುದು ನಮ್ಮಗಳೆಲ್ಲರಿಗೂ ಗೊತ್ತೇ ಇದೆ. ಮೈಸೂರಿನಲ್ಲಿ ಬಳಕೆಯಲ್ಲಿರುವ ಕನ್ನಡ ಭಾಷೆಯನ್ನೇ ಅಲ್ಲದೆ ದಕ್ಷಿಣ ಭಾರತದ ದೇಶಭಾಷೆಗಳಾಗಿದ್ದು ಮೈಸೂರಿನಲ್ಲಿ ಬಳಕೆಯಲ್ಲಿರುವಂಥ ಆ ಭಾಷೆಗಳನ್ನೂ ಪೂರ್ಣವಾಗಿಯೂ ಮತ್ತು ಏಕಮುಖವಾಗಿಯೂ ಶಿಕ್ಷಣ ಮಾಡಲು ವಿಶ್ವವಿದ್ಯಾನಿಲಯದ ಯೋಜನೆಯಲ್ಲಿ ಅವಕಾಶವನ್ನುಂಟುಮಾಡಿರುವುದು ನಮಗೆ ತುಂಬಾ ಸಂತೋಷವನ್ನುಂಟುಮಾಡಿದೆ.

ಕ್ರಮವಾಗಿ ಗೊತ್ತುಮಾಡಲಾಗಿರುವ ಪರೀಕ್ಷೆಗಳಲ್ಲಿ ಭಾಗವಹಿಸುವುದಕ್ಕೂ ಮತ್ತು ಶಿಕ್ಷಣವನ್ನು ಪಡೆಯುವುದಕ್ಕೂ ಕಾರಣಾಂತರಗಳಿಂದ ಅನುಕೂಲವಿಲ್ಲದೆ ಇದ್ದಂಥ ಪ್ರಜಾ ಸಮುದಾಯಕ್ಕೆ ಸೇರಿದ ಒಂದು ಭಾಗ ಜನಗಳ ಜ್ಞಾನ ಪ್ರಸಾರಣೆಯನ್ನು ನಡೆಯಿಸುವುದರಲ್ಲಿಯೂ ನಮ್ಮ ವಿಶ್ವವಿದ್ಯಾನಿಲಯದವರು ನಿರತರಾಗುವರು. ಈ ಉದ್ದೇಶ ಸಾಧನೆಗಾಗಿಯೆ ಯೋಜನೆಯಲ್ಲಿ ಪುಸ್ತಕಗಳನ್ನು ಪ್ರಕಟನೆ ಮಾಡುವ ಮತ್ತು ಅದನ್ನು ವಿಸ್ತಾರಮಾಡುವ ಇಲಾಖೆಗಳು ಸೇರಿರುತ್ತವೆ. ವಿಶ್ವವಿದ್ಯಾನಿಲಯದವರು ನಮ್ಮ ದೇಶದಲ್ಲಿ ಜೀವನಕ್ಕೆ ಆವಶ್ಯಕವಾದ ಸೌಕರ್ಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಜಾಗ್ರತೆಯಾಗಿ ಇದಕ್ಕೆ ಸಂಬಂಧಪಟ್ಟ ಕಾರ್ಯಾಚರಣೆಗಳನ್ನು ಅಭಿವೃದ್ಧಿಪಡಿಸುವರೆಂದು ನಮಗೆ ನಂಬಿಗೆ ಇದೆ."

ಈ ವಿಶ್ವವಿದ್ಯಾನಿಲಯವನ್ನು ಸ್ಥಾಪನೆ ಮಾಡಿದಾಗ, ಮಹಾಸ್ವಾಮಿಯವ ಕೇವಲ ನೂರಾರು ವಿದ್ಯಾರ್ಥಿಗಳಿಗೆ ಮಾತ್ರ ಇದರಿಂದ ಉಪಯೋಗವಾಗಬೇಕೆಂ ಉದ್ದೇಶವನ್ನು ಇಟ್ಟುಕೊಂಡಿರಲಿಲ್ಲ. ಸಂಸ್ಥಾನದ ನಾನಾ ಕಡೆಗಳಿಂದ ಬೇರೆ ಬೇ ಗ್ರಾಮಗಳಿಂದ ಎಲ್ಲಾ ವಿದ್ಯಾರ್ಥಿಗಳು ತಮ್ಮ ತಮ್ಮ ಗ್ರಾಮಗಳಿಗೆ ಹೋ ಜ್ಞಾನವನ್ನು ಹರಡಲು ಅವಕಾಶವಾಗಲೆಂಬ ಸದುದ್ದೇಶದಿಂದ ಈ ರೀತಿ ಮಾಡಿದ ಇದರ ವಿಚಾರವಾಗಿ ನಮ್ಮ ವಿಶ್ವವಿದ್ಯಾನಿಲಯದಲ್ಲಿ ಹೇಳಿಕೊಡುವ ಜ್ಞಾನ ಸಂಸ್ಥಾನದ ಎಲ್ಲ ಮೂಲೆಗಳಲ್ಲೂ ಹರಡಬೇಕೆಂಬುದು ಆಳಿದ ಮಹಾಸ್ವಾಮಿಯವ ತೀವ್ರಾಭಿಲಾಷೆಯಾಗಿದ್ದಿತು. ಆದರೆ ನಮ್ಮ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗ ತಾವು ಪಡೆದ ಜ್ಞಾನವನ್ನು ನಮ್ಮ ಹಳ್ಳಿಗಳಲ್ಲಿ ಕನ್ನಡದಲ್ಲಿ ಹರಡಲು ಶಕ್ತರಾ ಲಿಲ್ಲವಲ್ಲಾ ಎಂಬುದು ವಿಷಾದಪಡಬೇಕಾದ ಸಂಗತಿ. ಪರಕೀಯ ಭಾಷೆಯಲ್ಲಿ ಅವ ವಿದ್ಯೆಯನ್ನು ಕಲಿತುದುದರಿಂದ ಅವರು ನಮ್ಮ ಕನ್ನಡ ಭಾಷೆಯಲ್ಲಿ ಹಳ್ಳಿಯವ ತಿಳಿಯಪಡಿಸಲು ಸಾಧ್ಯವಿಲ್ಲದೆ ಹೋಯಿತು. ಆದಕಾರಣದಿಂದಲೇ ನಾವೀಗ ವಿ ವಿದ್ಯಾನಿಲಯದಲ್ಲಿಯೂ ಕನ್ನಡವನ್ನೇ ಶಿಕ್ಷಣ ಭಾಷೆಯನ್ನಾಗಿ ಏರ್ಪಡಿಸಬೇಕೆಂ ಕೇಳಿಕೊಳ್ಳುತ್ತಿರುವುದು.

ಈ ಬಗೆಯ ಭಾವನೆಯು ನಮ್ಮ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮಾತ್ರವ ಮೂಡಿಲ್ಲ. ಇಂಡಿಯಾ ದೇಶದ ಇತರ ವಿಶ್ವವಿದ್ಯಾನಿಲಯಗಳಲ್ಲಿಯೂ ಸಹ ಈ ಬಗೆ ಭಾವನೆಯು ಮೂಡಿದೆ. ಈ ಸಂದರ್ಭದಲ್ಲಿ ೧೯೪೨ನೆಯ ಇಸವಿ ಮೇ ೩ ತಾರೀಖಿನ "ಹಿಂದು" ಪತ್ರಿಕೆಯಲ್ಲಿ ಶ್ರೀಮಾನ್ ನಾರಾಯಣ ಅಗರ್‌ವಾ ಎಂಬವರು "ಶಿಕ್ಷಣ ಭಾಷೆ ಮತ್ತು ಭಾರತದ ವಿಶ್ವವಿದ್ಯಾನಿಲಯಗಳ ಪರಿಸ್ಥಿತಿ ಎಂಬ ಶಿರೋನಾಮೆಯಲ್ಲಿ ಒಂದು ಲೇಖನವನ್ನು ಬರೆದಿದ್ದಾರೆ. ಆ ಲೇಖನದ ಅವರು ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿ ಪಾಠಗಳನ್ನು ಆಯಾ ದೇಶಭಾಷೆಗಳ ಹೇಳಿಕೊಡುವುದರಿಂದ ಅನುಕೂಲವೇನಿದೆಯೆಂಬುದನ್ನು ತಿಳಿಸಿದ್ದಾರೆ. ಕಾ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಇಂಟರ್‌ಮೀಡಿಯಟ್ ಪರೀಕ್ಷೆಯ ವರೆಗೂ ಐಚ್ಛಿ ಪಾಠಗಳ ಪ್ರಶ್ನೆಪತ್ರಿಕೆಗಳಿಗೆ ಉತ್ತರವನ್ನು ಹಿಂದಿಯಲ್ಲಿಯೇ ಬರೆಯಬಹುದೆಂ ಅಷ್ಟೇ ಅಲ್ಲದೆ, ಉಪಾಧ್ಯಾಯರುಗಳು ಇಂಗ್ಲಿಷಿನಲ್ಲಿಯೇ ಪಾಠಗಳನ್ನು ಹೇಳಿಕೊ ಬೇಕೆಂಬ ನಿರ್ಬಂಧವೇನೂ ಇಲ್ಲ. ಅವರು ಇಷ್ಟಪಟ್ಟರೆ ಹಿಂದಿಯಲ್ಲಿಯೇ ಪಾ ಹೇಳಿಕೊಡಬಹುದು. ಅದೇ ರೀತಿಯಲ್ಲಿ ಲಕ್ನೋ ವಿಶ್ವವಿದ್ಯಾನಿಲಯದ ಅಕಡೆಮಿ ಕೌನ್ಸಿಲಿನವರೂ, ಅಲ್ಲಿನ ಭಾಷೆಯಾದ ಹಿಂದೂಸ್ಥಾನಿಯಲ್ಲಿಯೇ ಪಾಠಗಳ ಹೇಳಿಕೊಡುವುದೇ ಅಲ್ಲದೆ ಪರೀಕ್ಷೆಗಳಲ್ಲಿಯೂ ಹಿಂದೂಸ್ಥಾನಿಯಲ್ಲಿಯೇ ಬರ

ಬೇಕೆಂದು ಶಿಫಾರ್ಸು ಕಳುಹಿಸಿದ್ದಾರೆ. ಹೀಗೆಯೇ ನಾಗಪುರದ ವಿಶ್ವವಿದ್ಯಾನಿಲಯದವರೂ, ಇದೇ ತತ್ವವನ್ನೊಪ್ಪಿಕೊಂಡಿದ್ದಾರೆ. ಅಲ್ಲದೆ ದೇಶಭಾಷೆಯಲ್ಲಿ ಪಾರಿಭಾಷಿಕ ಶಬ್ದಗಳನ್ನು ಸೃಷ್ಟಿಸುವ ವರೆಗೆ ಸಂಸ್ಕೃತ ಮತ್ತು ಇಂಗ್ಲಿಷ್ ಶಬ್ದಗಳನ್ನೇ ಉಪಯೋಗಿಸಿಕೊಳ್ಳುತ್ತಿರಬೇಕೆಂದೂ ಸಹ ಅವರು ಸಲಹೆಮಾಡಿದ್ದಾರೆ. ಅಣ್ಣಾಮಲೆ ವಿಶ್ವವಿದ್ಯಾನಿಲಯದಲ್ಲಿ ತಮಿಳಿನಲ್ಲಿ ಪಠ್ಯಪುಸ್ತಕಗಳನ್ನು ಬರೆಯಿಸುವ ಏರ್ಪಾಡು ಮಾಡಿದ್ದಾರೆ. ಅಲ್ಲಿ ತಮಿಳನ್ನು ಇನ್ನೂ ಶಿಕ್ಷಣಭಾಷೆಯನ್ನಾಗಿ ಮಾಡಿಲ್ಲವಾದರೂ ಇಂಟರ್‌ಮೀಡಿಯಟ್ ತರಗತಿಗಳಿಗೆ ಐಚ್ಛಿಕ ವಿಷಯಗಳ ಪಠ್ಯಪುಸ್ತಕಗಳು ಸಿದ್ಧವಾಗುವಂತೆ ಆಜ್ಞೆಯಾಗಿದೆ. ಈಗ ತರ್ಕ, ಅರ್ಥಶಾಸ್ತ್ರ, ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರ—ಇವುಗಳಲ್ಲಿ ಪಠ್ಯಪುಸ್ತಕಗಳು ಸಿದ್ಧವಾಗಿ ಪ್ರಕಟವಾಗಿವೆ. ಗಣಿತಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಚರಿತ್ರೆ ಮುಂತಾದುವುಗಳ ಪಠ್ಯಪುಸ್ತಕಗಳು ಪ್ರಕಟವಾಗುವುದರಲ್ಲಿವೆ. ಅವು ಪ್ರಕಟವಾದ ಬಳಿಕ ಆ ವಿಶ್ವವಿದ್ಯಾನಿಲಯದಲ್ಲಿ ತಮಿಳನ್ನು ಶಿಕ್ಷಣಭಾಷೆಯನ್ನಾಗಿ ಗೊತ್ತುಮಾಡುವ ವಿಚಾರವು ಪರ್ಯಾಲೋಚನೆಗೆ ಬರುತ್ತದೆ. ತಿರುವಾಂಕೂರು ವಿಶ್ವವಿದ್ಯಾನಿಲಯವಾದರೂ ಸಹ ತಮ್ಮ ಭಾಷೆಯಲ್ಲಿ ತಕ್ಕ ಪಠ್ಯಪುಸ್ತಕಗಳನ್ನು ತಯಾರುಮಾಡುವ ಕೆಲಸದಲ್ಲಿ ತೊಡಗಿದ್ದಾರೆ. ಈ ರೀತಿಯಲ್ಲಿ ನಮ್ಮ ಇಂಡಿಯಾದೇಶದ ಎಲ್ಲಾ ಪ್ರಾಮುಖ್ಯ ವಿಶ್ವವಿದ್ಯಾನಿಲಯಗಳಲ್ಲಿಯೂ ಆಯಾ ದೇಶಭಾಷೆಗಳಲ್ಲೇ ಪಾಠಪ್ರವಚನಗಳನ್ನು ನಡೆಯಿಸಬೇಕೆಂದು ಎಲ್ಲರೂ ಮುಂದುವರಿದಿದ್ದಾರೆ. ಈ ವಿಷಯದಲ್ಲಿ ವಿಶ್ವವಿದ್ಯಾನಿಲಯದವರೇ ಅಲ್ಲದೆ ನಿಜಾಂ ಸರ್ಕಾರದವರೂ ಸಹ ಶಿಕ್ಷಣಭಾಷೆಯನ್ನು ಉರ್ದುವನ್ನಾಗಿ ಮಾಡಿ, ಅದಕ್ಕಾಗಿ ಒಂದು ಭಾಷಾಂತರ ಶಾಖೆಯನ್ನು ಏರ್ಪಡಿಸಿ, ಅವಶ್ಯಕವಾದ ಪಠ್ಯಪುಸ್ತಕಗಳನ್ನು ಉರ್ದುಭಾಷೆಗೆ ಭಾಷಾಂತರಮಾಡುವುದಕ್ಕೂ ಮತ್ತು ಅವಶ್ಯಕವಾದ ಪದಗಳನ್ನು ಉರ್ದುವಿನಲ್ಲಿ ಸಂಗ್ರಹಿಸುವುದಕ್ಕೂ ತಕ್ಕ ಏರ್ಪಾಡುಗಳನ್ನು ಮಾಡಿರುತ್ತಾರೆ. ಅದೇ ರೀತಿಯಲ್ಲಿ ನಮ್ಮ ದೇಶದಲ್ಲಿಯೂ ಏರ್ಪಾಡು ಮಾಡಬೇಕು. ನಮ್ಮ ಸರ್ಕಾರದವರೂ ಅದೇ ನೀತಿಯನ್ನು ಅನುಸರಿಸುವುದು ಒಳ್ಳೆಯದು. ಹಾಗಿಲ್ಲದೆ ಈ ವಿಚಾರವನ್ನು ನಮ್ಮ ವಿಶ್ವವಿದ್ಯಾನಿಲಯದ ಕೌನ್ಸಿಲಿನ ಪರಿಶೀಲನೆಗೆ ಬಿಟ್ಟುಬಿಟ್ಟರೆ ಅದರಿಂದ ಏನೂ ಫಲವಾದಂತಾಗುವುದಿಲ್ಲ. ಈಗ ನಮ್ಮ ವಿಶ್ವವಿದ್ಯಾನಿಲಯದ ಸೆನೆಟ್‌ನಲ್ಲಿ ಎಪ್ಪತ್ತೈದು ಜನ ಸದಸ್ಯರಿದ್ದಾರೆ. ಅವರ ಪೈಕಿ ಚುನಾಯಿತ ಸದಸ್ಯರು ೧೮ ಮಂದಿ ಮಾತ್ರ ಎಂದಮೇಲೆ ಸಾರ್ವಜನಿಕರ ಅಭಿಪ್ರಾಯಕ್ಕೆ ಅಷ್ಟಾಗಿ ಅಲ್ಲಿ ಮನ್ನಣೆಯು ದೊರೆಯಲಾರದು. ಆದುದರಿಂದ ಸರ್ಕಾರದವರು ನಮ್ಮ ದೇಶಭಾಷೆ ಮತ್ತು ರಾಜಭಾಷೆಯಾದ ಕನ್ನಡಭಾಷೆಯನ್ನೇ ಶಿಕ್ಷಣಭಾಷೆಯನ್ನಾಗಿ ಏರ್ಪಡಿಸು

ವಂತೆ ವಿಶ್ವವಿದ್ಯಾನಿಲಯದವರಿಗೆ ಶಿಫಾರಸು ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇಷ್ಟು ಹೇಳಿ, ಈ ನಿರ್ಣಯಕ್ಕೆ ನನ್ನ ಸಂಪೂರ್ಣ ಬೆಂಬಲವನ್ನು ಕೊಡುತ್ತಾ ಇದರಲ್ಲಿ ಅಡಗಿರುವ ತತ್ವಗಳನ್ನು ಸಭೆಯ ಮಾನ್ಯ ಸದಸ್ಯರೆಲ್ಲರೂ ಒಪ್ಪಿಕೊಳ್ಳುತ್ತಾರೆಂದು ನಂಬಿದ್ದೇನೆ.

### ಶ್ರೀಮಾನ್ ಟಿ. ಎಸ್. ರಾಜಗೋಪಾಲ ಐಯ್ಯಂಗಾರ್ಯರು

ಸ್ವಾಮಿ, ಈ ನಿರ್ಣಯದ ವಿಚಾರಕ್ಕೆ ಸಂಬಂಧಪಟ್ಟಂತೆ ನನ್ನ ಹೆಸರಿನಲ್ಲಿ ಎರಡು ತಿದ್ದುಪಡಿಗಳಿವೆ. ಅದರಲ್ಲಿ ಮೊದಲನೆಯ ತಿದ್ದುಪಡಿಯನ್ನು ಈಗ ಸಭೆಯ ಮುಂದಿಡುತ್ತೇನೆ. ಆ ತಿದ್ದುಪಡಿ ಈ ರೀತಿಯಾಗಿದೆ:—

"ಈ ನಿರ್ಣಯದ ಮೂರನೆಯ ಪಂಕ್ತಿಯಲ್ಲಿ ಬರುವ 'ಇಂಟರ್‌ಮೀಡಿಯೆಟ್' ಎಂಬ ಪದವನ್ನು ತೆಗೆದುಬಿಡಬೇಕು."

ಈಗ ನಿರ್ಣಯದಲ್ಲಿ ಹೇಳಿರುವುದು, ಕನ್ನಡ ಭಾಷೆಯಲ್ಲಿ ಶಿಕ್ಷಣಕೊಡುವ ಪದ್ಧತಿಯನ್ನು ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ಮಾತ್ರವೇ ಏರ್ಪಡಿಸಬೇಕೆಂದಿದೆ. ನನ್ನ ಅಭಿಪ್ರಾಯದಲ್ಲಿ ತಾವು ಇನ್ನು ಒಂದು ಹೆಜ್ಜೆ ಮುಂದುವರಿದು ಎಲ್ಲಾ ಕಾಲೇಜುಗಳಲ್ಲಿಯೂ ಕನ್ನಡವನ್ನೇ ಶಿಕ್ಷಣಭಾಷೆಯನ್ನಾಗಿ ಏರ್ಪಡಿಸಬೇಕೆಂದು ಹೇಳುತ್ತೇನೆ. ನಮ್ಮ ದೇಶವನ್ನು ಬಿಟ್ಟರೆ, ಮಿಕ್ಕ ಎಲ್ಲ ದೇಶಗಳಲ್ಲಿಯೂ ಶಿಕ್ಷಣವು ಆಯಾ ದೇಶಭಾಷೆಯಲ್ಲಿ ನಡೆಯುತ್ತಿದೆ. ಅಲ್ಲದೆ ಕೋರ್ಟು ವ್ಯವಹಾರಗಳು ಕೂಡ ಆಯಾ ದೇಶಭಾಷೆಯಲ್ಲಿಯೇ ನಡೆಯುತ್ತವೆಯೇ ಹೊರತು ಅನ್ಯಭಾಷೆಯಲ್ಲಿ ನಡೆಯುತ್ತಿಲ್ಲ. ಆದರೆ ನಮ್ಮ ದೇಶದಲ್ಲಿ ಕಾರಣಾಂತರಗಳಿಂದ ಇಂಗ್ಲಿಷ್ ಭಾಷೆಯು ಶಿಕ್ಷಣಭಾಷೆಯಾಗಿ ಅದೇರೀತಿ ಇದುವರೆಗೂ ನಡೆದುಕೊಂಡು ಬಂದಿದೆ. ಹಿಂದೂಸ್ಥಾನದಲ್ಲಿ ರಾಷ್ಟ್ರಭಾಷೆ ಮತ್ತು ದೇಶಭಾಷೆಯು ಹಿಂದಿಯಾಗಬೇಕೆಂಬ ಚಳುವಳಿ ಇದ್ದು ಅಲ್ಲಿಯ ಶಾಲೆಗಳಲ್ಲಿ ಆ ಭಾಷೆಗೇ ಹೆಚ್ಚು ಪ್ರಾಧಾನ್ಯತೆ ಇದೆ. ನಮ್ಮ ಮೈಸೂರು ದೇಶದಲ್ಲಿ ಕನ್ನಡವು ದೇಶಭಾಷೆ, ಇಂಥಾದ್ದರಲ್ಲಿ ಕನ್ನಡಕ್ಕೆ ಹೆಚ್ಚಿನ ಪ್ರಾಧಾನ್ಯವನ್ನು ಕೊಡದೆ, ಅನ್ಯಭಾಷೆಯಾದ ಇಂಗ್ಲಿಷಿಗೆ ಪ್ರಾಧಾನ್ಯ ಕೊಡುವುದು ನ್ಯಾಯವಲ್ಲ. ಹಿಂದೆ ಹೈಸ್ಕೂಲುಗಳಲ್ಲಿ ಕನ್ನಡವನ್ನು ಶಿಕ್ಷಣಭಾಷೆಯನ್ನಾಗಿ ಏರ್ಪಡಿಸಬೇಕೆಂದು ಹೇಳಿದಾಗಲೂ ಅನೇಕ ಕಡೆಗಳಿಂದ ಅನೇಕ ಪ್ರತಿಭಟನೆ ಬಂದಿತು. ಆದರೂ ಕೂಡ ಅದನ್ನು ಜಯಪ್ರದವಾಗಿ ಜಾರಿಗೆ ತರಲಾಯಿತು. ಆದುದರಿಂದ ಕಾಲೇಜುಗಳಲ್ಲಿಯೂ ತಾವು ಕನ್ನಡವನ್ನೇ ಶಿಕ್ಷಣಭಾಷೆಯನ್ನಾಗಿ ಏರ್ಪಡಿಸಬೇಕು. ಕಾಲೇಜಿನ ಅಧಿಕಾರಿಗಳೇನೋ ಈಗಿರುವ ಇಂಗ್ಲಿಷ್ ಶಿಕ್ಷಣಭಾಷೆಯ ಪದ್ಧತಿಯು ತಪ್ಪಿದರೆ ತಮ್ಮ ಪ್ರತಿಭೆಯು ಕಡಮೆ

ಯಾಗಬಹುದೆಂದು ಇದು ಬೇಡವೆಂದು ಹೇಳಬಹುದು. ಆದರೆ ತಾವು ಈ ವಿಚಾರ ವನ್ನು ಪರಿಶೀಲಿಸುವಾಗ ಮುಖ್ಯವಾಗಿ ಈಗಿರುವ ಕಾಲವೆಂಥಾದ್ದೆಂಬುದನ್ನು ಗಮ ನಕ್ಕೆ ತೆಗೆದುಕೊಳ್ಳಬೇಕು. ಈಗ ಕನ್ನಡ ರಾಜ್ಯದ ಎಲ್ಲಾ ಭಾಗಗಳನ್ನೂ ಒಂದು ಗೂಡಿಸಿ ಕರ್ಣಾಟಕ ಪ್ರಾಂತವೊಂದನ್ನೇರ್ಪಡಿಸಬೇಕೆಂಬ ಯೋಜನೆಯು ನಡೆಯು ತ್ತಿದೆ. ಅಷ್ಟೇ ಅಲ್ಲದೆ ಕರ್ಣಾಟಕದ ವಿಶ್ವವಿದ್ಯಾನಿಲಯವೊಂದನ್ನು ಸ್ಥಾಪಿಸಬೇ ಕೆಂಬ ಚಳುವಳಿಯು ಕೂಡ ನಡೆಯುತ್ತಿದೆ. ಇದಕ್ಕೆ ಇಡೀ ಮೈಸೂರು ದೇಶದವರು ಮತ್ತು ಇಡೀ ಕರ್ಣಾಟಕ ದೇಶದವರು ತಮ್ಮ ಪ್ರೋತ್ಸಾಹವನ್ನು ಕೊಡಬೇಕು. ಇಂಥಾದ್ದರಲ್ಲಿ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡವನ್ನು ಶಿಕ್ಷಣಭಾಷೆಯನ್ನಾಗಿ ಏರ್ಪಡಿಸಿದರೆ ಸರ್ಕಾರದವರು ಇದಕ್ಕೆ ಎಷ್ಟೋ ಪ್ರೋತ್ಸಾಹ ಕೊಟ್ಟಂತಾ ಗುತ್ತದೆ.

ಅಲ್ಲದೆ ಇನ್ನೊಂದು ವಿಷಯ. ನಮ್ಮ ವಿಶ್ವವಿದ್ಯಾನಿಲಯವನ್ನು ಸ್ಥಾಪನೆ ಮಾಡಿರುವುದರ ಉದ್ದೇಶವೇನೆಂಬುದನ್ನು ಶ್ರೀಮನ್ಮಹಾರಾಜರವರು ತಮ್ಮ ಭಾಷಣ ದಲ್ಲಿ ಪ್ರುತಪಡಿಸಿರುವುದನ್ನು ತಮ್ಮ ಗಮನಕ್ಕೆ ತರುತ್ತೇನೆ. 'ಮೈಸೂರು ವಿಶ್ವ ವಿದ್ಯಾನಿಲಯದ ಮೊದಲನೆಯ ಚಾನ್ಸಲರಾದ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯ ಗಳನ್ನು ಅಪ್ಪಣೆಮಾಡಿದರು. ಅವುಗಳಲ್ಲಿ ವಿಶೇಷವಾದುವು ಇವೆರಡು :—ಉತ್ತಮ ಶೈಲಿಯಲ್ಲಿ ಬರೆದ ಕನ್ನಡ ಪುಸ್ತಕಗಳ ಪ್ರಕಟಣೆ, ಹಾಗು ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರ ದಿಂದ ಕ್ರಮಬದ್ಧವಾದ ಶಿಕ್ಷಣ ವಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಲ್ಲಿ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು. ಅಲ್ಲದೆ ಮೈಸೂರು, ಬೆಂಗಳೂರು—ಈ ಎರಡು ದೊಡ್ಡ ಪಟ್ಟಣಗಳಲ್ಲಿ ದೊರೆಯುವ ವಿದ್ಯಾಭ್ಯಾಸದ ಅನುಕೂಲಗಳನ್ನು ಪಡೆದಿಲ್ಲದ ಸಂಸ್ಥಾನದ ದೂರ ಪ್ರದೇಶಗಳಲ್ಲಿ ವಾಸಿಸುವ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು. ಈಗ ರೂಢಿಯಲ್ಲಿರುವ ಪ್ರಕಾರ ಶಿಕ್ಷಣ ಭಾಷೆಯು ಇಂಗ್ಲಿಷಿನಲ್ಲಿಯೇ ಇದ್ದರೆ, ವಿದ್ಯಾರ್ಥಿಗಳು ಎಲ್ಲವನ್ನು ಇಂಗ್ಲಿಷಿನಲ್ಲಿಯೇ ಯೋಚಿಸುವ ರೂಢಿಯುಂಟಾಗಿ ಕನ್ನಡದಲ್ಲಿ ಮಾತನಾಡುವುದು ಅವರಿಗೆ ಕಷ್ಟ ವಾಗಿರುತ್ತದೆ. ಹೀಗಿರುವಲ್ಲಿ ಅವರು ಹಳ್ಳಿಗಳಿಗೆ ಹೋಗಿ ತಮ್ಮಲ್ಲಿರುವ ಜ್ಞಾನವನ್ನು ಪ್ರಚಾರಮಾಡುವ ಬಗೆ ಹೇಗೆ? ಇದು ಎಷ್ಟು ಮಟ್ಟಿಗೆ ಸಾಧ್ಯವೆಂಬುದನ್ನು ತಾವು ಯೋಚನೆಮಾಡಬೇಕು.

ಎಲ್ಲಕ್ಕಿಂತಲೂ ಮಿಗಿಲಾಗಿ ನಮ್ಮ ಸಂಸ್ಥಾನವು ಕನ್ನಡ ರಾಜ್ಯ. ಮೈಸೂ ಸಂಸ್ಥಾನ ಮುಂಬಯಿ ಮತ್ತು ಮದರಾಸು ಪ್ರಾಂತಗಳಲ್ಲಿ ಕನ್ನಡ ಮಾತನಾಡು ಪ್ರದೇಶಗಳು—ಇವುಗಳನ್ನು ಸೇರಿಸಿ ಒಂದು ಕನ್ನಡ ಪ್ರಾಂತವನ್ನೇರ್ಪಡಿಸಿ ಕರ್ಣಾಟ ವಿಶ್ವವಿದ್ಯಾನಿಲಯವನ್ನು ಏರ್ಪಡಿಸಬೇಕೆಂಬ ಯೋಚನೆಯೂ ಜನರ ಮನಸ್ಸಿನಲ್ಲಿ ಆದುದರಿಂದ ಕಾಲೇಜುಗಳಲ್ಲಿ ತಾವು ಕನ್ನಡದಲ್ಲಿಯೇ ಬೋಧಿಸುವುದಕ್ಕೆ ಪ್ರಯ ಮಾಡಿದರೆ, ಹುಡುಗರೂ ಬೇಗ ಕಲಿತುಕೊಳ್ಳುತ್ತಾರೆ. ಅಷ್ಟೇ ಅಲ್ಲದೆ, ಅವರು ಗ್ರಾಮಾಂತರಗಳಿಗೆ ಹೋಗಿ ಅಲ್ಲಿ ಜ್ಞಾನಪ್ರಚಾರ ಮಾಡುವುದಕ್ಕೂ ಸಾ ವಾಗುತ್ತದೆ. ಇಷ್ಟು ಹೇಳಿ ನನ್ನ ತಿದ್ದುಪಡಿಯೊಡನೆ ಈ ನಿರ್ಣಯವನ್ನು ಅ ಮೋದಿಸುತ್ತೇನೆ.

### ಶ್ರೀಮಾನ್ ಟಿ. ತಿಮ್ಮಾಜಯ್ಯನವರು

ಸ್ವಾಮಿ, ನಾನು ಈ ತಿದ್ದುಪಡಿಯನ್ನು ಒಪ್ಪಿಕೊಳ್ಳುತ್ತೇನೆ.

ಶ್ರೀಮಾನ್ ಟಿ. ಎಸ್. ರಾಜಗೋಪಾಲ ಐಯಂಗಾರ್ಯರು, ಅವರು ಸೂ ಸಿದ್ದ ಎರಡನೆಯ ತಿದ್ದುಪಡಿಯನ್ನು ಎಂದರೆ "ಸರ್ಕಾರದ ವಿದ್ಯಾಭ್ಯಾಸದ ಇಲಾ ಯವರು" ಎಂಬ ಪದಗಳಿಂದ ಹಿಡಿದು "ಅದೇ ರೀತಿಯಲ್ಲಿ" ಎಂಬ ಪದಗಳ ಸೇರಿರುವಷ್ಟು ಭಾಗವನ್ನು ನಿರ್ಣಯದಿಂದ ತೆಗೆದುಹಾಕಬೇಕೆಂಬ ತಿದ್ದುಪಡಿಯನ್ನು ಸೂಚಿಸಲಿಲ್ಲ.

[ಅಷ್ಟು ಹೊತ್ತಿಗೆ ಅಪರಾಹ್ನ ಮೂರು ಘಂಟೆಯಾದುದರಿಂದ ಸದಸ್ಯ ಉಪಾಹಾರಕ್ಕಾಗಿ ಹೋಗಿದ್ದು ಪುನಃ ಅಪರಾಹ್ನ ೩-೩೦ ಘಂಟೆಗೆ ಸಭೆ ಸೇರಿದರು]

### ಶ್ರೀಮಾನ್ ಟಿ. ಎಸ್. ರಾಜಗೋಪಾಲ ಅಯಂಗಾರ್ಯರು

ನನ್ನ ಹೆಸರಿನಲ್ಲಿರುವ ಎರಡನೆಯ ತಿದ್ದುಪಡಿಯನ್ನು ನಾನು ವಾಪಸು ತೆಗೆ ಕೊಳ್ಳುತ್ತೇನೆ. ಈಗ ಹೈಸ್ಕೂಲುಗಳಲ್ಲಿ ಕನ್ನಡ ಬಾರದಿರುವವರ ಉಪಯೋಗಾ ವಾಗಿ ಇಂಗ್ಲಿಷು ಬೋಧಕ ಭಾಷೆಯಾಗಿರುವ ತರಗತಿಯನ್ನು ಹೇಗೆ ಏರ್ಪಡಿ ಲಾಗಿದೆಯೋ ಹಾಗೆಯೇ ಇಂಟರ್ ಮಿಡಿಯಟ್‌ಕಾಲೇಜಿನಲ್ಲಿಯೂ ಸಹ ಅ ತರಗತಿಯನ್ನು ಏರ್ಪಡಿಸುವ ಉದ್ದೇಶದಿಂದ ನಾನು ಈ ರೀತಿ ನನ್ನ ಎರಡನೆ ತಿದ್ದುಪಡಿಯನ್ನು ವಾಪಸು ತೆಗೆದುಕೊಂಡಿರುತ್ತೇನೆ. ಇದರಿಂದ ಮುಸಲ್ಮಾ ಸಹೋದರರೂ ಈ ನಿರ್ಣಯಕ್ಕೆ ತಮ್ಮ ಹೃತ್ಪೂರ್ವಕವಾದ ಬೆಂಬಲವನ್ನು ಕೊಡು ರೆಂದು ನಾನು ನಂಬಿದ್ದೇನೆ.'

## ಶ್ರೀಮಾನ್ ಮಿರ್ಜಾ ಅಜೀಜುಲ್ಲಾ ಬೇಗ್‌ರವರು

ಸ್ವಾಮಿ, ಇಂಟರ್‌ಮೀಡಿಯೆಟ್ ಕಾಲೇಜುಗಳಲ್ಲಿ ಕನ್ನಡವೇ ಶಿಕ್ಷಣಭಾಷೆಯಾಗಿರಬೇಕೆಂಬುದು ಈ ನಿರ್ಣಯದ ಮುಖ್ಯೋದ್ದೇಶವೆಂದು ಈ ನಿರ್ಣಯದ ಸೂಚಕರು ತಿಳಿಸಿದರು. ಈ ನಿರ್ಣಯಕ್ಕೆ ನನ್ನ ಮಿತ್ರರಾದ ಶ್ರೀಮಾನ್ ಟಿ. ಎಸ್. ರಾಜಗೋಪಾಲ ಐಯ್ಯಂಗಾರ್ಯರು ಒಂದು ತಿದ್ದುಪಡಿಯನ್ನು ಸೂಚಿಸಿ ಎಲ್ಲಾ ಕಾಲೇಜುಗಳಲ್ಲಿಯೂ ಕನ್ನಡವನ್ನೇ ಶಿಕ್ಷಣಭಾಷೆಯನ್ನಾಗಿ ಏರ್ಪಡಿಸಬೇಕೆಂದು ತಿಳಿಸಿದರು. ಅಲ್ಲದೆ ಅವರು ತಮ್ಮ ಎರಡನೆಯ ತಿದ್ದುಪಡಿಯನ್ನು ವಾಪಸು ತೆಗೆದುಕೊಂಡು ಮುಸಲ್ಮಾನ ಸದಸ್ಯರೂ ಈ ನಿರ್ಣಯಕ್ಕೆ ಬೆಂಬಲ ಕೊಡಬೇಕೆಂದು ಕೇಳಿದರು. ಈ ನಿರ್ಣಯದ ವಿಚಾರವಾಗಿ ಮಾತನಾಡುವುದಕ್ಕೆ ಮೊದಲು ನಾನು ಒಂದು ಅಂಶವನ್ನು ಸ್ಪಷ್ಟಪಡಿಸಬೇಕಾಗಿದೆ. ಕನ್ನಡದ ವಿಷಯದಲ್ಲಿ ಮೈಸೂರು ದೇಶದ ಯಾವನೊಬ್ಬನಿಗೇ ಆಗಲಿ, ಯಾವ ಮತದವನಿಗೇ ಆಗಲಿ ಸಂಪೂರ್ಣ ಗೌರವವಿದ್ದೇ ಇರಬೇಕು. ಅವನಿಗೆ ಆ ರೀತಿಯ ಗೌರವವಿಲ್ಲದಿದ್ದರೆ ಅವನು ಎಂದಿಗೂ ನಿಜವಾದ ದೇಶಾಭಿಮಾನಿಯೆಂದೆನಿಸಿಕೊಳ್ಳಲಾರನು. ನನಗೆ ಕನ್ನಡದ ವಿಚಾರದಲ್ಲಿ ಬಹಳಮಟ್ಟಿನ ಅಭಿಮಾನವಿದೆ. ದೇಶಾಭಿಮಾನಿಯೆನಿಸಿಕೊಂಡಿರುವ ಪ್ರತಿಯೊಬ್ಬನಿಗೂ ತನ್ನ ದೇಶಭಾಷೆಯ ಮೇಲೆ ಪೂರ್ಣ ಅಭಿಮಾನವಿರಬೇಕಾದುದು ಸಹಜವಾದುದು ಮತ್ತು ನ್ಯಾಯವಾದುದು. ನಮ್ಮ ಮೈಸೂರು ನಾಡು ಕನ್ನಡ ನಾಡು. ನಮ್ಮನ್ನಾಳುವ ಮಹಾಸ್ವಾಮಿಯವರ ಮಾತೃಭಾಷೆಯು ಕನ್ನಡ. ನಾವು ಈ ಕನ್ನಡ ಭಾಷೆಯನ್ನು ನಮ್ಮ ಶ್ರೇಯಸ್ಸಿಗಾಗಿ ಕಲಿಯಬೇಕು. ನಮ್ಮ ಮುಸಲ್ಮಾನ ಪಕ್ಷದವರು ಇಂಗ್ಲಿಷ್ ಭಾಷೆಯಲ್ಲಿ ಚೆನ್ನಾಗಿ ಮಾತನಾಡುವವರಾಗಿದ್ದರೂ ಮತ್ತು ವಿಶ್ವವಿದ್ಯಾನಿಲಯಗಳ ಪದವೀಧರರಾಗಿದ್ದರೂ ಸಹ ಅವರು ಈ ಸಭೆಯಲ್ಲಿ ಎಷ್ಟೋ ಉತ್ಸಾಹದಿಂದ ಕನ್ನಡದಲ್ಲಿಯೇ ಮಾತನಾಡುತ್ತಿರುವುದು ತಮ್ಮ ಗಮನಕ್ಕೆ ಬಂದಿದೆ. ಅವರ ಈ ವರ್ತನೆಯು ಕನ್ನಡಭಾಷೆಯ ಮೇಲೆ ಅವರಿಗಿರುವ ಅಭಿಮಾನವನ್ನು ತೋರಿಸುತ್ತದೆ. ಈ ಸಂದರ್ಭದಲ್ಲಿ ನನ್ನ ಸ್ವಂತ ವಿಚಾರವೊಂದನ್ನು ತಿಳಿಸಲು ಇಚ್ಛಿಸುತ್ತೇನೆ. ಕೆಲವು ದಿವಸಗಳ ಹಿಂದೆ ಎ.ಆರ್.ಪಿ. ಸಂಬಂಧವಾಗಿ ಏರ್ಪಟ್ಟ ಸಾರ್ವಜನಿಕ ಸಭೆಯಲ್ಲಿ ನಮ್ಮ ನ್ಯಾಯಶಾಖೆಯ ಸಚಿವರು ಅಧ್ಯಕ್ಷತೆಯನ್ನು ವಹಿಸಿದಾಗ್ಗೆ ನಾನು ಕನ್ನಡದಲ್ಲಿಯೇ ಭಾಷಣಮಾಡಿದೆ. ಹೀಗೆ ಕನ್ನಡಕ್ಕೆ ಉತ್ತೇಜನವನ್ನು ಕೊಡುವುದು ನಮ್ಮ ಕರ್ತವ್ಯವೆಂದು ನಾನು ತಿಳಿದಿದ್ದೇನೆ. ಆದರೆ ನಾವು ಈಗ ನಮ್ಮ ಮುಂದಿರುವ ವಿಚಾರವನ್ನು ಒಂದು ತತ್ವದ ದೃಷ್ಟಿಯಿಂದ ಯೋಚನೆ ಮಾಡಬೇಕಾಗಿದೆ. ನಾವೆಲ್ಲರೂ ಶಾಸನಸಭೆಯ ಸದಸ್ಯರಾಗಿ ಇಲ್ಲಿಗೆ ಬಂದಿದ್ದೇವೆ.

ಆದುದರಿಂದ ನಾನು ಯಾವ ಕಾನೂನನ್ನು ಜಾರಿಗೆ ತಂದರೂ ಅದರಿಂದ ಮ
ಯಾರಿಗೂ ತೊಂದರೆಯಾಗಬಾರದು. ಸೂರ್ಯನ ಪ್ರಕಾಶವು ಹೇಗೆ ಎ
ಮೇಲೆಯೂ ಏಕಪ್ರಕಾರವಾಗಿ ಬೀಳುತ್ತದೆಯೋ ಹಾಗೆ ನಾವು ರಚಿಸ
ಕಾನೂನು ನಮ್ಮ ಶ್ರೀಮನ್ಮಹಾರಾಜರವರ ಆಶ್ರಯದಲ್ಲಿರುವವರೆಲ್ಲರಿಗೂ
ಪ್ರಕಾರವಾಗಿ ಅನ್ವಯಿಸುವಂತಿರಬೇಕು. ಈಗ ನಮ್ಮ ದೇಶದಲ್ಲಿ ಮುಸಲ್ಮಾ
ಬಾಂಧವರೆಲ್ಲರೂ ಸಂತೋಷವಾಗಿದ್ದಾರೆ. ಎಲ್ಲರೊಡನೆ ಅಣ್ಣತಮ್ಮಂದಿ
ಭಾವನೆಯನ್ನಿಟ್ಟುಕೊಂಡು ಮುಂದುವರಿಯುತ್ತಿದ್ದಾರೆ. ಹೀಗಿರುವಾಗ
ನಿರ್ಣಯದಲ್ಲಿ ಹೇಳಿರುವಂತೆ ಮಾಡಿದರೆ ತೊಂದರೆಯಾಗುತ್ತದೆ. ಹೀಗೆ ಹೇ
ಮಾತ್ರಕ್ಕೇ ನಾನು ಈ ನಿರ್ಣಯವನ್ನು ವಿರೋಧಿಸುತ್ತಿದ್ದೇನೆಂದು ಯಾ
ಭಾವಿಸಬಾರದು. ಈಗ ಎಸ್.ಎಸ್.ಎಲ್.ಸಿ. ವರೆಗೂ ಹೈಸ್ಕೂಲುಗಳಲ್ಲಿ ಕನ್ನಡ
ಶಿಕ್ಷಣ ಭಾಷೆಯಾಗಿರುವುದರಿಂದ, ನಮ್ಮ ಮುಸಲ್ಮಾನರ ಹುಡುಗರಿಗೆ ತೊಂ
ಯಾಗುತ್ತಿರುವುದು ಸರ್ಕಾರದವರ ಗಮನಕ್ಕೂ ಬಂದಿರಬಹುದು. ಶರಗತಿ
ಇಂಗ್ಲಿಷಿನ ಮೂಲಕ ಬೋಧಿಸುವ ಶಾಖೆಗಳಿಗೆ ಸೇರಲು ಬಂದವರನೇಕರಿಗೆ ಅವಕಾ
ದೊರೆಯಲಿಲ್ಲವೆಂದು ನಮಗೆ ತಿಳಿದುಬಂದಿದೆ. ಹೀಗೆ ಎಸ್.ಎಸ್.ಎಲ್.ಸಿ. ಯಲ್ಲಿ
ಈ ರೀತಿ ತೊಂದರೆಯುಂಟಾದ ಮೇಲೆ, ಮುಂದೆ ವಿಶ್ವವಿದ್ಯಾನಿಲಯದಲ್ಲಿ ಇನ್ನೆಷ್ಟು
ತೊಂದರೆಯೊದಗಬಹುದು! ಅಲ್ಲದೆ ಈಗ ಇಂಡಿಯಾ ದೇಶದಲ್ಲಿ ರಾಷ್ಟ್ರಭಾ
ಯಾವುದೆಂಬುದನ್ನು ನಾವು ವಿಚಾರಮಾಡಬೇಕಾಗಿದೆ. ಈ ವಿಚಾರದಲ್ಲಿ ಇಷ್ಟು
ವಿವಾದಗಳಾಗುತ್ತಿರುವುದು ಎಲ್ಲರಿಗೂ ತಿಳಿದ ವಿಚಾರವೇ ಆಗಿದೆ. ಹೈದರಾಬಾ
ಸಂಯುಕ್ತಪ್ರಾಂತ ಮುಂತಾದ ಕಡೆಗಳಲ್ಲಿ ಇಂಡಿಯಾದ ರಾಷ್ಟ್ರಭಾಷೆಯಾ
ಉರ್ದು ಭಾಷೆಗೆ—ವಿಶ್ವವಿದ್ಯಾನಿಲಯದ ಶಿಕ್ಷಣ ಪುಸ್ತಕಗಳನ್ನೆಲ್ಲಾ ತರ್ಜುಮೆ
ಮಾಡುವುದಕ್ಕಾಗಿ ಭಾಷಾಂತರ ಶಾಖೆಯೊಂದನ್ನು ಏರ್ಪಾಡುಮಾಡಿದ್ದಾ
ಹೈದರಾಬಾದಿನಲ್ಲಿ ಇಂಡಿಯಾ ದೇಶದ ನಾನಾ ಭಾಗಗಳಿಂದಲೂ ಪ್ರೊಫೆಸರುಗಳ
ಕರೆಯಿಸಿ, ಉರ್ದು ಭಾಷಾಂತರ ಶಾಖೆಗೆ ನೇಮಕಮಾಡಿ ಇದುವರೆಗೆ ಎಷ್ಟು
ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ. ಅದೇ ರೀತಿ ನಮ್ಮ ವಿಶ್ವವಿದ್ಯಾ
ನಿಲಯಗಳಲ್ಲಿ ಕನ್ನಡ ಭಾಷೆಯನ್ನು ಶಿಕ್ಷಣ ಭಾಷೆಯನ್ನಾಗಿ ಮಾಡಬೇಕಾದ
ಹೆಚ್ಚು ಹಣವನ್ನು ಖರ್ಚುಮಾಡಿ ಪಠ್ಯ ಪುಸ್ತಕಗಳನ್ನೆಲ್ಲ ಕನ್ನಡಕ್ಕೆ ತರ್ಜುಮೆ
ಮಾಡಬೇಕಾಗುತ್ತದೆ. ಅಲ್ಲದೆ, ಇನ್ನೊಂದು ವಿಚಾರವನ್ನು ನಾವು ಗಮನಿಸ
ಬೇಕಾಗುತ್ತದೆ. ಉರ್ದು ಇಂಡಿಯಾ ದೇಶದಲ್ಲಿ ಅನೇಕರಿಗೆ ಗೊತ್ತಾಗುವ ಭಾಷೆ
ಈ ಕಾರಣದಿಂದಲೇ ಹೈದರಾಬಾದ್ ಮತ್ತು ಸಂಯುಕ್ತ ಪ್ರಾಂತಗಳಲ್ಲಿ ಉರ್ದು

ವನ್ನು ಶಿಕ್ಷಣಭಾಷೆಯನ್ನಾಗಿ ಏರ್ಪಡಿಸಲಾಗಿದೆ. ಅಲ್ಲಿಯವರು ಅದೇ ರಾಷ್ಟ್ರ ಭಾಷೆಯೆಂಬ ಭಾವನೆಗನುಸಾರವಾಗಿ ಹಾಗೆ ಮಾಡಿದ್ದಾರೆ. ಉರ್ದುಭಾಷೆ ಬಹಳ ದಿವಸಗಳಿಂದ ನಮ್ಮ ದೇಶದಲ್ಲಿರುವುದರಿಂದಲೂ ಮತ್ತು ಹೆಚ್ಚು ಜನರಿಗೆ ತಿಳಿದಿರು ವುದರಿಂದಲೂ ಅದನ್ನು ಪ್ರತಿಯೊಬ್ಬರೂ ಕಲಿಯಬೇಕಾಗಿದೆ. ಉರ್ದುಭಾಷೆಯನ್ನು ಕಲಿತಿರುವ ಗ್ರ್ಯಾಜುಯೇಟುಗಳಿಗೆ ಇಂಡಿಯಾ ದೇಶದ ಇತರ ಕಡೆಗಳಲ್ಲಿಯೂ ಸಹ ಕೆಲಸವು ಸಿಕ್ಕುತ್ತದೆ. ಆದರೆ, ಕನ್ನಡಬರುವ ಗ್ರ್ಯಾಜುಯೇಟ್‌ಗಳ ಸ್ಥಿತಿಯು ಹಾಗಲ್ಲ. ಕನ್ನಡದಲ್ಲಿ ಶಿಕ್ಷಣಹೊಂದಿದ ಗ್ರ್ಯಾಜುಯೇಟ್‌ಗಳಿಗೆ ಬೇರೆ ಕಡೆಗಳಲ್ಲಿ ಕೆಲಸವು ದೊರೆಯುವ ಹಾಗಿಲ್ಲ. ನಮ್ಮ ಅಭಿಲಾಷೆಯೇನೋ ಇಂಡಿಯಾ ದೇಶದಲ್ಲೆಲ್ಲ ಕನ್ನಡವೇ ಪ್ರಚಾರಕ್ಕೆ ಬರಬೇಕೆಂಬುದು. ಆದರೆ ಈಗ ನಮ್ಮ ವಿಶ್ವವಿದ್ಯಾನಿಲಯ ದಲ್ಲಿ ಶಿಕ್ಷಣಹೊಂದಿದವರೆಲ್ಲರಿಗೂ ಸಂಸ್ಥಾನದಲ್ಲೇ ಉದ್ಯೋಗಗಳು ಸಿಕ್ಕುತ್ತವೆಂಬ ಭರವಸೆಯಿಲ್ಲ. ಹೀಗಿರುವಲ್ಲಿ ಕನ್ನಡದಲ್ಲಿ ಶಿಕ್ಷಣಹೊಂದಿದವರು ಬೇರೆ ಕಡೆಗಳಲ್ಲಿ ಕೆಲಸಕ್ಕೆ ಪ್ರಯತ್ನಪಡಲು ಅವಕಾಶವಿಲ್ಲದೆ, ಅವರಿಗೆ ಉದ್ಯೋಗಗಳು ದೊರೆಯುವ ಕ್ಷೇತ್ರವೇ ಕೇವಲ ಪರಿಮಿತವಾಗುತ್ತದೆ. ಮೈಸೂರು ಸಂಸ್ಥಾನದ ಹೊರಗಡೆ ಖಂಡಿತ ಉದ್ಯೋಗಗಳು ದೊರೆಯುವುದಿಲ್ಲ. ಮುಸಲ್ಮಾನ ಪಂಗಡದವರಿಗಂತು ಉತ್ತರದೇಶದಲ್ಲಿ ಉದ್ಯೋಗಗಳು ದೊರೆಯಬೇಕು. ಕನ್ನಡವೇ ಅವರ ಶಿಕ್ಷಣ ಭಾಷೆಯಾದರೆ ಅದಕ್ಕೆ ತೊಂದರೆಯಾಗುತ್ತದೆ. ವಿಶ್ವವಿದ್ಯಾನಿಲಯದಲ್ಲಿ ಕನ್ನಡವನ್ನು ಶಿಕ್ಷಣಭಾಷೆಯನ್ನಾಗಿ ಮಾಡುವುದಕ್ಕೆ ಮುಂಚೆ ತಕ್ಕ ಏರ್ಪಾಡುಗಳನ್ನು ಮಾಡ ಬೇಕು. ಮೊಟ್ಟಮೊದಲು ನಾವು ಒಂದು ಭಾಷಾಂತರ ಶಾಖೆಯನ್ನು ಏರ್ಪಡಿಸಿ ಕೊಳ್ಳಬೇಕು. ಈಗ ಕನ್ನಡವು ಧಾರವಾಡದ ವರೆಗೆ ಮಾತ್ರ ಬಳಕೆಯಲ್ಲಿದೆ; ಇಂಡಿಯಾ ದೇಶದಲ್ಲೆಲ್ಲ ಇದು ಬಳಕೆಯಲ್ಲಿ ಬರುವಂತೆ ಹೆಚ್ಚು ಪ್ರಚಾರಕಾರ್ಯವನ್ನು ಕೈಕೊಳ್ಳ ಬೇಕು. ಎಲ್ಲಾ ಭಾಗದವರೂ ಒಟ್ಟಾಗಿ ಸೇರಿ ಪಠ್ಯಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಮಾಡಿ ಹೆಚ್ಚು ಪ್ರೋತ್ಸಾಹವನ್ನು ಕೊಡಬೇಕು. ಅನಂತರ ನಮ್ಮ ದೇಶದ ಕನ್ನಡ ವಿದ್ಯಾರ್ಥಿಗಳಿಗೆ ಹೊರಗಡೆ ಉದ್ಯೋಗಗಳು ದೊರೆಯುವಂತೆ ತಕ್ಕ ಅವಕಾಶ ಕಲ್ಪಿಸಿಕೊಡಬೇಕು. ಹಾಗೆ ಮಾಡದೆ ನೀವು ಈಗಲೇ ಕನ್ನಡವನ್ನು ಶಿಕ್ಷಣ ಭಾಷೆಯಾಗಿ ಜಾರಿಗೆ ತಂದರೆ ಆದರಿಂದ ಅನೇಕ ಜನರಿಗೆ ಬಹಳ ತೊಂದರೆ ಯಾಗುತ್ತದೆ. ಈಗಾಗಲೇ ಹೈ ಸ್ಕೂಲುಗಳಲ್ಲಿ ಇಂಗ್ಲಿಷ್ ಭಾಷೆಯ ಮೂಲಕ ಶಿಕ್ಷಣಕೊಡುವ ಶಾಖೆಗಳ ಸಂಬಂಧವಾಗಿ ಅನೇಕ ತೊಂದರೆಗಳಿವೆ. ಈ ಕಾರಣ ಗಳಿಂದ ನನಗೆ ಕನ್ನಡದ ವಿಚಾರದಲ್ಲಿ ಬಹಳಮಟ್ಟಿಗೆ ಸಹಾನುಭೂತಿಯಿದ್ದರೂ ಕೂಡ, ಈ ನಿರ್ಣಯದಲ್ಲಿ ಸೂಚಿಸಿರುವ ಕ್ರಮವನ್ನು ಜಾರಿಗೆ ತರುವುದರಿಂದ

ಉಂಟಾಗಬಹುದಾದ ತೊಂದರೆಗಳನ್ನು ನೆನಪಿನಲ್ಲಿಟ್ಟುಕೊಂಡು ನಾನು ಈ ನಿರ್ಣಯವನ್ನು ತೀವ್ರವಾಗಿ ವಿರೋಧಿಸಬೇಕಾಗಿದೆ.

## ಶ್ರೀಮಾನ್ ಎನ್. ರಾಮರಾಯರು

ಸ್ವಾಮಿ, ಈಗ ತಿದ್ದುಪಾಟಾಗಿರತಕ್ಕ ನಿರ್ಣಯವನ್ನು ನಾನು ಸಂಪೂರ್ಣವಾಗಿ ಸಮರ್ಥಿಸುತ್ತೇನೆ. ನಮ್ಮದು ಕರ್ಣಾಟಕ ಸೀಮೆ. ಇಲ್ಲಿಯ ವಿಶ್ವವಿದ್ಯಾನಿಲಯದಲ್ಲಿ ಕರ್ಣಾಟಕ ಭಾಷೆಯೇ ಇದ್ದು ಅದರಲ್ಲೇ ಎಲ್ಲಾ ಪಾಠಗಳನ್ನು ಹೇಳಿಕೊಡಬೇಕೆಂಬುದು ಒಂದು ವಾದ. ಇದೇ ವಿಚಾರದಲ್ಲಿ ಇನ್ನೊಂದು ವಾದವು ಇದೆ. ಅದರ ತತ್ತ್ವವು ಇನ್ನೂ ಸ್ವಲ್ಪದೂರ ಹೋಗುತ್ತದೆ. ಏನೆಂದರೆ, ಈಗ ಹಲವು ವರ್ಷಗಳಿಂದ ನಾವು ಇಂಗ್ಲಿಷ್ ವಿದ್ಯಾಭ್ಯಾಸ ಮಾಡುತ್ತಿದ್ದೇವೆ. ಇದರಿಂದ ನಮಗೆ ಎಷ್ಟು ಪ್ರಯೋಜನವಾಗಿದೆಯೆಂಬುದನ್ನು ನಾವು ನೋಡಬೇಕು. ಒಂದು ಪರಭಾಷೆಯಲ್ಲಿ ನಾವು ವಿದ್ಯೆಯನ್ನು ಕಲಿಯುತ್ತಿರುವುದರಿಂದ ನಮ್ಮ ಕೆಲಸಗಳಿಗೆಲ್ಲ ಅನ್ಯಭಾಷೆಯನ್ನು ಪ್ರಯೋಗಮಾಡಬೇಕಾಗಿ ಬಂದಿದೆ. ಯಾವ ಕೆಲಸವನ್ನು ಮಾಡಬೇಕಾದರೂ, ಮಾನಸಿಕ ಭಾಷೆಯೊಂದರಲ್ಲಿ ಅರ್ಥಮಾಡಿಕೊಂಡು, ಆ ಮೇಲೆ ಆ ಕೆಲಸಕ್ಕೆ ಪ್ರಾರಂಭಿಸಬೇಕಾಗಿ ಬಂದಿದೆ. ಹೀಗೆ ಯಾವಾಗಲೂ ಒಂದು ಪರ ಭಾಷೆಯ ಭಾರವನ್ನು ಹೊತ್ತುಕೊಳ್ಳಬೇಕಾಗಿರುವುದರಿಂದ, ನಮ್ಮ ಶಕ್ತಿಯನ್ನು ವಸ್ತುಸಾಧನೆಯಲ್ಲಿ ಪ್ರಯೋಗಿಸುವುದಕ್ಕೆ ಸಾಧ್ಯವಿಲ್ಲದಂತಾಗಿದೆ. ಬೇರೊಂದು ಭಾಷೆಯನ್ನು ನಾವು ಮೊದಲು ಸ್ವಾಧೀನಮಾಡಿಕೊಂಡು, ಆಮೇಲೆ ಆ ಭಾಷೆಯನ್ನು ನಮ್ಮ ಬುದ್ಧಿಕಾರ್ಯಗಳಿಗೆ ಉಪಯೋಗಿಸಿಕೊಳ್ಳಬೇಕು. ಸಾಧಾರಣವಾಗಿ ಪ್ರತಿಯೊಬ್ಬನೂ ತನ್ನೊಬ್ಬನ ಹೊರೆಯನ್ನು ಹೊತ್ತುಕೊಂಡು ಹೋಗಬೇಕೇ ಹೊರತು, ಸುಮ್ಮನೆ ಹೆಚ್ಚಿನ ಹೊರೆಯನ್ನು ಹೊತ್ತುಕೊಂಡು ಹೋಗುವುದರಿಂದ ಯಾವ ಸಾರ್ಥಕವೂ ಇಲ್ಲ. ಅದು ನ್ಯಾಯವೂ ಅಲ್ಲ. ಅದೇ ರೀತಿಯಾಗಿ ನಾವು ಒಂದು ಹೊಸ ಭಾಷೆಯಲ್ಲಿ ನಮ್ಮ ಬುದ್ಧಿ ಕೆಲಸಗಳೆಲ್ಲವನ್ನೂ ತಿಳಿದುಕೊಳ್ಳುವುದನ್ನು ಬಿಡಬೇಕು.

ಕನ್ನಡ ಭಾಷೆಯಲ್ಲೇ ಕಾಲೇಜು ತರಗತಿಗಳಲ್ಲಿ ಶಿಕ್ಷಣವು ನಡೆಯಬೇಕೆಂಬ ವಿಚಾರದಲ್ಲೇನೊ ಈಗ ಅನೇಕ ಪ್ರತಿಬಂಧಕಗಳಿವೆ. ಈ ಪ್ರತಿಬಂಧಕಗಳು ಅಸಾಧ್ಯವಾಗಿದ್ದರೇನೋ ಅದನ್ನು ಮಾಡುವುದು ಬೇಡ. ಹಾಗಿಲ್ಲದಿದ್ದ ಮೇಲೆ ಅಡ್ಡಿ ಅಡಚಣೆಗಳು ಇದ್ದ ಮಾತ್ರದಿಂದಲೇ ಅದನ್ನು ಮಾಡದೆ ಇರತಕ್ಕುದು ಸರಿಯಲ್ಲ. "ಮನವಿದ್ದೆಡೆ ಮಾರ್ಗವುಂಟು" ಎಂಬಂತೆ ನಮ್ಮಲ್ಲಿ ಸಂಕಲ್ಪಮಾಡಿದರೆ ಅದು

ಸಾಧನೋಪಾಯವೂ ಬರುತ್ತದೆ. ಈ ಸಂದರ್ಭದಲ್ಲಿ ಹೇಳಿರತಕ್ಕ ಒಂದು ಪದ್ಯವು ಉತ್ತಮ ಮಾರ್ಗದರ್ಶಕವಾಗಿದೆ :—

"ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ||"

ಎಂಬಂತೆ, ಒಂದು ಕಾರ್ಯವನ್ನು ಮಾಡಿದರೆ ಸಾಧ್ಯವಾಗುವುದೆಂಬ ಭರವಸೆಯಿದ್ದರೆ ಅದಕ್ಕೆ ಎಷ್ಟೇ ಕಷ್ಟಗಳು ಬರಲಿ, ಅದನ್ನು ಮಾಡಲೇಬೇಕು. ಅದರಲ್ಲಿ ಲೋಪದೋಷಗಳಿವೆಯೆಂದು ನಾವು ಎದೆಗೊಟ್ಟು ಮಾಡದೆ ಇರತಕ್ಕದ್ದಲ್ಲ. ನಾವು ಮಾಡತಕ್ಕ ಕರ್ತವ್ಯವನ್ನು ಮಾಡಿಯೇ ತೀರಬೇಕು. ಈಗ ಇಂಟರ್‌ಮಿಾಡಿಯೆಟ್ ಕಾಲೇಜಿನಲ್ಲಿ ಶಾಸ್ತ್ರಗಳನ್ನು ಕನ್ನಡದಲ್ಲಿ ಹೇಳಿಕೊಡುವುದಕ್ಕೆ ಅದಕ್ಕೆ ಸರಿಯಾದ ಮಾತುಗಳಿಲ್ಲವೆಂದೂ, ತಕ್ಕ ಪುಸ್ತಕಗಳಿಲ್ಲವೆಂದೂ ಸಾಧಾರಣವಾಗಿ ಎಲ್ಲರೂ ಹೇಳತಕ್ಕ ವಾದವಾಗಿದೆ. ಆದರೆ ನಾನು ಒಂದು ಅಂಶವನ್ನು ತಮಗೆ ತಿಳಿಸಬೇಕಾಗಿದೆ. ತಾವು ಇದನ್ನು ಕಾಲೇಜುಗಳಲ್ಲಿ ಪ್ರಾರಂಭಿಸುವುದಕ್ಕೆ ಪ್ರಯತ್ನಮಾಡಿದ ಮೇಲೆಯೇ ನಮಗೆ ಪುಸ್ತಕಗಳು ಬರುತ್ತವೆ. ಆಗ ಜನರು ಯಾರಾದರೂ ಪುಸ್ತಕಗಳನ್ನು ಬರೆದೇ ಬರೆಯುತ್ತಾರೆ.

ಕನ್ನಡವು ನಮ್ಮ ಮಾತೃಭಾಷೆ. ವಿದ್ಯಾವಂತರು ತಮ್ಮ ಮಾತೃಭಾಷೆಯಲ್ಲಿ ಇತರರಿಗೆ ಗೊತ್ತಾಗುವ ಹಾಗೆ ಹೇಳಿಕೊಡಲು ಅವರು ಪ್ರಯತ್ನಮಾಡಿದರೆ ಅದು ಅಸಾಧ್ಯವೆ? ಶಾಸ್ತ್ರಸಂಬಂಧವಾದ ಪದಗಳು ಕನ್ನಡದಲ್ಲಿಲ್ಲವೆಂಬುದೇನೊ ನಿಜ. ಇದಕ್ಕೆ ಕಾರಣವೇನೆಂದರೆ, ನಾವು ಕನ್ನಡದಲ್ಲಿ ಯೋಚನೆಮಾಡುವುದಕ್ಕೆ ಪ್ರಾರಂಭಿಸಿಲ್ಲ; ಕನ್ನಡದಲ್ಲಿ ಪುಸ್ತಕಗಳನ್ನು ಬರೆದಿಲ್ಲ. ನಾವು ಕನ್ನಡದಲ್ಲೇ ಪುಸ್ತಕಗಳನ್ನು ಬರೆಯುವುದಕ್ಕೆ ಕನ್ನಡದಲ್ಲಿಯೇ ಮಾತನಾಡುವುದಕ್ಕೆ ಪ್ರಾರಂಭಮಾಡಿದರೆ ಸಾಕು. ಭಾಷೆಯು ತಾನಾಗಿಯೇ ಅನುಸರಿಸಿಕೊಂಡು ಬರುತ್ತದೆ. ನಾನು ಬಹಳ ದಿವಸಗಳಿಂದ ಕನ್ನಡದಲ್ಲಿ ಮಾತನಾಡುತ್ತಿರಲಿಲ್ಲ. ಮಾತನಾಡಬೇಕೆಂದರೆ ಸಂಕೋಚ. ಮಾತುಗಳು ಸರಿಯಾಗಿ ಒದಗುತ್ತಿರಲಿಲ್ಲ. ಆದರೆ ಅಭ್ಯಾಸ ಬಲದಿಂದ ಈಗ ಸುಲಭವಾಗಿ ಮಾತನಾಡಬಲ್ಲವನಾಗಿದ್ದೇನೆ. ಆದರೆ, ಅಷ್ಟು ಚೆನ್ನಾಗಿ ಕನ್ನಡದಲ್ಲಿ ಮಾತನಾಡುವುದಕ್ಕೆ ಬರುವುದಿಲ್ಲ. ಈ ಸಭೆಯಲ್ಲಿರತಕ್ಕ ನಮ್ಮ ಮುಸಲ್ಮಾನ್ ಸ್ನೇಹಿತರಲ್ಲಿ ಕೆಲವರು ಕನ್ನಡದಲ್ಲಿ ನಿರರ್ಗಳವಾಗಿ ಮಾತನಾಡುತ್ತಾರೆ. ಶ್ರೀಮಾನ್ ಮಿರ್ಜಾ ಅಜೀಜುಲ್ಲಾ ಬೇಗ್‌ರವರು ಎಷ್ಟು ಚೆನ್ನಾಗಿ ಕನ್ನಡದಲ್ಲಿ ಮಾತನಾಡಿದರು. ನನಗೂ ಕೂಡ ಹಾಗೆ ಮಾತನಾಡುವುದಕ್ಕೆ ಬರುತ್ತಿದ್ದರೆ, ನಾನು ಇಂದಿನ ಭಾಷಣವನ್ನು ಅಷ್ಟೇ ಸ್ಫೂರ್ತಿಯಿಂದ ಮಾಡಬಹುದಾಗಿತ್ತಲ್ಲಾ ಎಂದು ಆಶೆಪಡುತ್ತೇನೆ. ನಮಗೆ ಭಾಷೆ

ಯಲ್ಲಿ ಆಸಕ್ತಿ ಹೆಚ್ಚಿದಷ್ಟೂ ಆ ಭಾಷೆಯನ್ನು ಕಲಿಯುವುದು ಸುಲಭ. ಒಂದುವೇಳೆ ನೀವು ಹೇಳಬಹುದು, ಕನ್ನಡದಲ್ಲಿ ಸೂಕ್ತವಾದ ಪದಗಳು ಸಿಕ್ಕುವುದಿಲ್ಲವೆಂದು. ಹಾಗಿದ್ದರೆ ಬೇರೆ ಪದಗಳನ್ನು ನಾವು ಕಲ್ಪನೆಮಾಡಿಕೊಳ್ಳೋಣ. ಯೋಚನೆಮಾಡಿ ಹೊಸ ಪದಗಳನ್ನು ಕಲ್ಪನೆಮಾಡಿಕೊಳ್ಳುವುದಕ್ಕೆ ನಾವು ತೊಡಗೋಣ. ಸುಲಭವಾಗಿ ಅರ್ಥವಾಗದ ಪದಗಳನ್ನು ನೋಡಿ ಬೇರೆ ಭಾಷೆಗಳಿಂದ ತೆಗೆದುಕೊಳ್ಳೋಣ. ಈಗ "ಕೋರ್ಟು" "ರೈಲ್" "ಪೋಸ್ಟ್" ಮುಂತಾದ ಇಂಗ್ಲಿಷ್ ಪದಗಳು ಧಾರಾಳವಾಗಿ ಉಪಯೋಗಿಸಲ್ಪಡುತ್ತವೆ. ಅವಕ್ಕೆ ಕನ್ನಡದಲ್ಲಿ ಸರಿಯಾದ ಪದಗಳು ಸಿಕ್ಕುವವರೆಗೆ, ಹೊಸ ಪದಗಳನ್ನು ಕಲ್ಪಿಸಿಕೊಂಡು ಅವುಗಳನ್ನು ರೂಢಿಗೆ ತರುವ ವರೆಗೆ, ಈಗಿರತಕ್ಕ ಪದಗಳನ್ನೇ ಉಪಯೋಗಿಸಿಕೊಳ್ಳೋಣ. ಅದರಿಂದ ನಮ್ಮ ಭಾಷೆಯೂ ಬೆಳೆಯುತ್ತದೆ. ಇತರ ಭಾಷೆಯ ಪದಗಳನ್ನು ಉಪಯೋಗಿಸಿಕೊಳ್ಳು ವುದರಲ್ಲಿ ಯಾವುದೊಂದು ಅವಮಾನವೂ ಇಲ್ಲ. ಏತಕ್ಕೆಂದರೆ ಭಾಷೆಯೆಂಬುದು ಜೀವವುಳ್ಳ ವಸ್ತು. ಅದೂ ಕೂಡ ಅಭಿವೃದ್ಧಿಗೆ ಬರಬೇಕಾದರೆ ಹೊರಗಿನಿಂದ ಆಹಾರವನ್ನು ತೆಗೆದುಕೊಳ್ಳಬೇಕು. ಹೊರಗಡೆಯಿಂದ ಯಾವ ಯಾವ ವಿಚಾರಗಳನ್ನು ಯಾವ ಯಾವ ಮಾತುಗಳನ್ನು ತೆಗೆದುಕೊಳ್ಳುತ್ತೀರೋ ಅವೇ ಭಾಷೆಗೆ ಆಹಾರ. ಆದುದರಿಂದ ನಾವು ಇತರ ಭಾಷೆಗಳಿಂದ ನಮಗೆ ಬೇಕಾದ ಪದಗಳನ್ನು ಉಪ ಯೋಗಿಸಿಕೊಳ್ಳುವುದರಿಂದ ಏನೂ ಕೆಡಕಿಲ್ಲ. ಆ ರೀತಿ ಮಾಡುವುದು ಯುಕ್ತವೆಂದು ನಾನು ತಿಳಿಯುತ್ತೇನೆ. ಈಗ ನಾನು ಹೇಳುವುದೇನೆಂದರೆ: "ಇದು ಬಹಳ ಕಷ್ಟ" ಎನ್ನುವುದು ನಮ್ಮ ಅಧೈರ್ಯದಿಂದಲೇ ಹೊರತು, ನಿಜವಾಗಿಯೂ ಅದು ಕಷ್ಟವಲ್ಲ. ಇದನ್ನು ನಾವು ನಮ್ಮ ಕರ್ತವ್ಯವೆಂದು ತಿಳಿದು ಮಾಡದೆ ಇದ್ದರೆ ನಮ್ಮ ಆತ್ಮ ಗೌರವವನ್ನು ಉಳಿಸಿಕೊಳ್ಳುವುದಕ್ಕಾಗುವುದಿಲ್ಲವೆಂದು ತಿಳಿದುಕೊಳ್ಳಬೇಕು. ನಾವು ಈ ಕೆಲಸವನ್ನು ಮಾಡಲೇಬೇಕೆಂದು ಪ್ರಯತ್ನಿಸಿದರೆ ಖಂಡಿತವಾಗಿಯೂ ನಮ್ಮ ಇಷ್ಟಾರ್ಥವು ಕೈಗೂಡುತ್ತದೆಂಬುದರಲ್ಲಿ ಸಂದೇಹವಿಲ್ಲ. ನಮ್ಮಲ್ಲಿಯೂ ಅನೇಕ ಶಾಸ್ತ್ರಜ್ಞರು ಇದ್ದಾರೆ. ಮಾತೃಭಾಷಾ ಪ್ರೇಮಿಗಳೂ ಇದ್ದಾರೆ. ಅವರನ್ನು ಪುಸ್ತಕ ಬರೆಯಬೇಕೆಂದು ತಾವು ಕೇಳಿಕೊಂಡರೆ ಚೆನ್ನಾಗಿಯೂ ಬರೆಯುತ್ತಾರೆ.

ಈಗ ನಮ್ಮಲ್ಲಿ ಇನ್ನೊಂದು ಶಂಕೆಯುಂಟಾಗಿದೆ. ಶ್ರೀಮಾನ್ ಮಿರ್ಜಾ ಅಜೀಜುಲ್ಲಾ ಬೇಗ್‌ರವರು ಅದನ್ನು ಸ್ಪಷ್ಟವಾಗಿ ಹೇಳಲಿಲ್ಲ. ಈ ವಿಚಾರದಲ್ಲಿ ಸ್ವಲ್ಪ ಮಾತ್ರ ಸಂಶಯವನ್ನು ವ್ಯಕ್ತಪಡಿಸಿದರು. ಇದನ್ನು ಮನಸ್ಸಿನಲ್ಲಿ ಯೋಚನೆ ಮಾಡಿಕೊಂಡೇ ಎರಡನೆಯ ತಿದ್ದುಪಡಿಯನ್ನು ನನ್ನ ಮಿತ್ರರು ಶ್ರೀಮಾನ್ ರಾಜ ಗೋಪಾಲ ಐಯಂಗಾರ್ಯರು ವಾಪಸು ತೆಗೆದುಕೊಂಡರೆಂದು ಕಾಣುತ್ತದೆ.

ಅದೇನೆಂದರೆ, ಇದುವರೆಗೆ ನಾವು ಒಂದು ಕ್ರಮವನ್ನು ಅನುಸರಿಸಿಕೊಂಡು ಬಂದಿದ್ದೇವೆ. ಈಗ ಅದನ್ನು ಒಮ್ಮೆಯೇ ಬದಲಾಯಿಸಿ ಎಲ್ಲವನ್ನೂ ಕನ್ನಡದಲ್ಲಿಯೇ ಬೋಧನೆಮಾಡಬೇಕೆಂದು ಹೇಳಿದರೆ, ಇದುವರೆಗೂ ಇಂಗ್ಲಿಷಿನಲ್ಲಿ ಅಭ್ಯಾಸಮಾಡುತ್ತಿರುವವರಿಗೆ ತೊಂದರೆಯಲ್ಲವೆ? ಇದೇ ಒಂದು ದೊಡ್ಡ ಪ್ರಶ್ನೆ. ನಿಜವಾಗಿಯೂ ಇದು ಒಂದು ತೊಂದರೆಯೆಂದೂ ನಾನು ತಿಳಿದಿದ್ದೇನೆ. ಇದನ್ನರಿತೇ ಅವರು ತಿದ್ದುಪಡಿಯನ್ನು ವಾಪಸು ತೆಗೆದುಕೊಂಡರು. ನಮ್ಮ ಮುಸಲ್ಮಾನ ಸಹೋದರರು ಅಪೇಕ್ಷೆಪಟ್ಟು ಇಂಗ್ಲಿಷನ್ನೇ ತೆಗೆದುಕೊಳ್ಳಬಹುದು. ಅವರಿಗೆ ಇರುವ ಆ ಮಾರ್ಗವನ್ನು ಮುಚ್ಚಿಬಿಡಬೇಕೆಂದು ನಮ್ಮ ಆಶೆಯಲ್ಲ. ಕೆಲವು ಕಾಲವಾದ ಮೇಲೆ ನಮ್ಮ ಮುಸಲ್ಮಾನ ಸಹೋದರರೂ ಅವರಲ್ಲಿರತಕ್ಕ ವಿಶೇಷ ದೇಶಭಕ್ತಿಯಿಂದ ದೇಶಭಾಷೆಯಾದ ಮತ್ತು ಸ್ವತಂತ್ರ ಭಾಷೆಯಾದ ಕನ್ನಡವನ್ನೇ ಗೌರವಿಸಬಹುದು. ಅವರುಗಳೇ ಇನ್ನು ಕೆಲವು ವರ್ಷಗಳ ಕಾಲದಲ್ಲಿ ಎಲ್ಲವೂ ಕನ್ನಡದಲ್ಲಿಯೇ ನಡೆಯಬೇಕೆಂದು ಕೇಳಬಹುದು. ಆದುದರಿಂದ ಇದು ಸಾಧುವಾದ ನಿರ್ಣಯವೆಂದು ಹೇಳಿ ಇದನ್ನು ಸಂಪೂರ್ಣವಾಗಿ ಪುಷ್ಟೀಕರಿಸುತ್ತೇನೆ. ಇದನ್ನು ಜಾರಿಗೆ ತರುವುದು ಬಹಳ ಆವಶ್ಯಕವಾಗಿದೆಯೆಂದು ನಾನು ತಿಳಿದಿದ್ದೇನೆ. ತಾವು ಇದನ್ನು ಖಂಡಿತವಾಗಿಯೂ ಒಪ್ಪಿಕೊಳ್ಳಲೇಬೇಕು. ಇದನ್ನು ಒಪ್ಪಿಕೊಳ್ಳದಿದ್ದರೆ, ನಮ್ಮ ಆತ್ಮಗೌರವವು ಉಳಿಯುವುದಿಲ್ಲವೆಂದು ನಾನು ಹೇಳುತ್ತೇನೆ. ಪ್ರಪಂಚದಲ್ಲಿ ಯಾವ ದೇಶದಲ್ಲಿಯೇ ಆಗಲಿ, ಇನ್ನಾವುದೋ ಭಾಷೆಯನ್ನು ಮೊದಲು ಕಲಿತು, ಆ ಮೇಲೆ ಶಾಸ್ತ್ರಗಳ ಪರಿಚಯ ಮಾಡಿಕೊಳ್ಳುವ ಪದ್ಧತಿ ಜಾರಿಯಲ್ಲಿದೆಯೇ? ಈಗ ಜಪಾನಿನವರ ವಿಷಯವನ್ನು ತೆಗೆದುಕೊಳ್ಳಿ. ಅವರು ಅನುಸರಿಸುವ ಮಾರ್ಗವನ್ನು ನಾವು ಮೆಚ್ಚಬೇಕು. ಎಷ್ಟು ಜಾಗ್ರತೆ ಅವರು ಅಭಿವೃದ್ಧಿಗೆ ಬಂದರು! ಇದಕ್ಕೆ ಮುಖ್ಯ ಕಾರಣವೇನು! ಅವರು, ಅವರ ಕೆಲಸಗಳೆಲ್ಲವನ್ನೂ ತಮ್ಮ ಭಾಷೆಯಲ್ಲಿಯೇ ನಡೆಯಿಸಬೇಕೆಂದು ವಿಧಾಯಕ ಮಾಡಿರುತ್ತಾರೆ. ಆದರೂ ಸಂಸ್ಕೃತಿಯ ಸಲುವಾಗಿ ಇಂಗ್ಲಿಷ್ ಮೊದಲಾದ ಇತರ ಭಾಷೆಗಳನ್ನೂ ಅವರು ಕಲಿಯುತ್ತಾರೆ. ಇದಕ್ಕಾಗಿಯೇ ಪಾಶ್ಚಾತ್ಯ ಭಾಷೆಗಳನ್ನು ಅವರು ಕಲಿಯುವುದು. ಹಾಗೆಯೇ, ನಾವೂ ಇಂಗ್ಲಿಷ್ ಭಾಷೆಯನ್ನು ತೆಗೆದುಬಿಡಬೇಕೆಂದು ಹೇಳುವುದಿಲ್ಲ. ಅದನ್ನು ನಾವು ಕಲಿಯಬೇಕು. ನನ್ನ ಅಭಿಪ್ರಾಯದಲ್ಲಿ, ಅದರ ಜೊತೆಗೆ, ಫ್ರೆಂಚ್, ಜರ್ಮನ್ ಮತ್ತು ರಷ್ಯನ್ ಭಾಷೆಗಳನ್ನೂ ಕೂಡ ನಾವು ಕಲಿಯಬೇಕು. ಹೀಗೆಂದ ಮಾತ್ರಕ್ಕೆ ನಮ್ಮ ದೇಶಭಾಷೆಯನ್ನು ನಾವು ಉದಾಸೀನ ಮಾಡಕೂಡದು. ಏನೇ ಆಗಲಿ, ಇದನ್ನು ತಾವು ಅಂಗೀಕಾರ ಮಾಡಲೇಬೇಕು. ಎಷ್ಟು ಜಾಗ್ರತೆ ಇದನ್ನು ಕಾರ್ಯರೂಪಕ್ಕೆ ತಂದರೆ ಅಷ್ಟು

ಒಳ್ಳೆಯದು. ತಾವು ಪ್ರಾರಂಭವೊಂದನ್ನು ಮಾಡಿದರೆ ಸಾಕು; ಮುಂದೆ ತಾನಾಗಿಯೇ ಸುಲಭವಾಗುತ್ತದೆ. ನಮಗೆ ಎದುರಿಸಲು ಅಸಾಧ್ಯವೆಂದು ತೋರತಕ್ಕ ಪ್ರತಿಬಂಧಗಳೆಲ್ಲವೂ ಮಾಯವಾಗಿ ಮುಂದಿನ ಮಾರ್ಗವು ಸುಗಮವಾಗುತ್ತದೆಂದು ನಾನು ಭರವಸೆಯನ್ನು ಕೊಡುತ್ತೇನೆ.

### ಶ್ರೀಮಾನ್ ಜಾತರೆ ನಾಯಕರು

ಸ್ವಾಮಿ, ಈ ನಿರ್ಣಯವನ್ನು ನಾನು ಪುಷ್ಟೀಕರಿಸುತ್ತೇನೆ.

### ಶ್ರೀಮಾನ್ ಎ. ಎನ್. ರಾಮರಾಯರು

ಸ್ವಾಮಿ, ಈ ನಿರ್ಣಯವನ್ನು ನಾನು ನಮ್ಮ ರಾಷ್ಟ್ರೀಯ ಪಕ್ಷದವರ ಪರವಾಗಿ ಅನುಮೋದಿಸುತ್ತಾ ಒಂದೆರಡು ಮಾತುಗಳನ್ನು ಹೇಳುತ್ತೇನೆ. ಕನ್ನಡ ಭಾಷೆಯೆನ್ನುವುದು ನಿನ್ನೆಯಾಗಲಿ ಅಥವಾ ಇವೊತ್ತಾಗಲಿ ಬಂದ ಭಾಷೆಯಲ್ಲ. ಅನೇಕ ವರ್ಷಗಳಿಂದ, ಎಂದರೆ, ಕ್ರಿ.ಪೂ. ೩೦೦ ಕ್ಕೆ ಮುಂಚಿನಿಂದಲೂ ಕನ್ನಡ ಭಾಷೆಯು ನಮ್ಮ ದೇಶದಲ್ಲಿ ರೂಢಿಯಲ್ಲಿತ್ತು. ಈಜಿಪ್ಟ್ ದೇಶದ ನಾಟಕಗಳಲ್ಲಿರತಕ್ಕ ಕೆಲವು ವಾಕ್ಯಗಳೇ ಇದಕ್ಕೆ ಸಾಕಾದಷ್ಟು ಆಧಾರವಾಗಿವೆ. ಕನ್ನಡದಲ್ಲಿ ಬರೆದಿರುವ ಕೆಲವು ಪೂರ್ತಿ ವಾಕ್ಯಗಳು ಅಲ್ಲಿನ ಕೆಲವು ಪತ್ರಗಳಲ್ಲಿಯೂ ಕಾಣಬರುತ್ತವೆ. ಹೀಗೆ ಇದು ಎಷ್ಟೋ ದಿವಸಗಳಿಂದ ಬೆಳೆದುಬಂದ ಭಾಷೆಯೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ನೃಪತುಂಗನೆಂಬ ಮಹಾ ಕವಿಯು, ಈ ಕನ್ನಡ ಭಾಷೆಯು ಹಿಂದೆ ಎಷ್ಟರಮಟ್ಟಿಗೆ ಪ್ರಸಿದ್ಧಿಗೆ ಬಂದಿತ್ತೆಂಬುದನ್ನು ವರ್ಣಿಸಿದ್ದಾನೆ. ಕಾವೇರಿ ನದಿಯಿಂದ ಗೋದಾವರಿ ನದಿಯವರೆಗೂ ಕನ್ನಡ ಭಾಷೆಯು ಹಬ್ಬಿತ್ತೆಂಬುದು ಅವನ ಗ್ರಂಥದಿಂದ ವ್ಯಕ್ತಪಡುತ್ತದೆ. ನಮ್ಮ ಶ್ರೀಮನ್ಮಹಾರಾಜರವರೂ, ಅವರ ಸರ್ಕಾರದವರೂ ಕಳೆದ ೨೦ ವರ್ಷಗಳಿಂದೀಚೆಗೆ ಕನ್ನಡಕ್ಕೆ ಬಹಳ ಹೆಚ್ಚಿನ ಉತ್ತೇಜನವನ್ನು ಕೊಟ್ಟು, ಅನೇಕ ತೆರನಾಗಿ, ಕನ್ನಡದ ಬೆಳವಣಿಗೆಗೆ ಸಹಾಯ ಮಾಡಿದ್ದಾರೆ. ಕನ್ನಡದಲ್ಲಿ ಪುಸ್ತಕಗಳನ್ನು ಬರೆಯುವುದಕ್ಕೆ ವಿಶೇಷವಾಗಿ ಪ್ರೋತ್ಸಾಹಿಸಿ ಅನೇಕ ಕನ್ನಡ ಪುಸ್ತಕಗಳನ್ನು ಪಠ್ಯಪುಸ್ತಕಗಳನ್ನಾಗಿ ಏರ್ಪಡಿಸಿದ್ದಾರೆ. ಅಷ್ಟೇ ಅಲ್ಲದೆ, ಹೈ ಸ್ಕೂಲುಗಳಲ್ಲಿ ಕನ್ನಡವನ್ನು ಶಿಕ್ಷಣ ಭಾಷೆಯನ್ನಾಗಿ ಮಾಡಿದ್ದಾರೆ. ಇದಕ್ಕಾಗಿ ನಾವು ಶ್ರೀಮನ್ಮಹಾರಾಜರವರಿಗೂ ಮತ್ತು ಅವರ ಸರ್ಕಾರದವರಿಗೂ ಎಷ್ಟು ಕೃತಜ್ಞರಾಗಿದ್ದರೂ ಸಾಲದು. ಅಲ್ಲದೆ, ನಮ್ಮ ರಾಜ್ಯದ ಎಲ್ಲೆಯಲ್ಲಿರತಕ್ಕ ಧಾರ್ವಾಡ, ಹುಬ್ಬಳ್ಳಿ, ಬಳ್ಳಾರಿ, ದಕ್ಷಿಣಕನ್ನಡ ಜಿಲ್ಲೆಗಳವರು ಕನ್ನಡಕ್ಕೆ ಎಷ್ಟರಮಟ್ಟಿಗೆ ದುಡಿಯುತ್ತಿದ್ದಾರೆಂಬುದು ತಮಗೇ ಗೊತ್ತಿದೆ. ಇದಕ್ಕೆ ಸರಿಯಾಗಿ ನಮ್ಮ ದಿವಾನರವರೂ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ವಿಶೇಷ ಉತ್ಸಾಹವನ್ನು ತೋರಿಸುತ್ತಿ

ದ್ದಾರೆಂದರೆ, ಅವರು ಕನ್ನಡಕ್ಕೆ ಎಷ್ಟು ಪ್ರಾಮುಖ್ಯತೆಯನ್ನು ಕೊಟ್ಟಿರುತ್ತಾ ರೆಂಬುದು ಗೊತ್ತಾಗುತ್ತದೆ.

ಅಲ್ಲದೆ ಇನ್ನೊಂದು ವಿಷಯ. ಈಗ ಕನ್ನಡಿಗರಲ್ಲಿ ಏಕೆ, ಇಡೀ ಕರ್ಣಾಟಕದ ಜನತೆಯಲ್ಲಿಯೇ ಒಂದು ಸಮಸ್ಯೆ ಎದ್ದಿದೆ. ಕನ್ನಡದ ಏಕೀಕರಣವಾಗಬೇಕೆಂಬುದೇ ಆ ಸಮಸ್ಯೆ. ಇದರ ಜೊತೆಗೆ ಕನ್ನಡ ವಿಶ್ವವಿದ್ಯಾನಿಲಯವೊಂದನ್ನು ಏರ್ಪಡಿಸ ಬೇಕೆಂದು ಅನೇಕರು ಪ್ರಚಾರಕಾರ್ಯವನ್ನು ನಡೆಯಿಸುತ್ತಿದ್ದಾರೆ. ಕರ್ಣಾಟಕ ಸಿಂಹಾಸನಾಧೀಶ್ವರರಾದ ನಮ್ಮ ಶ್ರೀಮನ್ಮಹಾರಾಜರವರು ಅಂಥ ವಿಶ್ವವಿದ್ಯಾ ನಿಲಯದ ಛಾನ್ಸಲರಾಗಬೇಕೆಂದು ಕರ್ಣಾಟಕದ ಜನರು ಬಯಸುವುದು ಉಚಿತ ವಾಗಿಯೇ ಇದೆ. ಮತ್ತು ಅದಕ್ಕಾಗಿ ಅವರು ಬಹಳಮಟ್ಟಿಗೆ ದುಡಿಯುತ್ತಿದ್ದಾರೆ. ಹೀಗಿರುವ ಸ್ಥಿತಿಯಲ್ಲಿ ಈ ನಿರ್ಣಯವು ಈ ಸಭೆಯ ಮುಂದೆ ಬಂದಿರುವುದು ಒಂದು ಶುಭಸೂಚನೆಯಾಗಿದೆಯೆಂದು ನಾನು ತಿಳಿದಿದ್ದೇನೆ. ಏಕೆಂದರೆ, ಈಗ ನಮ್ಮ ವಿಶ್ವ ವಿದ್ಯಾನಿಲಯವು ಕರ್ಣಾಟಕ ವಿಶ್ವವಿದ್ಯಾನಿಲಯವಲ್ಲ. ಕರ್ಣಾಟಕ ರಾಜ್ಯದಲ್ಲಿರುವ ಪ್ರತಿಯೊಬ್ಬರೂ ನಮ್ಮ ವಿಶ್ವವಿದ್ಯಾನಿಲಯಕ್ಕೇ ಬಂದು ವಿದ್ಯೆಯನ್ನು ಕಲಿಯು ವಂತಿಲ್ಲ. ನಮ್ಮ ಸಂಸ್ಥಾನದ ಪಕ್ಕದಲ್ಲಿನ ಜನರು ಕನ್ನಡಿಗರೇ ಆಗಿದ್ದರೂ ಅವರು ಬೇರೆ ವಿಶ್ವವಿದ್ಯಾನಿಲಯಗಳಿಗೆ ಹೋಗಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ನಮ್ಮ ವಿಶ್ವವಿದ್ಯಾನಿಲಯಕ್ಕೆ ಕರ್ಣಾಟಕದವರೆಲ್ಲರೂ ಬಂದು ಇಲ್ಲಿನ ಪ್ರಯೋಜನಗಳನ್ನು ಪಡೆಯುವುದಕ್ಕೆ ಅವರಿಗೆ ಅವಕಾಶವಿಲ್ಲ. ನಮ್ಮ ಭಾಷೆಯು ಈಗ ಕನ್ನಡ ಭಾಷೆ ಯಲ್ಲ. ಈಗ ಅದು ಇಂಗ್ಲಿಷ್ ಭಾಷೆಯಾಗಿಬಿಟ್ಟಿದೆ. ನಮ್ಮ ವಿಶ್ವವಿದ್ಯಾನಿಲಯದಲ್ಲಿ ಪಠ್ಯಪುಸ್ತಕಗಳು ಇಂಗ್ಲಿಷ್ ಭಾಷೆಯಲ್ಲಿರುವುದರಿಂದ ಹೊರಗಿನವರು ಇಲ್ಲಿಗೆ ಬರುವ ಹಾಗಿಲ್ಲ. ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಭಾಷೆಯಲ್ಲಿಯೇ ಎಲ್ಲಾ ಪಾಠ ಗಳೂ ನಡೆಯುವಂತೆ ಮಾಡಿದರೆ, ಅಥವಾ ಪಠ್ಯಪುಸ್ತಕಗಳೆಲ್ಲವೂ ಕನ್ನಡದಲ್ಲಿಯೇ ಇರಬೇಕೆಂದು ಏರ್ಪಡಿಸಿದರೆ, ಹೊರಗಿನವರು ಇಲ್ಲಿಗೆ ಬರುವುದಕ್ಕಾಗಲಿ ಅಥವಾ ಇತರ ಕಡೆಗಳಲ್ಲಿರುವ ಕಾಲೇಜುಗಳು ನಮ್ಮ ವಿಶ್ವವಿದ್ಯಾನಿಲಯಕ್ಕೆ ಸೇರುವಂತೆ ಮಾಡುವುದಕ್ಕಾಗಲಿ ಆಗುವುದಿಲ್ಲವೆಂದು ಹೇಳಬಾರದು. ಮುಖ್ಯವಾಗಿ ಒಂದು ಅಂಶವನ್ನು ತಾವು ಗಮನದಲ್ಲಿಡಬೇಕು. ಇದರಿಂದ ಕರ್ಣಾಟಕ ವಿಶ್ವವಿದ್ಯಾನಿಲ ಯವು ಬೆಳೆಯುತ್ತದೆ. ಅದು ಹಾಗೆ ಬೆಳೆದ ಹಾಗೆಲ್ಲಾ ಕರ್ಣಾಟಕ ಏಕೀಕರಣವಾಗು ವುದಕ್ಕೆ ಕಾರ್ಯರಂಗದಲ್ಲಿನ ಬಹಳಮಟ್ಟಿನ ಕೆಲಸ ಮಾಡಿದಂತಾಗುತ್ತದೆ.

ಇದೂ ಅಲ್ಲದೆ, ಕನ್ನಡದ ಲಿಪಿಯನ್ನು ಮತ್ತಷ್ಟು ಅಭಿವೃದ್ಧಿಗೆ ತರುವುದ ಕ್ಕಾಗಿಯೂ ಮತ್ತು ಕನ್ನಡ ಲಿಪಿಯಲ್ಲಿರುವ ಅಕ್ಷರಗಳನ್ನು ಕಡಮೆಮಾಡುವುದ

ಕ್ಕಾಗಿಯೂ ಲಿಪಿ ಸಂಸ್ಕರಣ ಕಾರ್ಯವು ನಡೆಯುತ್ತಿದೆ. ಈಗಿರುವ ೫೨ ಅಕ್ಷರ ಗಳನ್ನು ಕಡಮೆಮಾಡಿ ಲಿಪಿ ಸಂಸ್ಕರಣಕ್ಕೆ ತಕ್ಕ ಏರ್ಪಾಡು ನಡೆಯುತ್ತಿದೆ. ಇಷ್ಟೆಲ್ಲಾ ಆದಮೇಲೆ ನಮ್ಮ ಉದ್ದೇಶಗಳೆಲ್ಲವೂ ಸಫಲವಾಗಬೇಕಾದರೆ, ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಭಾಷೆಯ ಪಠ್ಯಪುಸ್ತಕಗಳನ್ನು ಏರ್ಪಡಿಸುವ ಅವಕಾಶ ವನ್ನು ಕಲ್ಪಿಸಿಕೊಡುವುದು ಅತ್ಯಾವಶ್ಯಕವೆಂದು ನಾನು ತಿಳಿದಿದ್ದೇನೆ.

ಇನ್ನು ಪುಸ್ತಕಗಳ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಈಗ ನಮ್ಮಲ್ಲಿ ಪ್ರೊಫೆಸರುಗಳೂ ಮತ್ತು ಅಸಿಸ್ಟೆಂಟ್ ಪ್ರೊಫೆಸರುಗಳೂ ಬಹು ದಕ್ಷರಾದವರಿದ್ದಾರೆ. ತಾವೇನೋ ಕನ್ನಡ ಭಾಷೆಯಲ್ಲಿ ಸರಿಯಾದ ಪುಸ್ತಕಗಳ ಕೊರತೆಯುಂಟಾಗಿದೆಯೆಂದು ಹೇಳಿದಿರಿ. ಈಗ ಜೀವಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿ ಶಾಸ್ತ್ರ, ಮನಶ್ಯಾಸ್ತ್ರ—ಇವೇ ಮುಂತಾದ ಶಾಸ್ತ್ರಗಳ ಮೇಲೆ ಪುಸ್ತಕಗಳನ್ನು ಕನ್ನಡದಲ್ಲಿ ಆಗಲೇ ಬರೆದಿದ್ದಾರೆ. ಅವರು ಹೈಸ್ಕೂಲ್ ದರ್ಜೆಗೆ ತಕ್ಕಂತಹ ಪುಸ್ತಕ ಗಳನ್ನು ಈಗ ಎಷ್ಟೆಷ್ಟೋ ಬರೆದಿದ್ದಾರೆ. ಅವರನ್ನು ಕಾಲೇಜಿನ ದರ್ಜೆಗೂ ಬರೆಯ ಬೇಕೆಂದು ಕೇಳಿದರೆ ಅವರು ಖಂಡಿತವಾಗಿಯೂ ಬರೆಯುತ್ತಾರೆ.

ಇನ್ನೊಂದು ವಿಚಾರ. ನಮ್ಮ ಭಾಷೆಯಲ್ಲಿ ಸರಿಯಾದ ಶಬ್ದಗಳು ಸಿಕ್ಕುವುದಿಲ್ಲ ವೆಂದು ಒಂದು ವಾದ ಬರಬಹುದು. ಈಗಾಗಲೇ ಘನ ಸರ್ಕಾರದವರು ಕನ್ನಡ ನಿಘಂಟನ್ನು ತಯಾರುಮಾಡಲು ವಿದ್ವಾಂಸರ ಸಮಿತಿಯನ್ನೇರ್ಪಡಿಸಿದ್ದಾರೆ. ಅದು ಮುಖಾಂತರ ನಮಗೆ ಶಬ್ದಗಳೆಲ್ಲಾ ದೊರಕುವಂತೆ ಮಾಡಿಕೊಳ್ಳಬಹುದು. ಅಲ್ಲದೆ ನಮ್ಮಲ್ಲಿ ಎಷ್ಟೋ ಪಂಡಿತರೂ ವಿದ್ವಾಂಸರೂ ಇದ್ದಾರೆ. ಅವರುಗಳನ್ನು ಪದಗಳನ್ನು ಬೇಕೆಂದು ಕೇಳಿದರೆ ಜೋಡಿಸಿ ಕೊಡುತ್ತಾರೆ. ಹೀಗೆ ಜೋಡಿಸಿಕೊಡುವುದರಲ್ಲಿ ಯಾವ ಬಾಧಕವೂ ಇಲ್ಲ. ಆದುದರಿಂದ ಒಟ್ಟಿನ ಮೇಲೆ ಕನ್ನಡವನ್ನು ಶಿಕ್ಷಣಭಾಷೆ ಯನ್ನಾಗಿ ಮಾಡುವುದರಲ್ಲಿ ಯಾವ ತೊಂದರೆಯೂ ಇಲ್ಲವೆಂದು ಹೇಳಿ ಈ ನಿರ್ಣಯ ವನ್ನು ನಾನು ಅನುಮೋದಿಸುತ್ತೇನೆ.

### ಶ್ರೀಮಾನ್ ಭೂಪಾಳಂ ಆರ್. ಚಂದ್ರಶೇಖರಯ್ಯನವರು

ಸ್ವಾಮಿ, ಶ್ರೀಮನ್ಮಹಾರಾಜರವರು ಈಗ ಕೆಲವು ದಿವಸಗಳ ಹಿಂದೆ ಅಂದರೆ ಆಗಸ್ಟ್ ೩ ರಲ್ಲಿ ಯುದ್ಧದ ಸಂಬಂಧದಲ್ಲಿ ಒಂದು ಸಂದೇಶವನ್ನು ದಯಪಾಲಿಸಿದಾಗ ಆ ವಿಷಯದಲ್ಲಿ ಒಟ್ಟು ಕರ್ಣಾಟಕದ ೧೩೦ ಲಕ್ಷ ಪ್ರಜೆಗಳಿಗೇ ಯಾವ ರೀತಿಯ ಸಂತೋಷವುಂಟಾಯಿತೆಂಬುದು ಈ ಸಭಾಸದಸ್ಯರೆಲ್ಲರಿಗೂ ತಿಳಿದಿರುವ ಅಂಶವಾಗಿದೆ. ಕರ್ಣಾಟಕ ಸಿಂಹಾಸನಾಧೀಶ್ವರರೂ ನಮ್ಮನ್ನಾಳುವ ಮಹಾಸ್ವಾಮಿಯವರೂ ಆದ ಶ್ರೀಮನ್ಮಹಾರಾಜರವರ ಮಾತೃಭಾಷೆಯಾದ ಕನ್ನಡಕ್ಕೆ ಒಟ್ಟು ಸಂಸ್ಥಾನದಲ್ಲಿ

ಸಂಪೂರ್ಣ ಪ್ರೋತ್ಸಾಹವನ್ನು ಕೊಡಬೇಕೆಂದು ಇಷ್ಟು ನಿಧಾನವಾಗಿ ಈ ಸಭೆಯಲ್ಲಿ ಇದಕ್ಕೆ ಸಂಬಂಧಪಟ್ಟಂತೆ ಒಂದು ನಿರ್ಣಯವು ಬಂದಿತಲ್ಲಾ ಎಂದು ನಾವು ವಿಷಾದಪಡಬೇಕಾಗಿದೆ. ಶ್ರೀಮಾರ್ ಮಿರ್ಜಾ ಅಜೀಜುಲ್ಲಾ ಬೇಗ್‌ರವರು ಈ ವಿಚಾರವಾಗಿ ಮಾಡಿದ ಭಾಷಣದಲ್ಲಿ ಪೂರ್ವಾರ್ಧವನ್ನು ಮಾತ್ರ ನಾನು ಸಂಪೂರ್ಣವಾಗಿ ಅನುಮೋದಿಸುತ್ತೇನೆ. ಆದರೆ ಉತ್ತರಾರ್ಧದಲ್ಲಿ ಕೆಲವು ಅನವಶ್ಯವಾದ ಅಂಶಗಳನ್ನು ಸೇರಿಸಿಕೊಂಡು ಅವರು ಈ ನಿರ್ಣಯಕ್ಕೆ ವಿರೋಧವನ್ನು ವ್ಯಕ್ತಪಡಿಸಿದರು. "ಈಗ ಕನ್ನಡವು ಭರತಖಂಡಕ್ಕೆ ರಾಷ್ಟ್ರಭಾಷೆ ಆಗುವುದಿಲ್ಲವೆಂದೂ, ಉರ್ದುಭಾಷೆಯೇ ಏಕಮಾತ್ರ ರಾಷ್ಟ್ರಭಾಷೆಯಾಗಬೇಕೆಂದೂ" ಹೇಳಿದರು. ನಮ್ಮಮಟ್ಟಿಗೆ ನಾವು ಹೇಳುವುದಾದರೆ ಈಗ ನಿಜಾಮರ ರಾಜ್ಯದಲ್ಲಿ ಹೇಗೆ ಉರ್ದು ಭಾಷೆಯು ರಾಜಭಾಷೆ, ದೇಶಭಾಷೆ ಮತ್ತು ಶಿಕ್ಷಣಭಾಷೆಯಾಗಿದೆಯೋ ಅದೇ ರೀತಿಯಾಗಿ ನಮ್ಮ ಮೈಸೂರು ಸಂಸ್ಥಾನದಲ್ಲಿ ಕನ್ನಡವು ರಾಜಭಾಷೆಯಾಗಿದೆ, ಮತ್ತು ಪ್ರಚಾರಕ್ಕೆ ಬರತಕ್ಕ ಭಾಷೆಯಾಗಿದೆ. ನಮ್ಮ ಶ್ರೀಮನ್ಮಹಾರಾಜರವರ ಪ್ರಜೆಗಳಾಗಿ, ರಾಜಭಕ್ತಿಯುತರಾಗಿರುವವರೆಲ್ಲರೂ ಕನ್ನಡವನ್ನು ಕಲಿಯಲೇಬೇಕು. ಈ ವಿಷಯದಲ್ಲಿ ಒಂದು ಸೂಚನೆಯು ಅವರಿಂದ ಬಂದಿದೆ. ಶ್ರೀಮಾರ್ ರಸೂಲ್‌ರವರೇ ಈಗ ಎರಡು ವರ್ಷಗಳ ಕೆಳಗೆ ಇದೇ ಪ್ರಜಾಪ್ರತಿನಿಧಿ ಸಭೆಯಲ್ಲಿ ಎಲ್ಲಾ ಉರ್ದು ಪಾಠಶಾಲೆಗಳಲ್ಲಿಯೂ ಕನ್ನಡಭಾಷೆಯನ್ನು ಕಡ್ಡಾಯವಾಗಿ ಕಲಿಸಬೇಕೆಂದು ಹೇಳಿದರು. ಅದನ್ನು ಅಭಿನಂದಿಸಿ ಸರ್ ಮಿರ್ಜಾ ಇಸ್ಮಾಯಿಲ್‌ರವರು ಒಂದು ಅಮೋಘವಾದ ಸಲಹೆಯನ್ನು ಆಗ ಕೊಟ್ಟರು. ಅದನ್ನನುಸರಿಸಿ ನಡೆದರೆ ಉರ್ದು ಭಾಷೆಯನ್ನು ಕಲಿಯುವ ಹುಡುಗರಿಗೆ ಬಹಳ ಅನುಕೂಲವಾಗುತ್ತದೆ. ಕನ್ನಡಭಾಷೆಯು ಹುಡುಗರು ಚೆನ್ನಾಗಿ ಕಲಿತುಕೊಳ್ಳುವುದಕ್ಕೆ ಸಾಧ್ಯವಾದ ಭಾಷೆಯಾಗಿದೆ. ಉಪಾಧ್ಯಾಯರ ದೃಷ್ಟಿಯಿಂದ ಹೇಳುವುದಾದರೆ ಅವರಿಗೂ ಕೂಡ ಕನ್ನಡದಲ್ಲಿ ಬೋಧನೆಮಾಡುವುದು ಬಹಳ ಸುಲಭ. ಅವರೂ ವಿಷಯವನ್ನು ತಿಳಿದುಕೊಂಡು ಬೋಧನೆಮಾಡುತ್ತಾರೆ. ನನ್ನ ಸ್ನೇಹಿತರೊಬ್ಬರು ಗಣಿತಶಾಸ್ತ್ರವನ್ನು ಕನ್ನಡದಲ್ಲಿ ಬರೆದಿದ್ದಾರೆ. ಅವರು ಆ ಪುಸ್ತಕವನ್ನು ಕನ್ನಡದಲ್ಲಿ ಬರೆದಮೇಲೆ ಗಣಿತಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳನ್ನು ಮೊದಲಿಗಿಂತ ಚೆನ್ನಾಗಿ ತಿಳಿದುಕೊಂಡರಂತೆ. ಬರೀ ಇಂಗ್ಲಿಷಿನಲ್ಲಿ ಅದನ್ನು ಬರೆಯುತ್ತಿದ್ದಾಗ ಮಕ್ಕೀಕಾಮಕ್ಕೀ ಎಂಬಂತೆ ಎಲ್ಲವನ್ನೂ ಬರೆದಿಡುತ್ತಿದ್ದರು. ಕನ್ನಡದಲ್ಲಿ ಬರೆಯುವಾಗ ಶಾಸ್ತ್ರದ ಅನೇಕ ಹೊಸ ವಿಷಯಗಳು ಅವರಿಗೆ ಭಾಸವಾದುವೆಂದೂ ಹೇಳಿದರು. ಆದುದರಿಂದ ತಾವು ಈ ನಿರ್ಣಯವನ್ನು ದೇಶದ ದೃಷ್ಟಿಯಿಂದಲೇ ಅಲ್ಲದೆ ಉಪಾಧ್ಯಾಯರ ಮತ್ತು ವಿದ್ಯಾರ್ಥಿಗಳ ದೃಷ್ಟಿಯಿಂದಲೂ

ಒಪ್ಪಿಕೊಳ್ಳಬೇಕೆಂದು ನಾನು ಹೇಳುತ್ತೇನೆ. ತಮಗೆ ಬರಬಹುದಾದ ಒಂದು ಅಡಚಣೆಯೇನೆಂದರೆ ಪುಸ್ತಕಗಳ ಅಭಾವ. ಪುಸ್ತಕಗಳನ್ನು ಬರೆಯಲಿ, ಆಮೇಲೆ ಇದನ್ನು ಆಚರಣೆಗೆ ತರೋಣವೆಂದು ಹೇಳಬಹುದು. ಈಗಿನ ನಮ್ಮ ವಿದ್ಯಾಮಂತ್ರಿಗಳು ಕನ್ನಡದ ವಿಷಯದಲ್ಲಿ ಹೆಚ್ಚಿನ ಅಭಿಮಾನವುಳ್ಳವರಾಗಿದ್ದಾರೆ. ಅವರ ಭಾಷಣಗಳನ್ನು ನಾನು ಅನೇಕ ಸಲ ಕುತೂಹಲದಿಂದ ಕೇಳಿದ್ದೇನೆ. ಕನ್ನಡದ ವಿಷಯದಲ್ಲಿ ವಿಶೇಷ ಆಸಕ್ತಿಯುಳ್ಳವರು ಅವರು. ಆದಕ್ಕೆ ಅವರಿಗೆ ನಮ್ಮ ಅಭಿನಂದನೆಗಳು. ಇಂಥಾ ವಿದ್ಯಾಮಂತ್ರಿಗಳಿರುವುದು ನಮ್ಮ ಅದೃಷ್ಟವೇ ಸರಿ. ತಾವು ಈ ನಿರ್ಣಯದ ತತ್ವವನ್ನು ಒಪ್ಪಿಕೊಂಡು ಇದನ್ನು ಆಚರಣೆಗೆ ತರಬೇಕೆಂದು ಅಪ್ಪಣೆಮಾಡಿದರೆ ಪುಸ್ತಕಗಳು ತಾವಾಗಿಯೇ ಬರುತ್ತವೆ. ಹಾಗಿಲ್ಲದೆ ಪುಸ್ತಕಗಳು ಬರಲೆಂದು ಹೇಳುತ್ತಾ ಹಲವಾರು ವರ್ಷಗಳಿದ್ದರೂ ಅವುಗಳು ಬರುವುದೇ ಇಲ್ಲ. ಆದಕಾರಣ, ತಾವು ಹಾಗೆ ಹೇಳದೆ, ಆದಷ್ಟು ಜಾಗ್ರತೆಯಾಗಿ ಇದನ್ನು ಜಾರಿಗೆ ತರಬೇಕೆಂದು ವಿನಂತಿ.

## ಶ್ರೀಮರ್ಜಾ ಎಚ್. ಹುಸೇನ್ ಆಲಿಬೇಗ್‌ರವರು

ಸ್ವಾಮಿ, ಈ ನಿರ್ಣಯದ ಆಶಯವು "ಕನ್ನಡಕ್ಕೆ ಒಂದು ಪ್ರಧಾನ ಸ್ಥಾನವನ್ನು ಕೊಡಬೇಕು, ನಮ್ಮ ಕನ್ನಡವು ಎಲ್ಲರಿಗೂ ತಿಳಿಯುವ ಹಾಗೆ ಮಾಡಬೇಕು, ನಮ್ಮ ಸಂಸ್ಥಾನದಲ್ಲಿ ಕನ್ನಡವು ಒಂದು ಮುಖ್ಯ ಭಾಷೆಯಾಗಬೇಕು" ಎಂದು. ತಾವು ಹಾಗೆ ಮಾಡಿದ ಪಕ್ಷದಲ್ಲಿ ಇಂಗ್ಲಿಷ್ ಭಾಷೆಯು ಬಹಳ ಮಟ್ಟಿಗೆ ಕಡಿಮೆ ಮಟ್ಟಕ್ಕೆ ಇಳಿಯುತ್ತದೆ. ಈ ನಿರ್ಣಯದಂತೆ ಸ್ಕೂಲು ಮತ್ತು ಕಾಲೇಜು ತರಗತಿಗಳಲ್ಲಿ ಕನ್ನಡ ಬರದೆ ಇರತಕ್ಕವರಿಗಾಗಿ ಒಂದೊಂದು ಶಾಖೆಯನ್ನಿಡಬೇಕಾಗುತ್ತದೆ. ಉಳಿದ ಎಲ್ಲ ಶಾಖೆಗಳಲ್ಲಿ ಕನ್ನಡವೇ ಶಿಕ್ಷಣಭಾಷೆಯಾಗಿರಬೇಕಾಗುತ್ತದೆ. ಇದು ಒಂದು ವಿಷಯ. ನಮ್ಮ ವ್ಯಾಪಾರ ವ್ಯವಹಾರಗಳನ್ನು ಸಮರ್ಪಕವಾದ ರೀತಿಯಲ್ಲಿ ನಡೆಯಿಸಬೇಕಾದರೆ ಇಂಗ್ಲಿಷ್ ಭಾಷೆಯು ನಮಗೆ ಬರದೇ ಇದ್ದರೆ ಬಹಳ ಕಷ್ಟವೆಂದು ನಾನು ತಿಳಿಯುತ್ತೇನೆ. ಅಂತೂ ಬೇರೆ ಬೇರೆ ದೇಶಗಳೊಂದಿಗೆ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಬೇಕಾದರೆ, ಇಂಗ್ಲಿಷ್ ಭಾಷಾಪರಿಚಯವು ನಮಗೆ ತಕ್ಕಷ್ಟು ಇದ್ದೇ ಇರಬೇಕು. ಕೆಲವು ಮಹನೀಯರು ಹೇಳಿದರು, ಹೈದರಾಬಾದಿನಲ್ಲಿ ಉರ್ದು ಭಾಷೆಗೆ ಯಾವ ರೀತಿಯ ಪ್ರಾಧಾನ್ಯವನ್ನು ಕೊಟ್ಟಿದ್ದಾರೆಯೋ, ಅದೇ ರೀತಿ ಇಲ್ಲಿ ಕನ್ನಡಕ್ಕೆ ಪ್ರಾಧಾನ್ಯವನ್ನು ಕೊಡಬೇಕೆಂದು. ಇದು ಸರಿಯಾದ ವಾದವಲ್ಲ. ಕನ್ನಡ ಭಾಷೆಯಿಂದ ನಮ್ಮ ಅಕ್ಕಪಕ್ಕದ ಪ್ರಾಂತಗಳಾದ ಮದರಾಸು ಮತ್ತು ಬೊಂಬಾಯಿ ಆಧಿಪತ್ಯಗಳಲ್ಲಿ ಏನೂ ಪ್ರಯೋಜನವಾಗುವಂತಿಲ್ಲ. ಆ ಪ್ರಾಂತ್ಯಗಳೊಂದಿಗೆ ನಾವು ವ್ಯಾಪಾರ ವ್ಯವಹಾರಗಳನ್ನು ನಡೆಯಿಸಲು ಇದರಿಂದ ತುಂಬಾ

ಕಷ್ಟವಾಗುತ್ತದೆ. ಉರ್ದು ಭಾಷೆಯು ಇಂಗ್ಲಿಷ್ ಭಾಷೆಯಂತೆ ಪ್ರಪಂಚದ ನಾನಾ ಭಾಗಗಳಲ್ಲಿ ಪ್ರಚಾರದಲ್ಲಿರುವ ಭಾಷೆ. ಅಂತೂ ನಾವು ಯಾವ ವ್ಯವಹಾರ ನಡೆಯಿಸ ಬೇಕಾದರೂ ನಮಗೆ ಇಂಗ್ಲಿಷ್ ಬೇಕು. ಬಹಳ ದಿವಸಗಳಿಂದಲೂ ಈ ಭಾಷೆಯು ಇಲ್ಲಿ ರೂಢಿಗೆ ಬಂದಿದೆ. ಆದರಿಂದ ನಾವು ಎಷ್ಟೋ ಏಳಿಗೆಗೆ ಬಂದಿದ್ದೇವೆ. ಹೀಗಿರು ವಲ್ಲಿ ಕನ್ನಡವನ್ನು ಮುಖ್ಯ ಭಾಷೆಯೆಂದು ಭಾವನೆಮಾಡಿ ಅದನ್ನು ಎಲ್ಲಾ ಪಾಠ ಶಾಲೆಗಳಲ್ಲಿಯೂ ಮುಖ್ಯ ಭಾಷೆಯೆಂದು ಪರಿಗಣಿಸುವುದಾದರೆ, ಅದೇ ರೀತಿಯಲ್ಲಿ ಸಂಸ್ಕೃತವನ್ನೂ ಏಕೆ ಪರಿಗಣಿಸಬಾರದು ? ಈ ರೀತಿಯಲ್ಲಿ ನೋಡುತ್ತಾಹೋದರೆ, ಯಾವ ಭಾಷೆಯನ್ನೂ ನಾವು ಮುಖ್ಯವಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಆದುದ ರಿಂದ ತಾತ್ಕಾಲಿಕವಾಗಿ ನಮ್ಮಲ್ಲಿ ಯಾವ ಭಾಷೆಯು ಸರ್ಕಾರಿ ವ್ಯವಹಾರದ ಭಾಷೆಯಾಗಿದೆಯೋ ಮತ್ತು ವ್ಯಾಪಾರೋದ್ಯಮಗಳಲ್ಲಿ ವಿಶೇಷ ಬಳಕೆಯಲ್ಲಿದೆಯೋ ಆ ಇಂಗ್ಲಿಷ್ ಭಾಷೆಯನ್ನೇ ನಾವು ನಮ್ಮ ಸ್ಕೂಲು ಮತ್ತು ಕಾಲೇಜುಗಳ ಮುಖ್ಯ ಭಾಷೆಯನ್ನಾಗಿ ಪರಿಗಣಿಸಬೇಕೆಂದೂ, ಆ ಭಾಷೆಯೇ ಇಂಗ್ಲಿಷ್ ಭಾಷೆ ಯಾಗಿರಬೇಕೆಂದೂ ನನ್ನ ಅಭಿಲಾಷೆ.

ಅಲ್ಲದೆ ಇನ್ನೊಂದು ವಿಷಯ. ಈಗ ಕೆಲವು ಸದಸ್ಯರು ಹೇಳಿದರು, ಹೈ ಸ್ಕೂಲಿ ನಲ್ಲಿ ಕನ್ನಡದಲ್ಲಿ ಬೋಧನೆ ಮಾಡುತ್ತಿರುವುದು ಸಮರ್ಪಕವಾಗಿ ನಡೆಯುತ್ತಿರು ವುದರಿಂದ ಅದೇ ರೀತಿಯಾಗಿ ಕಾಲೇಜುಗಳಲ್ಲಿಯೂ ಏರ್ಪಡಿಸಿದರೆ ಅನುಕೂಲ ವಾಗಿರುತ್ತದೆಂದು. ಅವರಿಗೆ ಬಹುಶಃ ಎಲ್ಲಾ ಹೈ ಸ್ಕೂಲುಗಳಲ್ಲಿಯೂ ಈಗ ವಾಸ್ತವವಾಗಿ ಹೇಗೆ ಪಾಠಕ್ರಮಗಳು ನಡೆಯುತ್ತಿವೆಯೆಂಬುದು ತಿಳಿದಿರಬಹುದು. ಈಗ ಅನೇಕ ಹೈ ಸ್ಕೂಲುಗಳಲ್ಲಿ ಕನ್ನಡದಲ್ಲಿ ಪಾಠವನ್ನು ಮಾಡುತ್ತಲೇ ಇಲ್ಲ; ಇಂಗ್ಲಿಷಿನಲ್ಲಿಯೇ ಬೋಧಿಸುತ್ತಿದ್ದಾರೆ. ಇದನ್ನು ನೋಡಿದರೆ, ನೀವು ಕನ್ನಡ ದಲ್ಲಿಯೇ ಪಾಠ ಹೇಳಿಕೊಡಬೇಕೆಂದು ಗೊತ್ತುಮಾಡಿದ್ದರೂ ವಸ್ತುತಃ ಹಾಗೆ ನಡೆಯುತ್ತಿಲ್ಲವೆಂಬುದು ಗೊತ್ತಾಗುತ್ತದೆ.

ಅಲ್ಲದೆ, ಇಂಗ್ಲಿಷ್ ಭಾಷೆಯ ಆವಶ್ಯಕತೆ ನಮಗೆ ಎಷ್ಟಿದೆಯೆಂಬುದನ್ನು ನಾನು ಆಗಲೇ ತಮಗೆ ತಿಳಿಸಿದ್ದೇನೆ. ಯಾವ ವ್ಯಾಪಾರವೇ ಆಗಲಿ ಅದು ಅಭಿ ವೃದ್ಧಿಗೆ ಬರಬೇಕಾದರೆ ಇಂಗ್ಲಿಷಿನ ಆವಶ್ಯಕತೆಯು ಹೆಚ್ಚು ಹೆಚ್ಚಾಗಿ ಬೇಕಾಗಿದೆ. ಹೀಗಿರುವಲ್ಲಿ ತಾವು ಕನ್ನಡದಲ್ಲಿಯೇ ಎಲ್ಲಾ ಪಾಠಗಳನ್ನೂ ಹೇಳಿಕೊಡಲು ಪ್ರಾರಂಭಮಾಡಿದರೆ, ಹಾಗೆ ವ್ಯಾಸಂಗಮಾಡಿದವರು ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆ ಯಾದರೂ ಇಂಗ್ಲಿಷಿನಲ್ಲಿ ಸರಿಯಾಗಿ ಒಂದು ಭಾಷಣ ಮಾಡುವುದಕ್ಕೂ ಅವರಿಗೆ ಬರುವುದಿಲ್ಲ. ಆದುದರಿಂದ, ನಮ್ಮ ದೇಶದಲ್ಲಿ ತಾವು ಇಂಗ್ಲಿಷಿಗೆ ಕೊಟ್ಟಿರುವ ಅಂತ ಸ್ತನ್ನು ಮತ್ತಷ್ಟು ಹೆಚ್ಚು ಮಾಡಬೇಕಾದುದು ಅವಶ್ಯಕವೆಂದು ನಾನು ಹೇಳುತ್ತೇನೆ.

## ಶ್ರೀಮಾನ್ ಜಿ. ಮುಹಮ್ಮದ್ ಇಮಾಂರವರು (ವಿದ್ಯಾಸಚಿವರು)

ತಾವುಗಳೆಲ್ಲರೂ ಕನ್ನಡಭಾಷೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡತಕ್ಕ ವಿಚಾರದಲ್ಲಿ ಮಾತನಾಡಿದುದೆಲ್ಲವನ್ನೂ ಸಾವಧಾನದಿಂದ ಕೇಳಿದ್ದೇನೆ. ಇದರಿಂದ ಒಂದು ವಿಷಯವು ವ್ಯಕ್ತಪಡುತ್ತದೆ. ಅದೇನೆಂದರೆ, ನಮ್ಮ ಮೈಸೂರು ಸಂಸ್ಥಾನದಲ್ಲಿರುವವರೆಲ್ಲರೂ, ಅವರು ಯಾವ ಮತಕ್ಕೆ ಅಥವಾ ಯಾವ ಪಂಗಡಕ್ಕೆ ಸೇರಿದ್ದರೂ, ಅವರೆಲ್ಲರೂ ಉಚ್ಚ ಕನ್ನಡ ಅಭಿಮಾನಗಳೆಂಬುದು. ಸರ್ವರೂ ಕನ್ನಡದ ಏಳಿಗೆಗಾಗಿ ಆಸಕ್ತಿವಹಿಸಿರುವುದು ಶ್ಲಾಘನೀಯವಾದುದೆಂದು ನಾನು ತಿಳಿದಿದ್ದೇನೆ. ಅದೇ ರೀತಿಯಲ್ಲಿಯೇ ಸರ್ಕಾರದವರೂ ಕನ್ನಡದ ಪ್ರಾಶಸ್ತ್ಯಕ್ಕೆ, ಕನ್ನಡದ ಅಭಿವೃದ್ಧಿಗೆ ಮತ್ತು ಕನ್ನಡಕ್ಕೆ ಒಂದು ಸ್ಥಾನಮಾನವನ್ನು ಕಲ್ಪಿಸಿಕೊಡುವುದಕ್ಕೆ ಬಹಳ ಆಸಕ್ತಿಯುಳ್ಳವರಾಗಿದ್ದಾರೆಂಬುದನ್ನೂ ತಮಗೆ ಬಹಳ ಸಂತೋಷದಿಂದ ತಿಳಿಸುತ್ತೇನೆ. ಶ್ರೀಮಾನ್ ಟಿ. ಎಸ್. ರಾಜಗೋಪಾಲ ಐಯಂಗಾರ್ಯರು ಹೇಳಿದರು, ನಮ್ಮ ಇಂಡಿಯಾ ದೇಶದಲ್ಲಿ ಸ್ವಭಾಷೆಯನ್ನು ಬಿಟ್ಟು ಪರಭಾಷೆಯ ಮೂಲಕ ಸ್ಕೂಲುಗಳಲ್ಲಿಯೂ, ಕಾಲೇಜುಗಳಲ್ಲಿಯೂ ಬೋಧನೆಯು ನಡೆಯುತ್ತಿದೆಯೆಂದು. ನಮ್ಮ ಇಂಡಿಯಾ ದೇಶದಲ್ಲಿ ಕೆಲವು ದೇಶಾಭಿಮಾನಿಗಳು ತಮ್ಮ ತಮ್ಮ ಸ್ವಭಾಷೆಯನ್ನು ಬಿಟ್ಟು ಬೇರೆ ಭಾಷೆಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಮುಖ್ಯವಾಗಿ ನಮ್ಮಲ್ಲಿ ನಮ್ಮ ಸ್ವಭಾಷೆಗೆ ಬದಲಾಗಿ ಇಂಗ್ಲಿಷ್ ಭಾಷೆಗೆ ಹೆಚ್ಚಿಗೆ ಪ್ರಾಶಸ್ತ್ಯ ಕೊಟ್ಟಿರುವುದರಿಂದ ದೇಶಕ್ಕೆ ಒಳ್ಳೆಯದಾಗಿದೆಯೋ, ಕೆಟ್ಟದ್ದಾಗಿದೆಯೋ ಆ ಚರ್ಚೆಗೆ ನಾನು ಹೋಗುವುದಿಲ್ಲ. ತಾವು ಹೇಳುವ ಹಾಗೆ ಕನ್ನಡಭಾಷೆಯು ನಮ್ಮ ಸ್ವಭಾಷೆ, ನಮ್ಮ ದೇಶಭಾಷೆ, ನಮ್ಮ ರಾಜಭಾಷೆ ಮತ್ತು ರಾಜಕೀಯ ಭಾಷೆ. ಇದರಲ್ಲಿ ಸ್ವಲ್ಪವೂ ಭಿನ್ನಾಭಿಪ್ರಾಯವಿಲ್ಲ. ಅದಕ್ಕೆ ತಕ್ಕಷ್ಟು ಪ್ರೋತ್ಸಾಹವನ್ನು ಕೊಡುವುದೂ ಮತ್ತು ನಮ್ಮ ಸಂಸ್ಥಾನದಲ್ಲಿ ಅದಕ್ಕೆ ತಕ್ಕ ಸ್ಥಾನವನ್ನು ಕಲ್ಪಿಸಿಕೊಡುವುದೂ ನಮ್ಮ ಆದ್ಯ ಕರ್ತವ್ಯವೆಂದು ನಾನು ತಿಳಿದಿದ್ದೇನೆ. ಶ್ರೀಮಾನ್ ಎ. ಎನ್. ರಾಮರಾಯರು ಹೇಳಿದಂತೆ ಕನ್ನಡವು ಬಹು ಪೂರ್ವಕಾಲದ ಲಾಗಾಯಿತು ಬಳಕೆಯಲ್ಲಿದೆ. ಕನ್ನಡಭಾಷೆಯು ಈಜಿಪ್ಟ್‌ನಲ್ಲಿ ಬಳಕೆಯಲ್ಲಿತ್ತೆಂಬುದಕ್ಕೂ ಆಧಾರಗಳು ದೊರೆತಿವೆ. ಹಿಂದಿನ ಕಾಲದಲ್ಲಿ ಬಹು ಪ್ರಖ್ಯಾತರಾದ ಕನ್ನಡ ಕವಿಗಳೂ ಮತ್ತು ಇತರ ಗ್ರಂಥಕರ್ತರೂ ಇದ್ದರೆಂಬುದು ನಮಗೆಲ್ಲಾ ತಿಳಿದ ವಿಷಯವೇ ಆಗಿದೆ. ಕುಮಾರವ್ಯಾಸ ಮುಂತಾದ ಪ್ರಸಿದ್ಧ ಕನ್ನಡ ಕವಿಗಳ ಹೆಸರನ್ನು ನಾವು ನಿತ್ಯವೂ ಸ್ಮರಿಸಲೇಬೇಕಾಗಿದೆ. ಅತ್ಯುನ್ನತ ಸ್ಥಿತಿಯಲ್ಲಿದ್ದ ಕನ್ನಡ ನುಡಿಯು ಅವನತಿಗೆ ಬರಲು ಪ್ರಾರಂಭವಾಗಿ ಈಗ ಸುಮಾರು ೧೫೦ ವರ್ಷಗಳಾದುವು.

ಕನ್ನಡಕ್ಕೆ ಒಂದಾನೊಂದು ಕಾಲದಲ್ಲಿದ್ದ ಸ್ಥಾನವು ಈಗ ಇಂಗ್ಲಿಷ್ ಭಾಷೆಗೆ ಬಂದಿದೆ. ಇದಕ್ಕೆ ಮುಖ್ಯ ಕಾರಣರಾರು? ಈಗ್ಗೆ ೧೫೦ ವರ್ಷಗಳ ಹಿಂದೆ ವೈಸರಾಯರವರ ಆಡಳಿತ ವರ್ಗದಲ್ಲಿ ವಿದ್ಯಾಶಾಖಾಧಿಕಾರಿಗಳಾಗಿದ್ದ ಶ್ರೀಮರ್ಾ ಮೆಕಾಲೆಯವರೇ ಇದಕ್ಕೆ ಮುಖ್ಯಕಾರಣರು. ಅವರೇ ಇಂಡಿಯಾ ದೇಶದಲ್ಲಿ ಇಂಗ್ಲಿಷ್ ಭಾಷೆಯನ್ನು ಪ್ರಚಾರಮಾಡಬೇಕೆಂದು ಹೇಳಿ ಎಲ್ಲಾ ಇಲಾಖೆಗಳಲ್ಲಿಯೂ ಇಂಗ್ಲಿಷಿಗೆ ಉತ್ತೇಜನವು ಸಿಕ್ಕುವ ಹಾಗೆ ಮಾಡಿದರು. ಅದಕ್ಕೆ ಎರಡು ಕಾರಣಗಳಿದ್ದುವು. ಮೊದಲನೆಯದಾಗಿ, ಇಂಗ್ಲಿಷರ ಆಳ್ವಿಕೆಯು ಇಂಡಿಯಾ ದೇಶಕ್ಕೆ ಬಂದ ಮೇಲೆ ಅವರು ಏರ್ಪಡಿಸಿದ ಸ್ಕೂಲುಗಳಲ್ಲಿಯೂ, ಕಾಲೇಜುಗಳಲ್ಲಿಯೂ ಇಂಗ್ಲಿಷ್ ಭಾಷೆಯನ್ನು ಬೋಧಿಸಲಾರಂಭಿಸಿದರು. ವಿಜ್ಞಾನಶಾಸ್ತ್ರ, ಗಣಿತಶಾಸ್ತ್ರ ಮತ್ತು ಅರ್ಥಶಾಸ್ತ್ರ ಮುಂತಾದುವುಗಳನ್ನು ಭಾರತೀಯರಿಗೆ ಕಲಿಸಬೇಕಾಗಿ ಬಂದಿತು. ನಮ್ಮ ಕನ್ನಡ ದೇಶದಲ್ಲಿ ಸರಿಯಾದ ಕನ್ನಡ ಪುಸ್ತಕಗಳಿಲ್ಲದುದರಿಂದ ಇವುಗಳನ್ನೆಲ್ಲಾ ಇಂಗ್ಲಿಷಿನಲ್ಲಿಯೇ ಕಲಿಸಬೇಕಾಗಿ ಬಂದಿತು. ಇಂಗ್ಲಿಷ್ ಭಾಷೆಯು ಪ್ರಚಾರಕ್ಕೆ ಬಂದುದಕ್ಕೆ ಅದೊಂದು ಕಾರಣ. ಎರಡನೆಯದಾಗಿ, ಇಂಗ್ಲಿಷ್ ಭಾಷೆಯನ್ನು ಕಲಿತವರಿಗೆ ಹೆಚ್ಚಿನ ಉತ್ತೇಜನವು ಬೇರೆ ದೊರೆಯುವುದಕ್ಕೆ ಪ್ರಾರಂಭವಾಯಿತು. ಆ ಲಾಗಾಯಿತು ಇಂಗ್ಲಿಷನ್ನು ಕಲಿತವರಿಗೆ ಅದರಲ್ಲಿಯೂ ಇಂಗ್ಲಿಷಿನಲ್ಲಿ ಹೆಚ್ಚಿನ ಪಾಂಡಿತ್ಯವಿದ್ದವರಿಗೆ ಹೆಚ್ಚಿನ ಲಾಭವೂ, ಪ್ರಾಶಸ್ತ್ಯವೂ, ದೊಡ್ಡ ದೊಡ್ಡ ಸರ್ಕಾರಿ ಹುದ್ದೆಗಳೂ, ಹಣವೂ ಸಿಕ್ಕಿ ಒಟ್ಟಿನ ಮೇಲೆ ಆರ್ಥಿಕದೃಷ್ಟಿಯಿಂದ ಇಂಗ್ಲಿಷ್ ಭಾಷೆಗೆ ಹೆಚ್ಚು ಪ್ರಾಧಾನ್ಯವುಂಟಾಯಿತು. ಇಷ್ಟೊಂದು ಸೌಕರ್ಯಗಳನ್ನೊದಗಿಸತಕ್ಕ ಇಂಗ್ಲಿಷ್ ಭಾಷೆಯನ್ನು ಜನರು ಕಲಿಯಲು ಆರಂಭಿಸಿದರು. ಕನ್ನಡ ಭಾಷೆಯು ಹಿನ್ನೆಲೆಗೆ ಸರಿಯಬೇಕಾಯಿತು. ತಮಗೆ ಸಮಾಜದಲ್ಲಿ ಗೌರವವನ್ನೂ ಜೀವನಕ್ಕೆ ಮಾರ್ಗವನ್ನೂ ಕಲ್ಪಿಸಿಕೊಡತಕ್ಕ ಭಾಷೆಯನ್ನು ಜನರು ಆದರದಿಂದ ಕಲಿತು ಕನ್ನಡ ಭಾಷೆಯನ್ನು ಅಲಕ್ಷ್ಯಮಾಡಿದರು. ಹೊಸ ಭಾಷೆಯು ಎಲ್ಲೆಲ್ಲಿಯೂ ರೂಢಿಗೆ ಬರಲು ಪ್ರಾರಂಭವಾಯಿತು. ಆಮೇಲೆ ಕ್ರಮಕ್ರಮವಾಗಿ ಇಂಗ್ಲಿಷ್ ಜನರ ಉಡುಪುಗಳೂ, ಅವರ ಉಡಿಗೆ ತೊಡಿಗೆಗಳೂ, ಅವರ ಪದ್ಧತಿಗಳೂ ಸ್ವಲ್ಪಮಟ್ಟಿಗೆ ನಮಗೂ ಬಂದುವು. ನಮ್ಮ ಮೈಸೂರು ಸಂಸ್ಥಾನದಲ್ಲಿ ಮಾತ್ರವೇ ಅಲ್ಲದೆ ಇಂಡಿಯಾ ದೇಶದ ಇತರ ಸ್ಥಳಗಳಲ್ಲಿಯೂ ಇದೇ ರೀತಿ ಇಂಗ್ಲಿಷ್ ಭಾಷೆಗೆ ಪ್ರಾಶಸ್ತ್ಯ ದೊರೆತು ಆಯಾ ಪ್ರಾಂತದ ದೇಶಭಾಷೆಯು ಹಿಂದೆ ಬೀಳಲೇಬೇಕಾಯಿತು. ನಾನು ಆಗಲೇ ಹೇಳಿದಂತೆ ಇಂಡಿಯಾ ದೇಶಕ್ಕೆ ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ವಿಜ್ಞಾನಶಾಸ್ತ್ರ, ಇವುಗಳು ಬಂದಾಗ, ಅವುಗಳು ನಮ್ಮ ಭಾಷೆಯಲ್ಲಿ ಇಲ್ಲದಿದ್ದುದರಿಂದ ಇಂಗ್ಲಿಷ್ ಭಾಷೆಯನ್ನು

ಕಲಿಯಬೇಕಾಗಿ ಬಂದಿತು. ಕಾಲಕ್ರಮೇಣ ಇಂಗ್ಲಿಷ್ ಭಾಷೆಗೆ ಹೆಚ್ಚು ಮನ್ನಣೆ ದೊರೆಯಲು ಪ್ರಾರಂಭವಾಗಿ ಸ್ವಭಾಷೆಗೆ ಇದ್ದ ಸ್ಥಾನವು ಕಡಮೆಯಾಯಿತು.

ಮೊದಮೊದಲು ನಮ್ಮ ವಿಶ್ವವಿದ್ಯಾನಿಲಯವು ಸ್ಥಾಪಿತವಾಗುವುದಕ್ಕೆ ಮುಂಚೆ ನಮ್ಮ ಸಂಸ್ಥಾನದ ವಿದ್ಯಾರ್ಥಿಗಳು ಮದರಾಸು ವಿಶ್ವವಿದ್ಯಾನಿಲಯದ ಪರೀಕ್ಷೆಗಳಿಗೆ ಹೋಗುತ್ತಿದ್ದರು. ಆದರೆ ಅಲ್ಲಿ ಕನ್ನಡಭಾಷೆಗೆ ಪ್ರಾಶಸ್ತ್ಯವಿರಲಿಲ್ಲ. ಹೀಗಾಗಿ ನಮ್ಮ ನಾಡಿನ ಕನ್ನಡಭಾಷೆಯು ಏಳಿಗೆಗೆ ಬರುವುದಕ್ಕೆ ಅವಕಾಶವೇ ಇರಲಿಲ್ಲ. ಇದಕ್ಕಾಗಿ ನಮ್ಮ ಮೈಸೂರು ದೇಶದಲ್ಲಿಯೂ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದರು. ಇದು ಸ್ಥಾಪಿತವಾದ ಮೇಲೆ ಕನ್ನಡಕ್ಕೆ ಒಂದು ಸ್ಥಾನವು ದೊರೆಯುವಂತಾಯಿತು. ಆಗಿನಿಂದ ನಮ್ಮ ಮೈಸೂರು ವಿಶ್ವವಿದ್ಯಾನಿಲಯದವರು ಕನ್ನಡ ಭಾಷಾಭಿವೃದ್ಧಿಯ ವಿಚಾರದಲ್ಲಿ ಹೆಚ್ಚಿನ ಆಸಕ್ತಿ ವಹಿಸಿದುದರಿಂದಲೂ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನವರ ಶ್ರಮದಿಂದಲೂ ಈಗ ಕನ್ನಡ ಸಾಹಿತ್ಯವು ಹೆಚ್ಚು ಹೆಚ್ಚಾಗಿ ಬೆಳೆಯಲು ಅನುಕೂಲವಾಯಿತು. ಇಂದು ನಮ್ಮ ಕನ್ನಡಕ್ಕೆ ಒಂದು ಸ್ಥಾನವು ದೊರೆತಿದ್ದರೆ ಅದು ನಮ್ಮ ವಿಶ್ವವಿದ್ಯಾನಿಲಯದ ಕನ್ನಡ ಪ್ರೇಮಿಗಳಿಂದ ಎಂದು ಹೇಳಬೇಕು.

ಅನೇಕ ಮಹನೀಯರ ಕೋರಿಕೆಯ ಮೇಲೆ ಮೈಸೂರು ಸರ್ಕಾರದವರು ಹೈಸ್ಕೂಲುಗಳಲ್ಲಿ ಕನ್ನಡವನ್ನು ಶಿಕ್ಷಣಭಾಷೆಯನ್ನಾಗಿ ಏರ್ಪಡಿಸಿರುವುದು ತಮ್ಮೆಲ್ಲರಿಗೂ ಗೊತ್ತಿದೆ. ಇದು ೧೯೩೩ನೆಯ ಇಸವಿಯಲ್ಲಿ ಏರ್ಪಾಡಾಯಿತು. ಆಗಿನಿಂದ ಇದುವರೆಗೂ ಇದು ಜಾರಿಯಲ್ಲಿದೆ. ಅದು ಹೇಗೆ ಕೆಲಸಮಾಡುತ್ತಿದೆ ಎಂಬುದೂ ನಮಗೆ ಗೊತ್ತಿದೆ. ಇಷ್ಟೇ ಅಲ್ಲದೆ ಶ್ರೀಮಾನ್ ಎ. ಎನ್. ರಾಮರಾಯರು ಹೇಳಿದಂತೆ ನಮ್ಮ ವಿಶ್ವವಿದ್ಯಾನಿಲಯದಲ್ಲಿರುವ ದೊಡ್ಡದೊಡ್ಡ ವಿದ್ವಾಂಸರು ಸೇರಿ ಕನ್ನಡವನ್ನು ಅಭಿವೃದ್ಧಿಗೆ ತರಬೇಕೆಂಬ ಆಕಾಂಕ್ಷೆಯಿಂದ ಕಳೆದ ಹಲವು ವರ್ಷಗಳಿಂದ ಒಂದು ನಿಘಂಟನ್ನು ರಚಿಸಲು ಶ್ರಮಿಸುತ್ತಿರುವುದು ನಿಮಗೆ ಗೊತ್ತಿದೆ. ಅದು ಪ್ರಕಟವಾಗುವುದರಿಂದ ಕನ್ನಡದ ಪುರೋಭಿವೃದ್ಧಿಗೆ ದೃಢವಾದ ತಳಹದಿಯನ್ನು ಹಾಕಿಕೊಟ್ಟಂತಾಗುತ್ತದೆ.

ಈಗ ಕಾಲೇಜುಗಳಲ್ಲಿ ಕನ್ನಡವನ್ನು ಶಿಕ್ಷಣಭಾಷೆಯನ್ನಾಗಿ ಏರ್ಪಡಿಸುವುದರಿಂದ ಒದಗಬಹುದಾದ ಮತ್ತು ನಾವು ನಿರೀಕ್ಷಿಸಬಹುದಾದ ಕೆಲವು ಅನಾನುಕೂಲಗಳನ್ನು ತಮ್ಮ ಗಮನಕ್ಕೆ ತರಲಿಚ್ಛಿಸುತ್ತೇನೆ. ನಾನು ಹೀಗೆ ಹೇಳಿದ ಮಾತ್ರದಿಂದಲೇ ಕನ್ನಡಕ್ಕೆ ಪ್ರೋತ್ಸಾಹವನ್ನು ನಾನು ಕೊಡುವವನಲ್ಲವೆಂದು ತಾವು ಗಣಿಸಬಾರದು. ಮೊಟ್ಟ ಮೊದಲನೆಯ ತೊಂದರೆಯು ಆರ್ಥಿಕ ವಿಚಾರಕ್ಕೆ ಸಂಬಂಧಪಟ್ಟುದು. ಇಂಗ್ಲಿಷ್

ಭಾಷೆಯನ್ನು ಕಲಿತುಕೊಳ್ಳುತ್ತಿರುವವರು, ಅದು ನಮ್ಮ ದೇಶದಲ್ಲಿ ಪ್ರಾಮುಖ್ಯವಾದ ಭಾಷೆಯೆಂದಾಗಲಿ, ರಾಜಭಾಷೆಯೆಂದಾಗಲಿ ಅಥವಾ ದೇಶಭಾಷೆಯೆಂದಾಗಲಿ ಎಣಿಸಿಕೊಂಡು ಯಾರೂ ಕಲಿಯುತ್ತಿಲ್ಲ. ಆರ್ಥಿಕದೃಷ್ಟಿಯಿಂದ ಅದು ಅನುಕೂಲ ವಾಗಿ ಕಂಡುಬಂದಿರುವುದರಿಂದ ಅದನ್ನು ಕಲಿಯುತ್ತಿದ್ದಾರೆ. ಇಂಗ್ಲಿಷ್ ಭಾಷೆಯು ನಮ್ಮನ್ನು ಮುಂದೆ ಸಾಕುತ್ತದೆ ಮತ್ತು ಅದರಿಂದ ನಮಗೆ ದೊಡ್ಡ ಸ್ಥಾನವೊಂದು ಲಭಿಸುತ್ತದೆ ಎಂಬ ದೃಷ್ಟಿಯಿಂದ ಆ ಭಾಷೆಯನ್ನು ಓದುತ್ತಿದ್ದಾರೆಯೇ ಹೊರತು ಯಾರೂ ಸ್ವಂತ ಭಾಷಾಪ್ರೇಮದಿಂದ ಅದನ್ನು ಓದುತ್ತಿಲ್ಲ. ಎರಡನೆಯದಾಗಿ ನಮ್ಮ ದೇಶದಲ್ಲಿ ತಂದೆತಾಯಿಗಳು ಅವರ ಬಾಲಕ ಬಾಲಕಿಯರು ಇಂಗ್ಲಿಷ್ ಭಾಷೆಯನ್ನು ಕಲಿಯುವುದಕ್ಕಾಗಿ ವಿಪರೀತ ಹಣವನ್ನು ವೆಚ್ಚಮಾಡುತ್ತಿದ್ದಾರೆ. ಅವರು ವೆಚ್ಚ ಮಾಡಿದ ಹಣಕ್ಕೆ ಸರಿಯಾದ ಅನುಕೂಲವು ಲಭಿಸಬೇಕಾದರೆ ಇಂಗ್ಲಿಷ್ ಭಾಷೆ ಯಿರುವುದೇ ಒಳ್ಳೆಯದು. ಸರ್ಕಾರದವರು ಹಠಾತ್ತನೆ ಕನ್ನಡವನ್ನು ಕಾಲೇಜು ಗಳಲ್ಲಿ ಶಿಕ್ಷಣದ ಮುಖ್ಯಭಾಷೆಯನ್ನಾಗಿ ಮಾಡಿದರೆ ಅದರಿಂದ ಆ ತಂದೆತಾಯಿಗಳ ಮೇಲೆಯೂ ಮತ್ತು ಓದುವ ಅವರ ಮಕ್ಕಳ ಮೇಲೆಯೂ ಯಾವರೀತಿಯ ಪರಿಣಾಮ ವುಂಟಾಗುತ್ತದೆಂಬುದನ್ನು ಯೋಚನೆ ಮಾಡಬೇಕು. ಇದಕ್ಕೆ ತಕ್ಕ ಕಾಲವು ಬರುವವರೆಗೂ ಇದನ್ನು ಜಾರಿಗೆ ತರುವುದು ಸೂಕ್ತವಲ್ಲ.

ಈ ಸಂದರ್ಭದಲ್ಲಿ ನಾವು ಮತ್ತೊಂದು ಅಂಶವನ್ನು ಗಮನದಲ್ಲಿಟ್ಟುಕೊಳ್ಳ ಬೇಕಾಗಿದೆ. ನಮ್ಮ ಮೈಸೂರು ಸಂಸ್ಥಾನದ ವಿಶ್ವವಿದ್ಯಾನಿಲಯದಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳೆಲ್ಲರಿಗೂ ಮುಂದೆ ನಮ್ಮ ದೇಶದಲ್ಲಿಯೇ ನೌಕರಿಗಳು ಸಿಕ್ಕುತ್ತವೆ ಎಂಬ ಭರವಸೆ ಇಲ್ಲ. ನಮ್ಮ ದೇಶದಲ್ಲಿ ವ್ಯಾಸಂಗವನ್ನು ಮುಗಿಸಿದ ವಿದ್ಯಾರ್ಥಿಗಳು ಹೊರಗಡೆ ಹೋದರೆ ಅವರಿಗೆ ಅವಕಾಶವಿರಬೇಕೆಂಬುದನ್ನು ನಾವು ಯೋಚನೆ ಮಾಡಬೇಕು. ಅವರಿಗೆ ಇಂಗ್ಲಿಷಿನಲ್ಲಿ ಶಿಕ್ಷಣವಾಗಿಲ್ಲದಿದ್ದರೆ ಅಲ್ಲಿ ಅವರಿಗೆ ಉದ್ಯೋಗಗಳು ದೊರೆಯುವ ಬಗೆ ಹೇಗೆ? ಸದ್ಯಕ್ಕೇನೋ, ಅಲ್ಲೆಲ್ಲ ಇಂಗ್ಲಿಷ್ ಭಾಷೆಯು ಪ್ರಚಾರದಲ್ಲಿದೆ. ಆದುದರಿಂದ ಈಗ ನಾವು ಇದನ್ನು ಕುರಿತು ಆಲೋಚಿಸ ಬೇಕು. ಆದರೆ ಇಂಡಿಯಾ ದೇಶದ ಎಲ್ಲಾ ವಿಶ್ವವಿದ್ಯಾನಿಲಯಗಳವರೂ ಈಗ ಇಂಗ್ಲಿಷಿಗಿರುವ ಪ್ರಾಶಸ್ತ್ಯವನ್ನು ತಪ್ಪಿಸಿ ಆಯಾ ದೇಶಭಾಷೆಗೆ ಪ್ರಾಶಸ್ತ್ಯವನ್ನು ಕೊಡುವಂತೆ ಏರ್ಪಾಡಿಸಿಕೊಂಡಾಗ್ಗೆ ನಾವೂ ಅದೇ ರೀತಿ ಮೈಸೂರು ಸಂಸ್ಥಾನ ದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡಬಹುದು. ತಾವು ಈಗ ಉಸ್ಮಾನಿಯ ವಿಶ್ವವಿದ್ಯಾ ನಿಲಯವನ್ನು ಉದಾಹರಿಸಬಹುದು. ಅಲ್ಲಿ ಉರ್ದು ಭಾಷೆಯನ್ನೇ ಬೋಧನೆಯ ಭಾಷೆಯನ್ನಾಗಿಟ್ಟುಕೊಂಡಿರುತ್ತಾರೆ. ಈ ಕಾರಣದಿಂದಲೇ ಆ ವಿಶ್ವವಿದ್ಯಾನಿಲಯ

ದಲ್ಲಿ ತೇರ್ಗಡೆಯಾದವರನ್ನು ಬೇರೆಕಡೆಯವರು ಅಂಗೀಕಾರ ಮಾಡದೆ ಇರುವುದು, ಇದನ್ನು ನಮ್ಮ ಮನಸ್ಸಿಗೆ ತಂದುಕೊಂಡು, ನಾವೂ ಕೂಡ ಕನ್ನಡವನ್ನೇ ವಿಶ್ವ ವಿದ್ಯಾನಿಲಯಗಳಲ್ಲಿ ಶಿಕ್ಷಣಭಾಷೆಯನ್ನಾಗಿ ಮಾಡಿದರೆ ಇದರಿಂದ ನಮ್ಮ ಹುಡುಗ ರಿಗೆ ಪ್ರಯೋಜನವು ಹೆಚ್ಚಾಗಿ ಆಗುತ್ತದೆಯೇ ಹೇಗೆ ಎಂಬುದನ್ನು ಯೋಚನೆ ಮಾಡಬೇಕು. ಆದುದರಿಂದ ಕರ್ಣಾಟಕದವರೆಲ್ಲರೂ ಸೇರಿ, ನಮ್ಮ ಶ್ರೀಮನ್ ಮಹಾರಾಜರವರು ಕರ್ಣಾಟಕ ಸಿಂಹಾಸನಾಧೀಶ್ವರರಾದಕಾರಣ ನಮ್ಮ ವಿಶ್ವವಿದ್ಯಾ ನಿಲಯವನ್ನು ಕರ್ಣಾಟಕ ವಿಶ್ವವಿದ್ಯಾನಿಲಯವೆಂದು ತಿಳಿದುಕೊಂಡು, ಕೆಲಸ ಮಾಡುವುದಕ್ಕೆ ಪ್ರಾರಂಭಿಸಿದರೆ, ಆಗ ಈ ಸಮಸ್ಯೆಯು ಇಷ್ಟು ಕಠಿಣತರವಾಗಿರುವು ದಿಲ್ಲವೆಂದು ನನ್ನ ಭಾವನೆ.

ಮತ್ತೊಂದು ವಿಷಯವೇನೆಂದರೆ, ಸರಿಯಾದ ಪಠ್ಯಪುಸ್ತಕಗಳ ಅಭಾವ. ಈ ಕಷ್ಟವೇನೋ ಈಗ ಇರುವುದು ನಿಜ. ಪಠ್ಯಪುಸ್ತಕಗಳು ನಾನಾವಿಧವಾಗಿವೆ. ಚರಿತ್ರೆ ಮತ್ತು ಆರ್ಟ್ಸ ಪುಸ್ತಕಗಳೇ ಅಲ್ಲದೆ ಪಾರಿಭಾಷಿಕ (technical) ಕಾಲೇಜು ಗಳಾದ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳಲ್ಲಿ ಕನ್ನಡದಲ್ಲಿ ಪುಸ್ತಕ ಗಳು ಸಿಕ್ಕುವುದೇ ದುರ್ಲಭ. ಈ ಪಾರಿಭಾಷಿಕ ಕಾಲೇಜುಗಳಲ್ಲಂತೂ ಸರಿಯಾದ ಶಿಕ್ಷಣವು ದೊರೆಯಬೇಕಾದರೆ ಒಳ್ಳೆಯ ಪಠ್ಯಪುಸ್ತಕಗಳು ಇರಬೇಕಾದುದು ಬಹಳ ಆವಶ್ಯಕವೆಂಬುದನ್ನು ನಾನು ಹೇಳಬೇಕಾಗಿಲ್ಲ. ಇನ್ನೊಂದು ವಿಷಯ ಈಗಲೂ ಕೂಡ ನಮ್ಮ ಮೆಡಿಕಲ್ ಗ್ರಾಜ್ಯುಯೇಟುಗಳಿಗೆ ನಮ್ಮ ಸಂಸ್ಥಾನದ ಹೊರಗಡೆ ಅವರ ಡಿಗ್ರಿಗಳಿಗೆ ಅಂಗೀಕಾರ ದೊರೆಯದಿರುವುದು ತಮಗೆ ತಿಳಿದಿರುವ ವಿಷಯವೇ ಆಗಿದೆ. "ಇಂಡಿಯನ್ ಮೆಡಿಕಲ್ ಕೌನ್ಸಿಲ್" ಸಭೆಯವರು ನಮ್ಮ ವಿಶ್ವವಿದ್ಯಾನಿಲಯದ ಡಿಗ್ರಿಯನ್ನು ಅಂಗೀಕರಿಸಿಲ್ಲ. ಆದಕಾರಣ, ಇಲ್ಲಿಯ ಮೆಡಿ ಕಲ್ ಗ್ರಾಜ್ಯುಯೇಟುಗಳಿಗೆ ಸಂಸ್ಥಾನದ ಹೊರಗೆ ಉದ್ಯೋಗಗಳು ದೊರೆಯು ವುದಕ್ಕೂ ಅವರು ಮುಂದೆ ಸರಿಯಾದ ಸ್ಥಿತಿಗೆ ಬರುವುದಕ್ಕೂ ನಮ್ಮ ವಿಶ್ವವಿದ್ಯಾ ನಿಲಯದ ಡಿಗ್ರಿ ಪ್ರಶಸ್ತಿಗಳಿಗೆ ಅಂಗೀಕಾರ ಇರಬೇಕಾದುದು ಅತ್ಯಗತ್ಯ. ಈಗಿನ ಸ್ಥಿತಿಯು ಹೀಗಿದೆ. ಕನ್ನಡವು ಶಿಕ್ಷಣ ಭಾಷೆಯಾದರೆ, ಅದರಿಂದ ಅಂಗೀಕಾರ ದೊರೆಯುವುದು ಇನ್ನೂ ಕಷ್ಟವಾಗುತ್ತದೆ. ಇದನ್ನು ಪಡೆಯಬೇಕಾದರೆ ಸರಿಯಾದ ಪಠ್ಯಪುಸ್ತಕಗಳು ನಮ್ಮ ಕಾಲೇಜುಗಳಲ್ಲಿಯೂ ಇದ್ದ ಹೊರತು ಸಾಧ್ಯವಿಲ್ಲ.

ಕೊನೆಯದಾಗಿ, ಈ ನಿರ್ಣಯವನ್ನು ಒಪ್ಪಿಕೊಳ್ಳುವುದರಲ್ಲಿರುವ ಮುಖ್ಯವಾದ ತೊಂದರೆಯನ್ನು ತಮಗೆ ತಿಳಿಸಬೇಕಾಗಿದೆ. ಅದೇನೆಂದರೆ, ಆರ್ಥಿಕದೃಷ್ಟಿಯಿಂದ ಈ ಕಾರ್ಯವನ್ನು ಕೈಕೊಳ್ಳುವುದಕ್ಕೆ ಸಾಧ್ಯವಿಲ್ಲವೆಂಬುದು. ಈಗ ತಾವು ಹೇಳುವ

ಪದ್ಧತಿಯನ್ನು ನಮ್ಮ ವಿಶ್ವವಿದ್ಯಾನಿಲಯದಲ್ಲಿ ಜಾರಿಗೆ ತಂದರೆ ಆಗ ವಿಶ್ವವಿದ್ಯಾನಿಲಯದ ವೆಚ್ಚವು ಹೆಚ್ಚಾಗುತ್ತದೆ. ಮೊದಲನೆಯದಾಗಿ, ಎಲ್ಲಾ ಪಠ್ಯಪುಸ್ತಕಗಳನ್ನೂ ಕನ್ನಡಕ್ಕೆ ತರ್ಜುಮೆಮಾಡಿಸಬೇಕಾದರೆ, ಅದಕ್ಕೆ ಬಹಳ ಹಣಬೇಕಾಗುತ್ತದೆ. ಈಗ ಹೈದರಾಬಾದಿನಲ್ಲಿ ಇದಕ್ಕಾಗಿ ಅನೇಕ ಕೋಟಿ ರೂಪಾಯಿಗಳನ್ನು ಖರ್ಚುಮಾಡಿದ್ದಾರೆ. ಎರಡನೆಯದಾಗಿ, ನಾವು ಕನ್ನಡವನ್ನು ವಿಶ್ವವಿದ್ಯಾನಿಲಯದಲ್ಲಿ ಪಾಠಹೇಳತಕ್ಕ ಮುಖ್ಯಭಾಷೆಯನ್ನಾಗಿ ಏರ್ಪಡಿಸಿದ ಮಾತ್ರಕ್ಕೇ ಇಂಗ್ಲಿಷ್ ತರಗತಿಗಳನ್ನು ತೆಗೆದುಬಿಡುವುದಕ್ಕಾಗುವುದಿಲ್ಲ. ಎಂದರೆ ಕನ್ನಡಬಾರದೆ ಇರತಕ್ಕವರ ಸೌಕರ್ಯಕ್ಕಾಗಿಯಾದರೂ ಹೈಸ್ಕೂಲುಗಳಲ್ಲಿ ಮಾಡಿರುವ ರೀತಿಯಲ್ಲಿ ಇಂಗ್ಲಿಷಿನಲ್ಲಿ ಪಾಠಹೇಳತಕ್ಕ ತರಗತಿಗಳನ್ನು ನಾವು ಏರ್ಪಡಿಸಬೇಕಾಗುತ್ತದೆ. ಇದಕ್ಕೆ ಬೇರೆ ವೆಚ್ಚವು ಬೀಳುತ್ತದೆ. ಆದುದರಿಂದ ನಾವು ಈಗಿರುವ ಪದ್ಧತಿಯನ್ನು ಬದಲಾವಣೆ ಮಾಡುವುದಕ್ಕೆ ಮುಂಚೆ ಇವೆಲ್ಲವನ್ನೂ ವಿಮರ್ಶೆಮಾಡಬೇಕಾದುದು ಅತ್ಯಗತ್ಯ.

ಒಟ್ಟಿನಲ್ಲಿ ಒಂದು ಮಾತನ್ನು ಹೇಳಬಹುದು. ಈ ನಿರ್ಣಯದಲ್ಲಿರುವ ಒಂದು ಮುಖ್ಯ ತತ್ತ್ವವು ಎಲ್ಲರಿಗೂ ಬೇಕಾದುದಾಗಿದೆ. ಅದು ಎಲ್ಲರ ಆಸೆ, ಕನ್ನಡಿಗರ ಆಸೆ, ಮತ್ತು ನಮ್ಮ ಒಟ್ಟು ಮೈಸೂರು ಸಂಸ್ಥಾನದಲ್ಲಿರುವ ಎಲ್ಲರ ಆಸೆ. ಒಂದಾನೊಂದು ದಿವಸ ನಮ್ಮ ಸಂಸ್ಥಾನದಲ್ಲಿ ಕರ್ಣಾಟಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕೆಂಬುದು ಒಟ್ಟು ಮೈಸೂರಿನವರ ಆಸೆಯೇ ಆಗಿದೆ. ಆದರೆ ಈಗಿನ ಸ್ಥಿತಿಯಲ್ಲಿ, ಈ ನಿರ್ಣಯದ ವಿಷಯವಾಗಿ ಏನನ್ನೂ ಹೇಳುವುದಕ್ಕಾಗುವುದಿಲ್ಲ. ಅದು ಎಷ್ಟರಮಟ್ಟಿಗೆ ಸಾಧ್ಯ, ಎಷ್ಟರಮಟ್ಟಿಗೆ ಅಸಾಧ್ಯ, ಆದರಿಂದ ದೇಶಕ್ಕೆ ಎಷ್ಟರಮಟ್ಟಿಗೆ ಕ್ಷೇಮವಾಗುತ್ತದೆ, ಆದರ ಸಾಧಕಬಾಧಕಗಳೇನು, ಇಂಡಿಯಾ ದೇಶದ ಇತರ ವಿಶ್ವವಿದ್ಯಾನಿಲಯಗಳೊಡನೆ ನಮಗೆ ಯಾವ ರೀತಿಯ ಸಂಬಂಧವಿರಬೇಕು, ಇದು ಆರ್ಥಿಕ ದೃಷ್ಟಿಯಿಂದ ಎಷ್ಟು ಕಷ್ಟಸಾಧ್ಯವಾದುದು—ಎಂಬಿವೇ ಮುಂತಾದ ವಿಷಯಗಳನ್ನು ನಾವು ಕೂಲಂಕಷವಾಗಿ ಪರ್ಯಾಲೋಚನೆಮಾಡಬೇಕು. ಅವುಗಳನ್ನೆಲ್ಲ ಕುರಿತು ಆಲೋಚನೆಮಾಡಿದಲ್ಲದೆ ತೀರ್ಮಾನಕ್ಕೆ ಬರುವುದು ಸಾಧ್ಯವಿಲ್ಲ. ಈ ನಿರ್ಣಯವನ್ನು ಜಾರಿಗೆ ತರುವುದರಲ್ಲಿ ಅನೇಕ ಕಷ್ಟಗಳಿರಬಹುದು. ಆದರೆ ಅವುಗಳನ್ನು ಪರಿಹರಿಸುವುದು ಅಸಾಧ್ಯವಾಗಿಲ್ಲದೆ ಇದ್ದರೂ ಇರಬಹುದು; ಕೂಲಂಕಷವಾಗಿ ಪರಿಶೀಲಿಸಿ ಯೋಚಿಸಿದಲ್ಲದೆ ಈಗಲೇ ಯಾವುದೊಂದನ್ನೂ ಹೇಳುವಂತಿಲ್ಲ. ಆದ ಕಾರಣ ತಮ್ಮ ಈ ಸಲಹೆಯನ್ನು ಯೂನಿವರ್ಸಿಟಿ ಕೌನ್ಸಿಲಿಗೆ ಕಳುಹಿಸಿಕೊಟ್ಟು ಅವರ ಅಭಿಪ್ರಾಯವನ್ನೂ ತೆಗೆದುಕೊಂಡು ಈ ನಿರ್ಣಯವನ್ನು ಪರಿಶೀಲಿಸುತ್ತೇವೆ. ಹಾಗೆ ಮಾಡದೆ ಏಕಾಏಕಿ ಅವಸರವಾಗಿ ಯಾವ ಕಾರ್ಯವನ್ನೂ ಮಾಡುವುದು ಒಳ್ಳೆಯದಲ್ಲ. ಇಷ್ಟು ಭರವಸೆಯನ್ನು ಮಾತ್ರ ನಾನು ಕೊಡಬಲ್ಲೆನು. ಈ ಭರವಸೆಯ

ಮೇಲೆ ನಿರ್ಣಯದ ಸೂಚಕರು ಇದನ್ನು ವಾಪಸು ತೆಗೆದುಕೊಳ್ಳುತ್ತಾರೆಂದು ನಾನು ನಂಬಿದ್ದೇನೆ.

ಈ ವಿಚಾರದಲ್ಲಿ ಮುಂದೆ ಯಾವರೀತಿ ಮಾಡಬೇಕೆಂಬುದನ್ನು ಯೋಚನೆಮಾಡುತ್ತೇವೆ. ಯಾವುದಕ್ಕೂ ಈ ವಿಚಾರದಲ್ಲಿ ಅನುಭವಸ್ಥರ ಅಭಿಪ್ರಾಯವನ್ನು ತೆಗೆದುಕೊಳ್ಳದೆ ಏನನ್ನೂ ಹೇಳುವುದಕ್ಕಾಗುವುದಿಲ್ಲ. ಯೂನಿವರ್ಸಿಟಿ ಕೌನ್ಸಿಲ್ ನಲ್ಲಿಯಲ್ಲಿಯೂ ಕನ್ನಡದ ಅಭಿಮಾನಿಗಳಿದ್ದಾರೆ. ಅವರು ಹೇಳುವುದೆಲ್ಲವನ್ನೂ ಕೇಳಿದ ಹೊರತು ಇದನ್ನು ಒಪ್ಪಿಕೊಳ್ಳಬೇಕೇ ಬಿಡಬೇಕೇ ಎಂಬುದನ್ನು ನಿರ್ಧರವಾಗಿ ಹೇಳಲು ಸಾಧ್ಯವಿಲ್ಲ. ಇಷ್ಟುಮಾತ್ರ ನಾನು ಹೇಳಬಲ್ಲೆ; ಸರ್ಕಾರದವರೂ ಈ ವಿಚಾರದಲ್ಲಿ ಬಹಳ ಸಹಾನುಭೂತಿಯುಳ್ಳವರಾಗಿ ಇದನ್ನು ಪರಿಶೀಲನೆಮಾಡುತ್ತಾರೆಂದು. ನಮ್ಮ ಸಂಸ್ಥಾನದಲ್ಲಿ ಕನ್ನಡಕ್ಕೆ ಸರಿಯಾದ ಸ್ಥಾನಮಾನಗಳನ್ನು ಕೊಡಬೇಕೆಂದು ಎಲ್ಲರಿಗೂ ಇಷ್ಟ. ಆದರೆ ಇದಕ್ಕೆ ಸಂಬಂಧಪಟ್ಟ ವಿಚಾರಗಳನ್ನು ತೀರ್ಮಾನಿಸುವುದು ಒಂದು ದಿವಸದಲ್ಲಿ ಆಗುವುದಿಲ್ಲ. ಇದರಲ್ಲಿ ಅನೇಕ ಸಮಸ್ಯೆಗಳಿವೆ ಅವೆಲ್ಲಾ ಬಗೆಹರಿಯಬೇಕು. ಆಮೇಲೆ ಏನುಮಾಡಬೇಕೋ ಅದನ್ನು ಮಾಡುತ್ತೇವೆ.

## ಶ್ರೀಮಾನ್ ಕೆ. ಹನುಮಂತಯ್ಯನವರು

ಈ ವಿಚಾರವನ್ನು ಪರಿಶೀಲಿಸಲು ಸರ್ಕಾರದವರು ಯೂನಿವರ್ಸಿಟಿ ಕೌನ್ಸಿಲಿಗಿಂತಲೂ ಈ ಸಭಾಸದಸ್ಯರನ್ನು ಒಳಗೊಂಡ ಒಂದು ಸಮಿತಿಯನ್ನು ಮಾಡಿದರೆ ಒಳ್ಳೆಯದೆಂದು ನನ್ನ ಸಲಹೆ.

## ಶ್ರೀಮಾನ್ ಟಿ. ತಿಮ್ಮರಾಜಯ್ಯನವರು

ಈ ನಿರ್ಣಯಕ್ಕೆ ಬೆಂಬಲವನ್ನು ಕೊಟ್ಟಿರತಕ್ಕ ಮಹನೀಯರಿಗೆ ನನ್ನ ವಂದನೆಗಳು. ಈ ನಿರ್ಣಯದ ವಿಚಾರವಾಗಿ ಸದಸ್ಯರ ಅಭಿಮತವನ್ನು ಕೇಳಬೇಕೆಂದು ನಾನು ಒತ್ತಾಯಮಾಡುತ್ತೇನೆ.

## ಶ್ರೀಮಾನ್ ಎಸ್. ಎ. ಎಂ. ರಜ್ವಿಯವರು

ಸ್ವಾಮಿ, ಮುಸ್ಲಿಂ ಲೀಗ್ ಪಕ್ಷದ ಸದಸ್ಯರು ಇದಕ್ಕೆ ವಿರೋಧವಾಗಿದ್ದಾರೆಂದು ಆ ಪಕ್ಷದ ಪರವಾಗಿ ನಾನು ತಿಳಿಸುತ್ತೇನೆ.

(ಅನಂತರ ನಿರ್ಣಯದ ವಿಚಾರದಲ್ಲಿ ಅಭಿಮತಗಳನ್ನು ಕೇಳಲಾಯಿತು. ೩೫ ಮಂದಿ ಸದಸ್ಯರು ವಿರೋಧವಾಗಿಯೂ ಇನ್ನುಳಿದ ಬಹುಮಂದಿ ಸದಸ್ಯರು ಎಂದರೆ ೨೫೬ ಮಂದಿ ಸದಸ್ಯರು ನಿರ್ಣಯದ ಪರವಾಗಿಯೂ ಅಭಿಮತಗಳನ್ನು ಕೊಟ್ಟರು. ನಿರ್ಣಯವು ಬಹುಮತದಿಂದ ಅಂಗೀಕೃತವಾಯಿತು.)

---

# ವಡ್ಡಾರಾಧನೆಯೆಂಬ ಹಳಗನ್ನಡ ಗದ್ಯಗ್ರಂಥ[1]

(ಕರ್ತೃತ್ವ ಮತ್ತು ಕಾಲವಿಚಾರ)

೧೮೮೩ನೆಯ ಇಸವಿಯಷ್ಟು ಹಿಂದೆಯೇ ಕೆ.ಬಿ. ಪಾಠಕರೂ ಅವರನ್ನು ಅನುಸರಿಸಿ ಜೆ. ಎಫ್. ಫ್ಲೀಟರೂ ಪಂಚಮಹಾಶಬ್ದ, ನಿಸಿಧಿ ಮುಂತಾದ ಕೆಲವು ಪದಗಳ ಅರ್ಥವಿವರಣೆ ಮಾಡುವುದಕ್ಕಾಗಿ ರೇವಾಕೋಟ್ಯಾಚಾರ್ಯ ರಚಿತವಾದ 'ಉಪಸರ್ಗ ಕೇವಲಿಗಳ ಕಥೆ' ಎಂದು ಅವರೇ ಕರೆದಿರುವ ಗ್ರಂಥದಿಂದ ಕೆಲವು ಪಂಕ್ತಿಗಳನ್ನು ಉದ್ಧರಿಸಿ ಪ್ರಕಟಿಸಿದರು.[2] ಅವರು ಉಪಯೋಗಿಸಿದ ಪ್ರತಿಯ ವಿಚಾರವಾಗಿ ನನಗೆ ತಿಳಿದಮಟ್ಟಿಗೆ ಅವರು ಯಾವ ಸಂಗತಿಯನ್ನೂ ತಿಳಿಸಿಲ್ಲ. ಆದರೆ ಫ್ಲೀಟರ ಮತ್ತೊಂದು ಟಿಪ್ಪಣಿಯಿಂದ[3] ಆ ಪ್ರತಿಯ ಹೊಲಬು ನನಗೆ ಪ್ರಾಸಂಗಿಕವಾಗಿ ತಿಳಿದುಬಂದ ಮೇಲೆ ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕರ ಜೈನಮಠದಲ್ಲಿ ಅದಕ್ಕಾಗಿ ಬಲು ಎಚ್ಚರಿಕೆಯಿಂದ ಹುಡುಕಿದೆನು; ಮೇಲೆ ಹೇಳಿದ ಹೆಸರನ್ನೇ ಹೆಚ್ಚುಕಡಮೆ ಹೊಂದಿರುವ ಒಂದು ಓಲೆಯ ಗ್ರಂಥ ನನಗೆ ಸಿಕ್ಕಿತು (ಓಲೆ ಪ್ರತಿ ಸಂ. ೪೫)[4]; ಅದರ ಮರದ ಪಟ್ಟಿಯ ಮೇಲೆ ಈ ಹೆಸರು

---

1 ಸಿಂಘೀ ಗ್ರಂಥಮಾಲೆಯಲ್ಲಿ ಮುದ್ರಿತವಾಗುತ್ತಿರುವ ಹರಿಷೇಣ ಕಥಾಕೋಶದ ಇಂಗ್ಲಿಷ ಪ್ರಸ್ತಾವನೆಯ ಒಂದು ಭಾಗವಿದು. ಆ ಗ್ರಂಥವು ನಾಲ್ಕಾರು ತಿಂಗಳಲ್ಲಿ ಪ್ರಕಟವಾಗಬಹುದು. ಕನ್ನಡಪಂಡಿತರ ವಿಮರ್ಶನೆಯ ಲಾಭವು ದೊರೆಯಬೇಕೆಂದು ಆ ಭಾಗದ ಕನ್ನಡ ಸಾರಾನುವಾದವನ್ನು ಇಲ್ಲಿ ಕೊಟ್ಟಿದೆ.

2 *Indian Antiquary*, XII, pp. 95f., 99f.

3 ಅದೇ. ಪು. 216.

4 ಈ ಕೊಲ್ಲಾಪುರ ಪ್ರತಿಯ ಸ್ವರೂಪ ಹೀಗಿದೆ: ಎರಡು ಕಡೆಯೂ ಲಿಖಿತವಾದ ೧೪೭ ಪತ್ರಗಳನ್ನುಳ್ಳ ಓಲೆಯ ಗ್ರಂಥವಿದು; ಕೊನೆಯ ಪುಟ ಖಾಲಿ ಇದೆ. ರಕ್ಷಾಪಟ್ಟಿಗಳನ್ನು ಬಿಟ್ಟು ಅದರ ಗಾತ್ರ ಸುಮಾರು ೧೧·೭೫ × ೧·೫ × ೭ ಇಂಚುಗಳು. ದಾರ ಪೋಣಿಸುವ ವೆಜ್ಜ ಮತ್ತು ಅದನ್ನು ಬಳಸಿರುವ ಜಾಗ ಕಾರಣವಾಗಿ ಪ್ರತಿ ಪುಟದ ಬರವಣಿಗೆಯೂ ಮೂರು ಭಾಗಗಳಾಗಿ ವಿಭಕ್ತವಾಗಿದೆ. ಪಂಕ್ತಿಯೊಂದಕ್ಕೆ ೫೫-೬೦ ಅಕ್ಷರಗಳನ್ನುಳ್ಳ ೮ ಪಂಕ್ತಿಗಳು ಪ್ರತಿ ಪುಟದಲ್ಲಿಯೂ ಇವೆ. ಲಿಪಿ ಹಳಗನ್ನಡ; ಱಕಾರೞಕಾರಗಳನ್ನು ಬಳಸಿದೆ; ಆ ಲಿಪಿಯ ಇನ್ನೂ ಕೆಲವು ವೈಲಕ್ಷಣ್ಯಗಳು ಎಂದರೆ, ಹ್ರಸ್ವ ದೀರ್ಘಗಳಿಗೆ ಪ್ರತ್ಯೇಕವಾದ ಚಿಹ್ನೆಗಳಿಲ್ಲದಿರುವುದೂ ಅಲ್ಪಪ್ರಾಣ ಮಹಾ

ಬರೆದಿದೆ. ಈ ಪ್ರತಿಯ ೧೧೩(a)–೧೧೪ನೆಯ ಪತ್ರಗಳಲ್ಲಿ ಕೆ. ಬಿ. ಪಾಠಕರು ಉದ್ಧರಿಸಿರುವ ದೀರ್ಘತರವಾದ ಉದ್ಧರಣವು ಕಾಣುತ್ತದೆ. ಗ್ರಂಥನಾಮವಾದ 'ಉಪಸರ್ಗಕೇವಲಿ ಕಥೆ' ಎಂಬುದನ್ನು ಮರದ ಪಟ್ಟಿಕೆಯ ಮೇಲೆ ಹಳಗನ್ನಡದ ಅಕ್ಷರಗಳಲ್ಲಿ ಕೊರೆದಿದೆ; ಈ ಹೆಸರು ಅನುಕೂಲವಾಗಿ ಕಂಡ ಊಹೆಯ ಹೆಸರೆಂದು ಕಾಣುತ್ತದೆ. ಬಹುಶಃ ಆ ಪುಸ್ತಕ ಭಂಡಾರದ ಅಧಿಕಾರಿ ಗ್ರಂಥದ ಆರಂಭದಲ್ಲಿರುವ ಕೆಲವು ಪಙ್ಕ್ತಿಗಳನ್ನು ನೋಡಿ ಇಟ್ಟ ಹೆಸರಾಗಿರಬೇಕು. ಗ್ರಂಥದ ಒಳಗಡೆ ಎಲ್ಲಿಯೂ ಈ ಹೆಸರು ಕಾಣುವುದಿಲ್ಲ. 'ಸುಕುಮಾರಸ್ವಾಮಿ' ಎಂಬುದು ಆರಂಭದಲ್ಲಿರುವ ಪದ; ಗ್ರಂಥ ಪರಿಸಮಾಪ್ತಿ ಭಾಗದಲ್ಲಿ ಕೆಳಗೆ ಕಂಡಂತೆ ಇದೆ:

> ಯಿಾ ಪೇಳ್ದ ಪತ್ತೊಂಭತ್ತು ಕಥೆಯ ರೇವಾಕೋಟ್ಯಾಚಾರ್ಯಪ್ಪೇೞ್ದ
> ವಡ್ಡಾರಾಧನೆಯ ಕವಚಮೆಂಬಧಿಕಾರಊ |

ಈ ಮಾತುಗಳೂ ಇದುವರೆಗೆ ಈ ಪ್ರತಿಯ ವಿಚಾರವಾಗಿ ಬರೆದಿರುವುದೂ ಈ ಗ್ರಂಥ ನನ್ನ ಮಿತ್ರರಾದ ಶ್ರೀ ಡಿ. ಎಲ್. ನರಸಿಂಹಾಚಾರ್, ಮೈಸೂರು, ಅವರು ಸಂಪಾ

---

ಪ್ರಾಣಗಳಿಗೆ ವ್ಯತ್ಯಾಸಮಾಡದಿರುವುದೂ ಈ ಬರವಣಿಗೆಯಲ್ಲಿವೆ. ಗ್ರಂಥವು ಆರಂಭವಾಗುವುದು ಹೀಗೆ:

> ಸುಕುಮಾರಸ್ವಾಮಿ ‖ ನಮಃಸಿದ್ಧೇಭ್ಯಃ ‖ ಇಂದಸಮುವಂದಿಯಾಣಂ ಇತ್ಯಾದಿ ‖ ಏಸ ಸುರಾಸುರ ಇತ್ಯಾದಿ ‖ ತಿಲೋಯಸವ್ವಜೀವಾಣಂ ಹಿಯಂ ಧಮ್ಮೋವದೇಸಿಣಂ | ವಡ್ಢಮಾಣಂ ಮಹಾವೀರಂ ವಂದಿತ್ತಾ ಸವ್ವ ವೇಇಣಂ ‖ ನಮಃ ಶ್ರೀವರ್ಧಮಾನಾಯಇತ್ಯಾದಿ ‖ ಯೆಂದಿಂತು ಶ್ರೀವರ್ಧಮಾನ ಭಟ್ಟಾರಕರ್ಗ್ಗೆ ಇತ್ಯಾದಿ.

ಕೊನೆಯ ಕಥೆಯ ಅಂತ್ಯದಲ್ಲಿ ಅಶುದ್ಧ ಪಾಠಗಳಿಂದ ತುಂಬಿದ ಮೂರು ಪ್ರಾಕೃತ ಪದ್ಯಗಳಿವೆ: ಜದಿ ತಾ ಏವಂ ಇತ್ಯಾದಿ ‖ ಕಿಂ ಪುಣ ಇತ್ಯಾದಿ ‖ ಜಿಣವಯಣ ಇತ್ಯಾದಿ ‖ ಅನಂತರ ಈ ಕನ್ನಡಗದ್ಯವಿದೆ:

ಈ ಪೇಳ್ದ ಪತ್ತೊಂಭತ್ತು ಕಥೆಯ ರೇವಾಕೋಟ್ಯಾಚಾರ್ಯಪ್ಪೇೞ್ದ ವಡ್ಡಾರಾಧನೆಯ ಕವಚಮೆಂಬಧಿಕಾರಊ ‖ ಶ್ರೀ ಪಂಚಗುರುವೇ ಶರಣು ‖ ಪ್ಲವಸಂವತ್ಸರದ ಕಾರ್ತಿಕ ಸುದ್ಧ ಸುಕ್ರವಾರ ಬೇಲೂರ ಚಂದ್ರಯ್ಯ ವೈಶ್ಯರ ಚಂದ್ರಯ್ಯನು ವಡ್ಡಾರಾಧನೆಯ ಪುಸ್ತಕವನು ಬರದ ಮಂಗಲಮಹಾಶ್ರೀ ‖

ಅಡ್ಡಲಾಗಿ ಮುರಿದಿರುವ, ಆದರೆ ಈಚೆಗೆ ಹೊಲಿದಿರುವ ಕೆಲವು ಪತ್ರಗಳು ಹೊರತಾಗಿ ಈ ಪ್ರತಿ ಸಮಗ್ರವಾದ ಸ್ಥಿತಿಯಲ್ಲಿದೆ. ಇದನ್ನು ಪ್ರತಿ ಮಾಡಿದ್ದು ಮೈಸೂರು ಸಂಸ್ಥಾನದ ಬೇಲೂರಿನಲ್ಲಿ. ಪ್ರತಿಯಾದ ಶಕ ವರ್ಷ ಕೊಟ್ಟಿಲ್ಲ. ಪ್ರತಿಯ ಸ್ಥಿತಿಯನ್ನು ನೋಡಿದರೆ ಅದು ಬಹು ಹಳೆಯದಾಗಿ ಕಾಣುತ್ತದೆ—ಕನಿಷ್ಠ ಪಕ್ಷ ಮುನ್ನೂರು ವರ್ಷಗಳಷ್ಟು. ನಾನು ಹೋಲಿಸಿರುವ ಭಾಗವಷ್ಟರಿಂದಲೇ ಹೇಳಬಹುದಾದರೆ, ಶ್ರೀ ಡಿ. ಎಲ್. ನರಸಿಂಹಾಚಾರ್ಯರು ವರ್ಣಿಸಿರುವ ಘ, ಚ, ಛ ಪ್ರತಿಸಂಗಡಕ್ಕೆ ಇದೂ ಸೇರಿದೆಯೆಂದು ನನಗೆ ತೋರುತ್ತದೆ.

ದಿಸಿ ಪ್ರಕಟಿಸುತ್ತಿರುವ 'ವಡ್ಡಾರಾಧನೆ'ಯೇ ಆಗಿದೆಯೆಂದು ತಿಳಿಸಲು ಸಾಕಾಗಿವೆ; ಈ ಪುಸ್ತಕದ ಕಾಲ ವಿಚಾರವಾಗಿ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ವಾಗ್ಮಿತೆಯಿಂದ ನಿರೂಪಿಸಿರುವರು.[1]

ಸುಕುಮಾರನ ಕಥೆಯಿಂದ ಆರಂಭವಾಗಿ ವೃಷಭಸೇನನ ಕಥೆಯಿಂದ ಮುಗಿಯುವ ಈ ಕಥಾಗುಚ್ಛಕ್ಕೆ 'ವಡ್ಡಾರಾಧನೆ' ಎಂಬ ಹೆಸರನ್ನು ಅಂಗೀಕರಿಸಬಹುದು. 'ಭಗವತೀ ಆರಾಧನಾ' ಎಂಬ ಗ್ರಂಥದಲ್ಲಿ ಕೆಲವು ಕಥೆಗಳು ಸೂಚಿತವಾಗಿರುವುದನ್ನೂ, ಆ ಗ್ರಂಥಕ್ಕೆ ಇದ್ದಿರಬಹುದಾದ ಸಂಸ್ಕೃತ ಮತ್ತು ಪ್ರಾಕೃತ ವ್ಯಾಖ್ಯಾನಗಳಲ್ಲಿ ಈ ಕಥೆಗಳು ಮೊದಲು ಅಡಕವಾಗಿದ್ದುವೆಂಬುದನ್ನೂ, ಕಾಲಕ್ರಮದಲ್ಲಿ ಈ ಕಥೆಗಳೇ ಭಿನ್ನ ಭಿನ್ನ ಕೋಶಗಳಾಗಿ ಪರಿಣಮಿಸಿದುವೆಂಬುದನ್ನೂ ಹಿಂದೆಯೇ ನೋಡಿದ್ದೇವೆ[2]; ಇಂತಹ ಕಥಾಕೋಶಗಳನ್ನು ಹಿಂದೆಯೇ ಹೆಸರಿಸಿದ್ದೇವೆ. ಈ ಕನ್ನಡ ಗ್ರಂಥವೂ ಶಿವಾರ್ಯ ಅಥವಾ ಶಿವಕೋಟಿ ರಚಿತವಾದ 'ಭಗವತೀ ಆರಾಧನಾ' ಎಂಬ ಪುಸ್ತಕದಲ್ಲಿ ೧೫೩೯–೧೫೫೭ ರ ವರೆಗಿನ ಗಾಹೆಗಳಲ್ಲಿ ಸೂಚಿತವಾಗಿರುವ ಹತ್ತೊಂಬತ್ತು ಕಥೆಗಳನ್ನೊಳಕೊಂಡ ಅಪೂರ್ಣ ಕಥಾಕೋಶವಾಗಿದೆ. ಅಮುಖ್ಯವಾದ ಪಾಠ ವ್ಯತ್ಯಾಸಗಳಿದ್ದರೂ ಈ ಪ್ರಾಕೃತ ಗಾಹೆಗಳು ಒಂದೊಂದು ಆಯಾ ಕಥೆಯ ಆರಂಭದಲ್ಲಿ ಉದ್ಧೃತವಾಗಿ ಅವಕ್ಕೆ ಕನ್ನಡದಲ್ಲಿ

---

[1] ವಡ್ಡಾರಾಧನೆಯ ಪ್ರಕಟಿತ ಭಾಗವೂ ಅದನ್ನು ಕುರಿತ ವಿಮರ್ಶೆ ವಿಚಾರಗಳೂ ನನಗೆ ತಿಳಿದಮಟ್ಟಿಗೆ ಕೆಳಗೆ ಹೇಳಿದೆ. ಪಾಠಕ್ ಮತ್ತು ಫ್ಲೀಟ್: *Indian Antiquary*, XII, pp. 95, 96, etc. ರಾ. ನರಸಿಂಹಾಚಾರ್ಯರು: ಕವಿಚರಿತೆ I, ಪು. 282. ಡಿ. ಎಲ್. ನರಸಿಂಹಾಚಾರ್: ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, XVI, ಪು. ೧೭೩–೨೩೧ (ಪೀಠಿಕೆ ಮತ್ತು ಸುಕುಮಾರ ಭದ್ರಬಾಹು ವಿದ್ಯುಚ್ಚೋರರ ಕಥೆಗಳು. ಇದನ್ನು ನಿರ್ದೇಶಿಸುವಾಗ ಪುಟಸಂಖ್ಯೆಯ ಹಿಂದೆ ನಕ್ಷತ್ರ ಚಿಹ್ನೆಯನ್ನು ಹಾಕಿದೆ); ಕನ್ನಡಸಾಹಿತ್ಯ ಪರಿಷತ್ಪತ್ರಿಕೆ, XXIV, ಸಂ. ೪, ಪು. i-iii ಮತ್ತು ೧-೨೬ (೧ನೆಯ ಕಥೆ); ಅದೇ, XXV, ಸಂ. ೨-೩, ಪು. i-v ಮತ್ತು i-viii ೨೭-೪೪ (೨ನೆಯ ಕಥೆ); ಅದೇ, XXV, ಸಂ. ೪, ಪು. ೪೫-೬೬ (೩-೫ ಕಥೆಗಳು); ಅದೇ, XXVI, ಸಂ. ೧, ಪು. ೬೭-೮೮ (೬ ನೆಯ ಕಥೆ); ಅದೇ, XXVI, ಸಂ. ೨, ಪು. ೮೯-೧೦೮ (೭ ೧೦ ಕಥೆಗಳು); ಅದೇ, XXVII, ಸಂ. ೧, ಪು. ೧೦೬-೧೨೮ (೧೧-೧೩ ಕಥೆಗಳು ಮತ್ತು ೧೪ನೆಯ ಕಥೆಯ ಒಂದು ಪುಟ). ಮಂಜೇಶ್ವರ ಗೋವಿಂದ ಪೈ: ಮೂರು ಉಪನ್ಯಾಸಗಳು (ಧಾರವಾಡ, ೧೯೪೦), ಪು. ೧೧೧-೧೨೨; ಕನ್ನಡಸಾಹಿತ್ಯ ಪರಿಷತ್ಪತ್ರಿಕೆ, XXVI, ಸಂ. ೨, ಪು. ೧೩೪-೩೬. ಎಸ್. ಶ್ರೀಕಂಠ ಶಾಸ್ತ್ರಿ: *Sources of Karṇāṭaka History*, Vol. I, (Mysore, 1940), p. XX.

[2] ಇಂಗ್ಲಿಷ್ ಪ್ರಸ್ತಾವನೆಯಲ್ಲಿ ಈ ವಿಷಯಗಳು ಮುಂಚೆಯೇ ಚರ್ಚಿತವಾಗಿವೆ.

ಆರ್ಥೈಸಿದೆ. ಕೊಲ್ಲಾಪುರದ ಪ್ರತಿಯ ಕೊನೆಯಲ್ಲಿ ಮೂರು ಗಾಹೆಗಳು ಅಧಿಕವಾಗಿವೆ (ಜದಿ ತಾ ಏವಂ . . . ಇತ್ಯಾದಿ); ಇವು 'ಭಗವತೀ ಆರಾಧನಾ'ದಲ್ಲಿರುವ ೧೫೫೮-೬೦ ಸಂಖ್ಯೆಯ ಗಾಹೆಗಳೇ ಆಗಿದ್ದು ಮೇಲ್ಕಂಡ ೧೯ ಗಾಹೆಗಳ ನಂತರ ಬಂದಿರುವುವು. ಈ ಕಥೆಗಳನ್ನು ಸಾಲಂಕಾರವಾದ ಕನ್ನಡ ಗದ್ಯದಲ್ಲಿ ನಡುನಡುವೆ ಪ್ರಾಕೃತ (ಅಪಭ್ರಂಶವೂ ಸೇರಿ) ಸಂಸ್ಕೃತ ಕನ್ನಡ ಪದ್ಯವೇಷ್ಟನಗಳನ್ನು ಮಾಡಿ ಪ್ರತಿಪಾದಿಸಿದೆ. 'ಚಾಮುಂಡರಾಯ ಪುರಾಣ'ದ ಶೈಲಿಗಿಂತಲೂ ಇದರ ಶೈಲಿ ಕಡಮೆ ಸಂಸ್ಕೃತಮಯವಾಗಿದ್ದು ವಿಪುಲವಾಗಿ ದೊರೆಯುವ ಈಚಿನ ನೋಂಪಿ ಕಥೆಗಳ ಶೈಲಿಗಿಂತ ಹೆಚ್ಚು ಗಂಭೀರವಾಗಿದೆ. ಧರ್ಮೋಪದೇಶಗಳೂ ಸಾಂಪ್ರದಾಯಕ ಸಂಗತಿಗಳೂ ನಿರೂಪಿತವಾಗುವ ಸಂದರ್ಭಗಳು ಹೊರತಾಗಿ ಮಿಕ್ಕೆಡೆಗಳಲ್ಲಿ ಬರುವ ಈ ಗ್ರಂಥದ ಗದ್ಯ ಶಕ್ತಿಯುಕ್ತವಾಗಿದ್ದು ಸಂಸ್ಕೃತ ಕನ್ನಡ ಶಬ್ದಗಳನ್ನು ಸಮತೂಕದಲ್ಲಿ ಬಳಸಿಕೊಂಡಿದೆ. ಕೆಲವು ಕನ್ನಡ ಚಂಪು ಗ್ರಂಥಗಳಲ್ಲಿ ಕಾಣುವ ಸಂಸ್ಕೃತಪದ ಭೂಯಿಷ್ಠವಾದ ಸಾಂಪ್ರದಾಯಕ ಗದ್ಯಶೈಲಿಯನ್ನು ಇದು ಅನುಕರಿಸದೆ ಸೊಗಸಾದ ದೇಶೀಶೈಲಿಯನ್ನು ಬೆಳಸಿಕೊಂಡಿದೆ; ಸಂಸ್ಕೃತ ಪದಗಳ ವಿಷಯದಲ್ಲಿ ಅಧಿಕ ಪಕ್ಷಪಾತವಿಲ್ಲದೆ ದೇಶಿ ತದ್ಭವ ಪದಗಳನ್ನು ಔಚಿತ್ಯದಿಂದ ಪ್ರಯೋಗಿಸಿದೆ. ಆದರೆ ಅನೇಕ ಕೃದಂತಗಳನ್ನೂ ಕ್ರಿಯಾ ವಿಶೇಷಣಗಳನ್ನೂ ಬಳಸಿರುವುದರಿಂದ ವಾಕ್ಯಗಳ ರಚನೆ ತೊಡಕಾಗಿದೆಯೆಂದೂ ಅಲ್ಲಿ ಇಲ್ಲಿ ಭಾವಗಳ ಸ್ಫುಟವಾದ ನಿರೂಪಣೆ ಪ್ರಯತ್ನಪೂರ್ವಕವಾಗಿದೆಯೆಂದೂ ಕೆಲವರಿಗೆ ತೋರಬಹುದು. ಶಬ್ದಪ್ರಯೋಗದಲ್ಲಿ ಮಿತವ್ಯಯಾಸಕ್ತಿ ಗ್ರಂಥಕರ್ತೃವಿಗೆ ಅಷ್ಟಾಗಿ ಇಲ್ಲ; ಅರ್ಧಮಾಗಧೀ ಗದ್ಯಗ್ರಂಥಗಳಲ್ಲಿರುವಂತೆ ವರ್ಣಕನಿರೂಪಕ ಪುನರುಕ್ತಿಗಳು ಗ್ರಂಥದಲ್ಲೆಲ್ಲ ಧಾರಾಳವಾಗಿ ಬಂದಿವೆ.[1] ಈ ಗ್ರಂಥದ ಶೈಲಿಯ ನಾನಾ ಅಂಶಗಳನ್ನು ಇನ್ನೂ ಹೆಚ್ಚು ಕೂಲಂಕಷವಾಗಿ ಅಭ್ಯಾಸಮಾಡುವ ಆವಶ್ಯಕತೆಯಿದೆ. ಬೇರೆ ಬೇರೆ ಕಥೆಗಳಲ್ಲಿರುವ ಸಮಾನ ಶಬ್ದಪ್ರಯೋಗಗಳಿಂದಲೂ, ಸಮಾನ ಭಾವಗಳಿಂದಲೂ, ಸಮಾನ ಪದ್ಯವೇಷ್ಟನಗಳಿಂದಲೂ ಈ ಹತ್ತೊಂಬತ್ತು ಕಥೆಗಳನ್ನು ರಚಿಸಿದಾತನು—ಅವನು ಯಾರೇ ಇರಲಿ—ಒಬ್ಬನೇ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಹರಿಷೇಣನ 'ಕಥಾಕೋಶ'ದ ೧೨೬-೧೪೪ರ ವರೆಗಿರುವ ಕಥೆಗಳ ಅನುಕ್ರಮವೂ ಈ

---

[1] ನೋಡು: ಗ್ರಾಮೇಕರಾತ್ರಂ, ಇತ್ಯಾದಿ., ಪು. ೪೬ ಅಡಿಟಿಪ್ಪಣಿ ೮, ಪು. ೬೬, ಪಂಕ್ತಿ ೧೬; ವ್ಯಾಧಿಗಳ ಹೆಸರುಗಳು, ವಾತ, ಪಿತ್ತ ಇತ್ಯಾದಿ. ಪು. ೬೩, ೯೨; ಗ್ರಾಮನಗರಖೇಡ ಇತ್ಯಾದಿಯಾದ ಊರುಗಳ ಹೆಸರುಗಳು, ಪು. ೪೬, ೬೬, ೭೭, ೮೨, ೯೬, ೧೧೩ ೧೧೭, ಇತ್ಯಾದಿ.

ಹತ್ತೊಂಬತ್ತು ಕಥೆಗಳ ಕ್ರಮವೂ ಒಂದರ ಹೊರತಾಗಿ[1] ಒಂದೇ ಆಗಿದೆ; ಮೇಲೆ ವಿಮರ್ಶಿಸಿರುವ ಮಿಕ್ಕೆಲ್ಲ ಕೋಶಗಳಿಗಿಂತ ಹರಿಷೇಣನ ಕಥಾಕೋಶವನ್ನು ಈ ಹತ್ತೊಂಬತ್ತು ಕಥೆಗಳು ಬಲು ಹೋಲುತ್ತವೆ. ಒಂದರೊಡನೆ ಒಂದನ್ನು ಹೋಲಿಸಿ ಇವುಗಳನ್ನು ಓದಿದಾಗ ಹಲವು ಸ್ವಾರಸ್ಯಕರವಾದ ವಿಷಯಗಳು ತಿಳಿದುಬರುತ್ತವೆ.[2] ಹರಿಷೇಣನ ಕೋಶದಲ್ಲಿ ಅಲ್ಲಿ ಇಲ್ಲಿ ಕಾಣುವ ಕೆಲವು ಪದ್ಯವೃಂದಗಳಿಗೂ (೧೨೬.೧೯ಇ., ೧೬೨ಇ., ೨೨೦ಇ., ೨೫೬ಇ., ೧೨೭.೧೪೫ಇ., ೨೫೯ಇ., ೮೭ಇ, ೧೩೧.೬೭ಇ. ಇತ್ಯಾದಿ) ವಡ್ಡಾರಾಧನೆಯ ಆಯಾ ಸಂದರ್ಭಗಳಿಗೂ ಬಹು ನಿಕಟವಾದ ಸಾದೃಶ್ಯವಿದೆ. ಇನ್ನೂ ಹೆಚ್ಚು ವಿವರವಾಗಿ ಪರಿಶೀಲಿಸಿದರೆ ಎರಡ ರಲ್ಲಿಯೂ ಹೆಚ್ಚು ಕಡಮೆ ಒಂದೇ ವಿಷಯ ವ್ಯಾಪ್ತಿಯುಳ್ಳ ವೃಷಭಸೇನನ ಕಥೆ ಹೊರತಾಗಿ (ಕಥಾಕೋಶ ೧೩೫ ಮತ್ತು ವಡ್ಡಾರಾಧನೆ ೧೦) ವಡ್ಡಾರಾಧನೆಯ ಮಿಕ್ಕೆಲ್ಲ ಕಥೆಗಳೂ ದೀರ್ಘತರವಾಗಿದ್ದು ಹರಿಷೇಣನು ಹೇಳಿರುವ ವಿಷಯಗಳಿಗಿಂತ ಹೆಚ್ಚು ವಿವರಗಳನ್ನೊಳಕೊಂಡಿವೆ. ಕನ್ನಡ ಗ್ರಂಥದಲ್ಲಿ ಬರುವ ಸುಕೋಶಲನ ಕಥೆ ಹರಿಷೇಣನು ಬರೆದಿರುವ ಅದೇ ಕಥೆಯ ೧೦೭ನೆಯ ಪದ್ಯದಿಂದ ಆರಂಭವಾಗಿ ಅನಂತರ ಮೊದಲ ೧೦೬ ಪದ್ಯಗಳ ವಿಷಯವನ್ನು ನಿರೂಪಿಸುತ್ತದೆ; ಎರಡು ಗ್ರಂಥ ಗಳಲ್ಲಿಯೂ ವಿಷಯನಿರೂಪಣೆ ಅವಶ್ಯವಾಗಿ ಒಂದೇ ಕ್ರಮವನ್ನನುಸರಿಸಿಲ್ಲವೆಂಬುದಕ್ಕೆ ಇದು ಉತ್ಕೃಷ್ಟವಾದ ನಿದರ್ಶನವಾಗಿದೆ. ಸನತ್ಕುಮಾರನ ಕಥೆಯಲ್ಲಿ[3] ಕಾಣುವಂತೆ ಬೇರೆ ಕಥೆಗಳಲ್ಲಿಯೂ ಇರುವ ಉಪಕಥೆಗಳೂ, ಭವಾವಳಿಯ ವಿವರಗಳೂ, ಸಾಂಪ್ರ ದಾಯಕ ವರ್ಣನೆಗಳೂ, ನಿರೂಪಣೆಗಳೂ ವಡ್ಡಾರಾಧನೆಯಲ್ಲಿ ಅಧಿಕತರವಾಗಿ ತೋರಿ ಬರುವುದರಿಂದ ಕೆಲವುವೇಳೆ ಆಯಾ ಕಥಾವಿವರಗಳಿಗಾಗಿ ಬಹುಶಃ ಬೇರೊಂದು ಕಥಾಸಂಪ್ರದಾಯವನ್ನೂ ಅವಲಂಬಿಸಿರುವಂತೆ ಭಾಸವಾಗುತ್ತದೆ. ಈ ಹತ್ತೊಂ

---

[1] ನನ್ನ ಪರಿಶೀಲನೆಗೆ ಇದುವರೆಗೆ ಅಚ್ಚಾಗಿರುವ ೧೦ ಕಥೆಗಳು ಮಾತ್ರ ಒಳಪಟ್ಟಿವೆ. ಮುಂದಿನ ಮೂರು ಕಥೆಗಳು ನನ್ನ ಕೈಸೇರುವುದು ತಡವಾಯಿತು.

[2] ಭಗವತೀ ಆರಾಧನೆಯ ಗಾಥಾನುಕ್ರಮವನ್ನು ನೋಡಿದರೆ ಏಣಿಕಾಪುತ್ರನ ಕಥೆಯು ೫ನೆಯದಾಗಿರಬೇಕು, ಮತ್ತು ಭದ್ರಬಾಹುವಿನ ಕಥೆಯು ೬ನೆಯದಾಗಿರಬೇಕು; ಮುದ್ರಿತ ಪ್ರತಿಯಲ್ಲಿ ಈ ಕ್ರಮವೇ ದೊರೆಯುತ್ತದೆ; ಆದರೆ ಸಂಪಾದಕರು ಈ ೧೬ ಕಥೆಗಳ ಕ್ರಮವನ್ನು ಕೊಟ್ಟ ಸಂದರ್ಭದಲ್ಲಿ ಭದ್ರಬಾಹುವಿನ ಕಥೆಯು ೫ನೆಯದಿದ್ದು ಏಣಿಕಾಪುತ್ರನ ಕಥೆಯು ೬ನೆಯದಾಗಿದೆ.

[3] ಈ ಕನ್ನಡ ಕಥೆ ಉತ್ತರಾಧ್ಯಯನ ಸೂತ್ರಕ್ಕೆ ದೇವೇಂದ್ರನು ಬರೆದಿರುವ ವ್ಯಾಖ್ಯಾನದಲ್ಲಿ ಕಾಣುವ ಕಥೆಯನ್ನು ಕೆಲವು ಭಾಗಗಳಲ್ಲಿಯಾದರೂ ಹೋಲುತ್ತಿರುವುದು ನನ್ನ ನೆನಪಿಗೆ ಬರುತ್ತದೆ; ಪ್ರಾಕೃತ ಕಥಾಸಂಗ್ರಹ (ಅಹಮದಾಬಾದ್, ಸಂವತ್ ೧೯೭೮), ಪು. ೧೭-೨೮.

ಬತ್ತು ಕಥೆಗಳನ್ನಷ್ಟೇ ನೋಡಿದರೆ ಹರಿಷೇಣನು ಪ್ರತಿಯೊಂದು ಕಥೆಯ ಮುಖ್ಯ ಘಟನೆಗಳನ್ನು ಬಳಸಿಲ್ಲದೆ, ಅನಾವಶ್ಯಕವಾದ ಇತರ ಸಂಗತಿಗಳನ್ನು ಸೇರಿಸದೆ ನೇರವಾಗಿ ನಿರೂಪಿಸಿರುವುದು[1] ಕಂಡುಬರುತ್ತದೆ. ಹರಿಷೇಣನು ತನ್ನ ದೊಡ್ಡ ಗ್ರಂಥವನ್ನು ಪರಿಸಮಾಪ್ತಿಗೊಳಿಸುವ ಆತುರದಲ್ಲಿ ಹೆಚ್ಚು ವಿವರಗಳಿಗೆ ಕೈಹಾಕದಿರ ಬಹುದು; ಕನ್ನಡ ಗ್ರಂಥದ ಕರ್ತನಾದರೆ ಸತ್ವಶಾಲಿಯಾಗಿ ತನ್ನ ಕಥೆಗಳನ್ನು ರಚಿಸುತ್ತ ನಿರೂಪಿಸುತ್ತ ಲಂಬಿಸಿರಬಹುದು; ಅವನು ಈ ಸಂದರ್ಭದಲ್ಲಿ ಬರೆದಿರುವು ದೆಲ್ಲ ಇಷ್ಟೇ ಇರಬಹುದು. ಒಟ್ಟಿನ ಮೇಲೆ ಎರಡು ಗ್ರಂಥಗಳಲ್ಲಿಯೂ ಬರುವ ಕಥೆಗಳಲ್ಲಿ ಇರುವ ಅಂಕಿತನಾಮಗಳೇ ಮುಂತಾದುವು ಒಂದೇ ರೀತಿಯವಾಗಿದ್ದರೂ ಎತ್ತಿತೋರಿಸಬಹುದಾದ ಕೆಲವು ಮುಖ್ಯವಾದ ವ್ಯತ್ಯಾಸಗಳಿವೆ. ಕಥಾಕೋಶದಲ್ಲಿ (೧೨೬a.೨೪೩) ಶೈಲಪುರ, ಜಯುಕಾ, ಮೋದಕ ಎಂದಿದ್ದರೆ ವಡ್ಡಾರಾಧನೆ ಯಲ್ಲಿ (i ಪು. ೧೭) ಶ್ವೇತಪುರ, ಜೈಸೆ, ಬೋಧಸ ಎಂದಿದೆ; ಕಥಾಕೋಶದಲ್ಲಿನ (೧೨೭.೧೫೨) ಗಂಧರ್ವಭೂಪಾಲ ಎಂಬುದು ವಡ್ಡಾರಾಧನೆಯಲ್ಲಿ (ii ಪು. ೩೧) ಸುಂದರ (ಪಾಠಾಂತರಗಳು : ಗಂದರ, ಇತ್ಯಾದಿ) ಪಾಂಡ್ಯನೆಂದಾಗಿದೆ; ಸುರೇಂದ್ರ ದತ್ತ (ಕಥಾ. ೧೨೬.೨೧೦) ಎಂಬುದು ಸೂರದತ್ತ (ವಡ್ಡಾ. i. ಪು. ೨೦) ಎಂದೂ ಗೋಮಿನೀ (ಕಥಾ. ೧೨೭, ೨೦೬) ಎಂಬುದು ಗೌರೀ (ವಡ್ಡಾ. ii. ಪು. ೩೩) ಎಂದೂ ಆಗಿವೆ; ಇತ್ಯಾದಿ. ಭಿನ್ನವಾದ ಮತ್ತು ಅಧಿಕವಾದ ಕಥಾವಿವರಗಳು, ಕಥಾಸರಣಿ ಯಲ್ಲಿ ನಿಕಟವಾದ ಸಾದೃಶ್ಯವಿಲ್ಲದಿರುವುದು, ಅಂಕಿತನಾಮಗಳಲ್ಲಿ ಕಾಣುವ ವ್ಯತ್ಯಾಸ ಗಳು—ಇವು ಒಂದು ಗ್ರಂಥ ಇನ್ನೊಂದು ಗ್ರಂಥವನ್ನು ನೇರವಾಗಿ ಅವಲಂಬಿಸಿ ಅನುಸರಿಸುತ್ತದೆಂಬುದಕ್ಕೆ ಪ್ರತಿಬಂಧಕಗಳಾಗಿವೆ. ಈ ಅಂಶಗಳನ್ನೂ ಎರಡಕ್ಕೂ ಸಮಾನವಾದ ಇತರ ಸಂಗತಿಗಳನ್ನೂ ಗಮನಿಸಿ ನೋಡಿದಾಗ, ಎರಡಕ್ಕೂ ಒಂದೇ ಮೂಲವಿದ್ದಿರಬೇಕೆಂಬ ನಿರ್ಣಯ ಉಂಟಾಗುತ್ತದೆ; ಈ ಮೂಲ ಬಹುಶಃ 'ಭಗವತೀ ಆರಾಧನಾ' ಎಂಬ ಗ್ರಂಥಕ್ಕೆ ಇದ್ದಿರಬಹುದಾದ, ಪ್ರಾಕೃತ ಭಾಷಾನಿಬದ್ಧವಾದ ವ್ಯಾಖ್ಯಾನವಿರಬಹುದು; ಇಬ್ಬರು ಗ್ರಂಥಕರ್ತರೂ ತಮತಮಗೆ ಉಚಿತವಾಗಿ ಕಂಡ ರೀತಿಯಲ್ಲಿ ಕಥೆಗಳ ಮೆಯ್ಯನ್ನು ಕೆಡಿಸದೆ, ಉದ್ದೇಶಕ್ಕೆ ಭಂಗತಾರದೆ, ಅವುಗಳನ್ನು ವಿವರವಾಗಿ ನಿರೂಪಿಸಿರಬಹುದು.

ಈ ಕನ್ನಡ ಕಥಾಗುಚ್ಛಕ್ಕೆ 'ವಡ್ಡಾರಾಧನೆ' ಎಂಬ ಹೆಸರಿರುವುದೂ, ಅದು ಭಗವತೀ ಆರಾಧನಾ' ಎಂಬ ಗ್ರಂಥದ ಗಾಹೆಗಳನ್ನು, ಶ್ರೀ ಚಂದ್ರನು ಮಾಡಿರು

[1] ಹರಿಷೇಣನು ವಿವಾಹಸಂದರ್ಭವನ್ನು ಪ್ರಸ್ತಾವಿಸಿದ್ದರೆ ಈ ಕನ್ನಡ ಗ್ರಂಥ ಸ್ವಯಂವರವನ್ನು ವರ್ಣಿಸಿದೆ.

ವಂತೆಯೇ, ಮೂಲವಾಗಿಟ್ಟುಕೊಂಡು ವಿವರಿಸಿರುವುದೂ ಅದು 'ಭಗವತೀ ಆರಾಧನಾ' ಗ್ರಂಥಕ್ಕಿದ್ದ ಯಾವುದೋ ವ್ಯಾಖ್ಯಾನವನ್ನು ಅವಲಂಬಿಸಿರಬೇಕೆಂಬ ವಾದಕ್ಕೆ ಪುಷ್ಟಿಕೊಡುತ್ತದೆ; ಕನ್ನಡ ಗ್ರಂಥಕರ್ತನು ಹರಿಷೇಣನ ಅಥವಾ ಬೇರೆಯೊಬ್ಬನ ಸಂಸ್ಕೃತ ಕಥಾಕೋಶವನ್ನಷ್ಟೇ ಅವಲಂಬಿಸಿದ್ದ ಪಕ್ಷದಲ್ಲಿ ಅವನು ಸಾಧಾರಣವಾಗಿ ಪ್ರಾಕೃತ ಗಾಹೆಗಳನ್ನು ಉದ್ಧರಿಸುತ್ತಿರಲಿಲ್ಲ; ಅಷ್ಟೇ ಅಲ್ಲದೆ ಅಂಕಿತನಾಮಗಳಲ್ಲಿ ವ್ಯತ್ಯಾಸವನ್ನು ಮಾಡುತ್ತಿರಲಿಲ್ಲ. ಮುಂದೆ ತೋರಿಸಿರುವಂತೆ ಹರಿಷೇಣನ ಗ್ರಂಥ ವೊಂದೇ ಅಲ್ಲದೆ ಈ ಕನ್ನಡ ಕಥೆಗಳೂ ಕೂಡ ಪ್ರಾಕೃತ ಮೂಲವನ್ನು ಅನುಸರಿಸಿರ ಬೇಕೆಂಬುದಕ್ಕೆ ಕೆಲವು ಕುರುಹುಗಳು ಎರಡರಲ್ಲಿಯೂ ವ್ಯಕ್ತವಾಗಿವೆ.

ಕನ್ನಡ ನುಡಿಯ ಶಬ್ದಕೋಶದ ಬೆಳವಣಿಗೆಗೆ ಪ್ರಾಕೃತಭಾಷಾವ್ಯಾಪಾರಗಳು ಮಾರ್ಗದರ್ಶಕವಾದುವೆಂಬ ಅಂಶವನ್ನು—ಇನ್ನೂ ಕೂಲಂಕಷವಾದ ಅಭ್ಯಾಸ ವಿಮರ್ಶೆಗಳು ಈ ವಿಷಯದಲ್ಲಿ ನಡೆಯದಿದ್ದರೂ—ಎಲ್ಲರೂ ಒಪ್ಪತಕ್ಕದ್ದಾಗಿದೆ; ತದ್ಭವಗಳಿರುವ ಅಚ್ಚ ಸಂಸ್ಕೃತ ಶಬ್ದಗಳ ಪ್ರಯೋಗಪ್ರಾಚುರ್ಯವು ನಿಂತು ಹೋಗುತ್ತ ಬಂದಿತು; ಈ ತದ್ಭವಗಳು ಪ್ರಾಕೃತ ಲಕ್ಷಣಗಳಿಗೆ ಅನುಸಾರವಾಗಿ ಆಗಲು ಮೊದಲಾಗಿ ಕನ್ನಡದ ಉಚ್ಚಾರಣಾವಿಧಿಗಳಿಗೆ ಅಧೀನವಾಗಿ ಕನ್ನಡದಲ್ಲಿ ತದ್ಭವಗಳಾಗಿ ಪರಿಣಮಿಸಿ ಅಚ್ಚ ಸಂಸ್ಕೃತ ಪದಗಳಿಗೆ ಪ್ರತಿಯಾಗಿ ಪ್ರಯೋಗ ವಾದುವು. ಪ್ರಾಕೃತಭಾಷೆಯ ಈ ರೀತಿಯಾದ ಪ್ರಭಾವ ಕನ್ನಡದಲ್ಲಿ ಪೂರ್ತಿಯಾಗಿ ಇರಲಿ, ಇಲ್ಲದಿರಲಿ, ಈ ಕನ್ನಡ ಕಥೆಗಳಿಗೆ ಪ್ರಾಕೃತ ಗ್ರಂಥವೇ ಆಧಾರವೆಂದು ಸೂಚಿ ಸುವ ಕೆಲವು ಸಂಗತಿಗಳನ್ನು ಕಾಣುತ್ತೇವೆ. ಭದ್ರಬಾಹುವಿನ ಕಥೆಯಲ್ಲಿ ಮಧ್ಯ ದೇಶದ ಮೇರೆಯನ್ನು ಪ್ರಾಕೃತ ಪದ್ಯದಲ್ಲಿ ನಿರೂಪಿಸಿದೆ (ವಡ್ಡಾ. ಪು. ೮೦); ಈ ಪದ್ಯ ಮೂಲಪ್ರಾಕೃತ ಗ್ರಂಥದ ಅವಶೇಷವಾಗಿರಬಹುದು. ಪ್ರಾಕೃತಾವಶೇಷ ಗಳಂತೆ ಕಾಣುವ ಅನೇಕ ಶಬ್ದಗಳು ದೊರೆಯುತ್ತವೆ: ಆಯಂಬಿಲ (ಪು. ೯೧, ಅಡಿ ಟಿಪ್ಪಣಿ ೨), ಛಟ್ಟಟ್ಟಮದಸಮದುವಾಳಸ (ಪು. ೪೦). ಜಾವಜ್ಜೀವಂ (ಪುಟ ೭೬, ೮೨, ೧೦೮). ಪಚ್ಚಕ್ಖಾಣ (ಪು. ೭೬), ಪಡಿಕಮಣ (ಪುಟ ೨೪, ೮೭ ಇತ್ಯಾದಿ), ಬೋಳಹ ಬೋಳಹ (ಪು. ೭೯, ವಿಧಿರೂಪದ ಮಧ್ಯಮ ಪುರುಷ ಬಹುವಚನ, ವೋಲ=ತೊಲಗು, ಹೊರಟುಹೋಗು)[1], ವಕ್ಖಾಣಿಸಿ (ಪು. ೩, ೫); ಇವಲ್ಲದೆ ಲಚ್ಛಿ (ಪು. ೯೧), ಸವಣ (ಪು. ೬), ರಿಸಿ (ಪು. ೯), ಇತ್ಯಾದಿಯಾದ ಇತರ ಶಬ್ದಗಳೂ ಉಂಟು; ಈ ಶಬ್ದಗಳು ಮಾತ್ರ ಪ್ರಾಕೃತ ಮೂಲವನ್ನು ಹೊಂದಿಲ್ಲದ

[1] ಇದಕ್ಕೆ ಸಂವಾದಿಯಾದ ಭಾಗದಲ್ಲಿ (೧೩೦.೩೦) ಹರಿಷೇಣನು 'ಗಚ್ಛ' ಎಂದು ಪ್ರಯೋಗಿಸಿದ್ದಾನೆ.

ಯಾವ ಕನ್ನಡ ಕೃತಿಯಲ್ಲಾದರೂ ದೊರೆಯುವುದು ಅಸಂಭವವೇನೂ ಅಲ್ಲ ಪ್ರಾಕೃತ ಮೂಲವನ್ನು ಕಣ್ಣೆದುರಿರಿಸಿಕೊಂಡು ಹರಿಷೇಣನು ತನ್ನ ಗ್ರಂಥವನ್ನು ರಚಿಸಿರುವನು; ಪ್ರಾಕೃತದ ಹೆಸರುಗಳನ್ನು ಸಂಸ್ಕೃತೀಕರಿಸುವಾಗ ಕಥಾಕೋಶದ್ದೇ ಒಂದುರೀತಿ, ಈ ಕನ್ನಡ ಗ್ರಂಥದ್ದೇ ಒಂದುರೀತಿ. ಉಚ್ಚಾರಣೆಯ ವಿಕಾರಗಳನ್ನೂ ಕಾಗುಣಿತದ ಭ್ರಾಂತಿಗಳನ್ನೂ ಗಮನಿಸಿ ಪರೀಕ್ಷಿಸಿದರೆ ಕೆಲವುವೇಳೆ ಮೂಲಗ್ರಂಥದ ಪ್ರಾಕೃತದ ಹೆಸರು ಯಾವುದಿರಬೇಕೆಂಬುದನ್ನು ನಿರ್ಣಯಿಸಬಹುದು. ದಯಾವಾದ ಮತ್ತು ದಯಾವತ (ಕಥಾ ೧.೨೬, ೨೬; ವಡ್ಡಾ ಪು. ೫, ೬); ಶೈಲಪುರ ಮತ್ತು ಶ್ವೇತಪುರ (ಕಥಾ ೧.೨೬. ೧೨೪; ವಡ್ಡಾ. ಪು. ೧೭), ಸಂವಲ ಮತ್ತು ಶಂಬಲ (ಕಥಾ ೧.೨೬.೫೭; ವಡ್ಡಾ. ಪು. ೧೦); ಸೋದಾಲಿಕಾ ಮತ್ತು ಮೋದಾಳಿ (ಕಥಾ ೧೨೬.೧೩೦; ವಡ್ಡಾ. ೧೭); ರವಿಪಿಂದು ಮತ್ತು ರತಿಪಿಂದು (ಕಥಾ ೧೨೭.೨೪೨; ವಡ್ಡಾ. ಪು. ೩೬); ಜಯುಮತೀ ಮತ್ತು ಜಯಾವತಿ (ಕಥಾ ೧೨೭.೨೬೩; ವಡ್ಡಾ. ಪು. ೩೮); ವಪ್ರವಾದ ಮತ್ತು ವಪ್ರಸಾಳ (ಕಥಾ ೧೩೧.೬೯; ವಡ್ಡಾ. ಪು. ೮೭); ಅಂಶುಮಾನ್ ಮತ್ತು ಸುಮಸ್ತ—ಪಾಠಾಂತರ: ಸುಮಸ—(ಕಥಾ ೧೩೪.೨; ವಡ್ಡಾ. ಪು. ೧೦೦); ಜಿನಪಾಲಿತ ಮತ್ತು ಜಿನವಾದಿಕ (ಕಥಾ ೧೩೫.೭; ವಡ್ಡಾ. ಪು. ೧೦೪); ವಿನ್ಯಾತಟ ಮತ್ತು ವೇಣಾತಟ (ಕಥಾ ೧೩೮.೪೦; ವಡ್ಡಾ. ಪು. *೨೨೬); ಇತ್ಯಾದಿ. ಕೊಲ್ಲಾಪುರದ ಪ್ರತಿಯನ್ನು ಹಾಗೆಯೇ ನೋಡುವಾಗ ವಜ್ರದಾಡ (ಪತ್ರ ೧೧೭), ಮತ್ತು ಭಟ್ಟಿಮಿತ್ರ (ಪತ್ರ ೧೩೭) ಎಂಬ ಹೆಸರುಗಳು ಕಂಡುಬಂದುವು. ಮೇಲೆ ಕಾಣಿಸಿರುವ ಜೊತೆ ಹೆಸರುಗಳು ಎರಡು ಗ್ರಂಥಗಳೂ ಒಂದೇ ಸಂಸ್ಕೃತ ಮೂಲವನ್ನು ಹೊಂದಿದ್ದ ಪಕ್ಷದಲ್ಲಿ ಅಸಂಭವ ವಾಗುತ್ತಿದ್ದುವು; ಇಂತೆಯೇ ಒಂದನ್ನೊಂದು ಅನುಸರಿಸಿದ್ದರೂ. ಈ ಆಧಾರವು ಬಹು ಮುಖ್ಯವಾದುದು; ಈ ಕಥೆಗಳಿಗೆ ಮೂಲ ಪ್ರಾಕೃತ ಗ್ರಂಥವೆಂಬುದನ್ನೂ ಬಹುಶಃ ಎರಡು ಗ್ರಂಥಗಳಿಗೂ ಒಂದೇ ಮೂಲವೆಂಬುದನ್ನೂ ನಿರ್ಣಾಯಕವಾಗಿ ಇದು ಸೂಚಿಸುತ್ತದೆ.

ಈ ಕನ್ನಡ ಕಥೆಗಳಿಗೆ 'ವಡ್ಡಾರಾಧನೆ' ಎಂಬ ಹೆಸರು ಬಂದುಬಿಟ್ಟಿದೆ: ಅವುಗಳ ಸಂಪಾದಕರೂ ಈಚಿನ ಇತರ ಲೇಖಕರೂ ಕಾರಣವಾಗಿ ಈ ಹೆಸರು ಜನಪ್ರಿಯವಾಗಿದೆ; ಮೂಡಬಿದರೆ ಕೊಲ್ಲಾಪುರ ಪ್ರತಿಗಳ ಲೇಖಕರು ಇದೇ ಹೆಸರನ್ನೇ ತಮ್ಮ ಪ್ರತಿಗಳಿಗೆ ಧಾರಾಳವಾಗಿ ಇರಿಸಿದ್ದಾರೆ. ಖಚಿತವಾಗಿ ಹೇಳುವುದಾದರೆ, ಈ ಹತ್ತೊಂಬತ್ತು ಕಥೆಗಳಿಗೆ ಅವುಗಳನ್ನು ರಚಿಸಿದಾತನು ಒಟ್ಟಾಗಿ ಇಟ್ಟ ಹೆಸರೇನೆಂದು ನಿರ್ಣಯಿಸಲು ಯಾವ ಆಧಾರವೂ ಇಲ್ಲ; ನನ್ನ ಅಭಿಪ್ರಾಯದಲ್ಲಿ ಆ ಹೆಸರು ನನ್ನ

ವರೆಗೆ ಉಳಿದುಕೊಂಡು ಬಂದಿಲ್ಲ. ಪ್ರತಿಗಳ ಕೊನೆಯಲ್ಲಿ ದೊರೆಯುವ ಪ್ರತಿಕಾರರ ವಿಷಯವನ್ನು ತಿಳಿಸುವ ವಾಕ್ಯಗಳನ್ನು ಬಿಟ್ಟು ಗ್ರಂಥದ ಪರಿಸಮಾಪ್ತಿ ವಾಕ್ಯವನ್ನು ಪರಿಶೀಲಿಸಿದರೆ ಈ ಸಂಗತಿ ವಿಶದವಾಗುವುದು; ಅದನ್ನು ಹೀಗೆ ಬರೆಯಬಹುದು:

> ಈ ಪೇಳ್ದ ಪತ್ತೊಂಬತ್ತು ಕಥೆಗಳು [||] ಶಿವಕೋಟ್ಯಾಚಾರ್ಯರ್ ಪೇಳ್ದ
> ವೊಡ್ಡಾರಾಧನೆಯ ಕವಚವು ಮಂಗಳಂ ಮಹಾ ಶ್ರೀ |

ಇದು ಮೂಡಬಿದರೆ ಪ್ರತಿಯ ಪಾಠ; ಕೊಲ್ಲಾಪುರದ ಪ್ರತಿಯಲ್ಲಿ ಕೆಲವು ವ್ಯತ್ಯಾಸಗಳಿವೆ; ಅವುಗಳಲ್ಲಿ ಮುಖ್ಯವಾದದ್ದು 'ವಡ್ಡಾರಾಧನೆಯ'. ಅರ್ಥವೇನೋ ಎರಡಕ್ಕೂ ಒಂದೇ; ತಾತ್ಪರ್ಯ ಹೀಗೆ: ಇಲ್ಲಿ ಅಥವಾ ಹೀಗೆ ಹತ್ತೊಂಬತ್ತು ಕಥೆಗಳನ್ನು ಹೇಳಿದೆ; ಶಿವಕೋಟ್ಯಾಚಾರ್ಯರ ವಡ್ಡಾರಾಧನೆಗೆ ಸಂಬಂಧಿಸಿದ ಕವಚವು ಮಂಗಳ, ಮಹಾಶ್ರೀ. ಭಾರತೀಯ ಸಾಹಿತ್ಯದಲ್ಲಿ 'ಕವಚ' ಎಂಬ ಪದವು ಯಾವುದಾದರೂ ದೇವತೆಯನ್ನು ಕುರಿತ ಮಂತ್ರ ಅಥವಾ ಸ್ತೋತ್ರವಿಭಾಗದ ಗ್ರಂಥಗಳನ್ನು ನಿರ್ದೇಶಿಸುತ್ತದೆ; ಈ ಮಂತ್ರಗಳ ಪುನಶ್ಚರಣೆಯಿಂದ ಭಕ್ತನಿಗೆ ಎಲ್ಲ ತೊಂದರೆಗಳೂ ನಿವಾರಣೆಯಾಗುತ್ತವೆಂದೂ ಅವುಗಳಲ್ಲಿ ಅದ್ಭುತವಾದ ಶಕ್ತಿ ಇರುವುದೆಂದೂ ಭಕ್ತನು ಭಾವಿಸುತ್ತಾನೆ; ಸಿಪಾಯಿಯನ್ನು ಕವಚವು ರಕ್ಷಿಸುವಂತೆ ಈ ಮಂತ್ರಗಳೂ ರಕ್ಷಿಸುತ್ತವೆಂದು ನಂಬಿಕೆಯಿದೆ. ಇಂಥ ಕವಚಗ್ರಂಥಗಳನ್ನು ರಚಿಸುವುದು ಜೈನಕವಿಗಳಲ್ಲಿ ಹೆಚ್ಚು ಬಳಕೆಯಲ್ಲಿಲ್ಲ; ಒಂದುವೇಳೆ ರಚಿಸಿದರೆ ಜ್ವಾಲಾಮಾಲಿನೀ, ಪದ್ಮಾವತೀ ಮುಂತಾದ ಶಾಸನ ದೇವತೆಗಳಿಗೆ ಸಂಬಂಧಿಸಿದ್ದಾಗಿರುತ್ತವೆ. ರಕ್ಷಣೆಯನ್ನು ಬೇಡುವ ಕೆಲವು ಪದ್ಯಗಳನ್ನೊಳಕೊಂಡ 'ಶ್ರೀ ಪದ್ಮಾವತೀ ಕವಚ' ಎಂಬೊಂದು ಗ್ರಂಥವು ಭಂಡಾರಕರ್ ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಷನ್ನಿನಲ್ಲಿದೆ (ನಂ. ೫೭೫, ೧೮೯೫–೯೬ ವರ್ಷ). ಆರಾಧನಾ ಗ್ರಂಥಗಳಿಗೆ ಸೇರಿದ ಕವಚಭಾಗವು ತೀರ ಬೇರೆಯಾದದ್ದು. ಹಲವು ಪರೀಷಹಗಳನ್ನು ಎದುರಿಸುವಷ್ಟು ಧೈರ್ಯ ಬರುವುದಕ್ಕಾಗಿ ಆರಾಧಕನಿಗೆ ಅವನ ಆಯುರವಸಾನ ಸಮಯದಲ್ಲಿ ಇತರರು ಹೇಳುವ ಧರ್ಮವೀರರ ಕಥಾನಕಗಳು ಕವಚವೆನ್ನಿಸಿಕೊಳ್ಳುತ್ತವೆ. ಇದು ಕವಚದಂತೆ ಆಧ್ಯಾತ್ಮಿಕ ರಕ್ಷಣಾಕಾರ್ಯವನ್ನು ಮಾಡುತ್ತದೆ. 'ಜೀತಕಲ್ಪಸೂತ್ರಂ' ಎಂಬ ಗ್ರಂಥದ ಭಾಷ್ಯದಲ್ಲಿ[1] ಕವಚದ್ವಾರ (ಗಾಥೆಗಳು ೪೭೬–೪೯೦) ಎಂಬೊಂದು ವಿಭಾಗವಿದೆ; 'ಕವಚದ್ವಾರ'ದ ಕೈ ಬರಹದ ಪ್ರತಿಗಳೇ ಸ್ವತಂತ್ರವಾಗಿಯೂ ದೊರೆಯುತ್ತವೆ.[2] (ಭ.ಓ.ರಿ.ಇ, ಪೂನ. ೧೮೯೫–೯೬ ವರ್ಷ

---

[1] ಪುಣ್ಯವಿಜಯರಿಂದ ಸಂಪಾದಿತ, ಅಹಮದಾಬಾದ್, ಸಂವತ್ ೧೯೯೪.

[2] *Descriptive Catalogue*, Vol. XVIII, part I (Poona, 1935), pp. 330, 380.

ಗಳ ಸಂ. ೫೭೯); ಜೈನಸಿದ್ಧಾಂತದ ಪ್ರಕೀರ್ಣಕ ಗ್ರಂಥ ಸಮುದಾಯದಲ್ಲಿ ಹಲವುವೇಳೆ ಇದನ್ನು ಸೇರಿಸುತ್ತಾರೆ. ಮೇಲೆ ಕಾಣಿಸಿರುವ ಗ್ರಂಥ ಪರಿಸಮಾಪ್ತಿ ವಾಕ್ಯದಲ್ಲಿ ಶಿವಕೋಟ್ಯಾಚಾರ್ಯನದೆಂದು ಹೇಳಿರುವ 'ಕವಚ'ವು 'ಭಗವತೀ ಆರಾಧನಾ' ಎಂಬ ಗ್ರಂಥದ (೧೫೦೯–೧೬೮೨) ವರೆಗಿರುವ ಗಾಥೆಗಳನ್ನೊಳ ಕೊಂಡ, 'ಕವಚ' ಎಂಬ ಹೆಸರನ್ನೇ ಉಳ್ಳ ಅಧಿಕಾರವೆಂದು ನಿರ್ದಿಷ್ಟವಾಗಿ ಹೇಳ ಬಹುದು; ಇದರಲ್ಲಿ ಪರೀಷಹ ಜಯಕ್ಕಾಗಿ ಕವಚದಂತಿರುವ ಕೆಲವು ಧರ್ಮ ಬೋಧೆ ಗಳು ಅಡಕವಾಗಿವೆ. ಕನ್ನಡ ಕಥೆಗಳ ಆರಂಭದಲ್ಲಿ ಉದ್ಧರಿಸಿರುವ ಪ್ರಾಕೃತ ಗಾಥೆ ಗಳು 'ಈ ಕವಚ' ವಿಭಾಗದಿಂದ ಎತ್ತಿಕೊಂಡುವು; ಇವು ಇಂಥ ನಿದರ್ಶನಾತ್ಮಕ ವಾದ ಗಾಥೆಗಳಲ್ಲಿ ಬಹು ಶ್ರೇಷ್ಠವಾದವು. 'ವೃಷಭಸೇನ'ನ ಕಥೆ ಮುಗಿದ ಕೂಡಲೇ ಶ್ರೀಚಂದ್ರನು ತನ್ನ ಅಪಭ್ರಂಶ 'ಕಥಾಕೋಷ'ದಲ್ಲಿ 'ಕವಚಾಹಿಯಾರೋಯಂ' ಎಂಬ ವಾಕ್ಯವನ್ನು ಬರೆದಿದ್ದಾನೆ; ಈ ಕವಚಾಧಿಕಾರವು ಈ ಹತ್ತೊಂಬತ್ತು ಕಥೆ ಗಳಿಂದ ಏಕೆ ಮುಕ್ತಾಯವಾಗಿದೆಯೆಂಬುದನ್ನು ಇದು ಸ್ವಲ್ಪ ತಿಳಿಸುತ್ತದೆ. ವಡ್ಡಾ ರಾಧನೆ ಅಥವಾ ವಡ್ಡಾರಾಧಣಾ (ಪ್ರಾಕೃತ) ಎಂಬುದು ಶಿವಕೋಟಿಯ 'ಭಗ ವತೀ ಆರಾಧನಾ' ಎಂಬ ಗ್ರಂಥದ ಮತ್ತೊಂದು ಹೆಸರೆಂದು ಇದರಿಂದ ವ್ಯಕ್ತ ವಾಗುತ್ತದೆ. ಈ ಹೆಸರಿನ ರೂಪಸಿದ್ಧಿಯ ವಿಚಾರದಲ್ಲಿ ಈಗಾಗಲೇ ಬಹು ಚರ್ಚೆ ವಿಮರ್ಶೆಗಳು ನಡೆದಿವೆ. ವೃಧ್ ಮತ್ತು ಬೃಹ್ ಎಂಬ ಧಾತುಗಳು ಸಮಾನಾರ್ಥಕ ವಾಗಿದ್ದು ಬೇರೆಬೇರೆ ರೂಪಗಳಾಗಿರುವಂತೆ ಕಾಣುತ್ತವೆ; ವಡ್ಡ (=ದೊಡ್ಡ) ಎಂಬ ಪ್ರಾಕೃತ ಪದಕ್ಕೆ ಇದು ಮೂಲವಾಗಿದೆ. ಅದರ ರೂಪನಿಷ್ಪತ್ತಿ ಕೊಂಚ ಕ್ಲೇಶದಾಯಕವಾಗಿರುವುದರಿಂದ ಪ್ರಾಕೃತಜ್ಞರು ಅದನ್ನು ದೇಶೀಶಬ್ದಗಳ ಪಟ್ಟಿ ಯಲ್ಲಿ ಸೇರಿಸಿದ್ದಾರೆ. ಏನೇ ಆಗಿರಲಿ, ವಡ್ಡಾರಾಧಣಾ ಎಂದರೆ ದೊಡ್ಡ ಆರಾಧನೆ ಎಂದರ್ಥ; ಮೇಲೆ ತೋರಿಸಿರುವಂತೆ 'ಭಗವತೀ ಆರಾಧನಾ' ಗ್ರಂಥವು ಇದು ವರೆಗೆ ದೊರೆತಿರುವ ಆರಾಧನಾ ಗ್ರಂಥಗಳಲ್ಲಿ ಒಂದು ದೊಡ್ಡ ಗ್ರಂಥವಾಗಿದೆ ಆದ್ದರಿಂದ 'ಭಗವತೀ ಆರಾಧನಾ' ಗ್ರಂಥವನ್ನು ಇತ್ತೀಚೆಗೆ ರಚಿತವಾದ ಇತರ ಸಣ್ಣ ಆರಾಧನಾ ಗ್ರಂಥಗಳಿಂದ ಪ್ರತ್ಯೇಕಿಸುವುದಕ್ಕಾಗಿ 'ಮೂಲಾರಾಧನಾ' 'ವಡ್ಡಾರಾಧಣಾ' ಎಂಬಿತ್ಯಾದಿ ಹೆಸರುಗಳಿಂದ ಕರೆದರೆಂದು ಕಾಣುತ್ತದೆ. ಮೇಲೆ ಹೇಳಿದ ಕವಚವಿಶಿಷ್ಟವಾದ ಪರಿಸಮಾಪ್ತಿ ವಾಕ್ಯವು ಭಗವತೀ ಆರಾಧನಾ ಗ್ರಂಥ ವನ್ನೂ ಅದರ ಕರ್ತೃ ಶಿವಕೋಟಿಯನ್ನೂ ನಿರ್ದೇಶಿಸುತ್ತಿದೆಯೇ ಹೊರತು ಕನ್ನಡ ಗ್ರಂಥದ ಹೆಸರನ್ನಾಗಲಿ ಅದರ ಕರ್ತನನ್ನಾಗಲಿ ಕುರಿತು ಏನನ್ನೂ ತಿಳಿಸುತ್ತಿಲ್ಲ.

ಕೊಲ್ಲಾಪುರದ ಪ್ರತಿಯನ್ನು ಅನುಸರಿಸಿ ಪಾಠಕರು ಗ್ರಂಥಕರ್ತನ ಹೆಸರನ್ನು

ರೇವಾಕೋಟ್ಯಾಚಾರ್ಯ ಎಂದು ಪ್ರಚಾರಕ್ಕೆ ತಂದರು. ಜೈನ ಲೇಖಕರಲ್ಲಿ ಯಾರಿಗಾದರೂ ಈ ಹೆಸರಿದ್ದದ್ದು ತೀರ ಅಸಂಭವ; ಮೂಲಮಾತೃಕೆಯಲ್ಲಿದ್ದ ಹಳಗನ್ನಡದ 'ಶಿ' ಎಂಬಕ್ಷರವನ್ನು ಕೊಲ್ಲಾಪುರ ಪ್ರತಿಯ ಲೇಖಕನು 'ರೆ' ಎಂದು ತಪ್ಪಾಗಿ ಬರೆದಿರುವುದು ಹೆಚ್ಚು ಸಂಭವವಾಗಿದೆ; ಈಚೆಗೆ 'ಶಿವಕೋಟ್ಯಾಚಾರ್ಯ' ಎಂಬ ಪಾಠವನ್ನು ಕೊಡುವ ಇತರ ಪ್ರತಿಗಳು ಬೆಳಕಿಗೆ ಬಂದಿವೆ. ಈ ಕನ್ನಡ ಕಥೆಗಳಿಗೆ ಮೂಲವಾದ ಪದ್ಯಗಳನ್ನುಳ್ಳ ವಡ್ಡಾರಾಧಣಾ ಎಂಬ ಗ್ರಂಥದ ಕರ್ತ ಶಿವಕೋಟಿಯೆಂದು ಮೇಲೆ ಕೊಟ್ಟಿರುವ ಗ್ರಂಥ ಪರಿಸಮಾಪ್ತಿವಾಕ್ಯದ ಅಭಿಪ್ರಾಯವೆಂದು ಇದುವರೆಗೆ ಮಾಡಿರುವ ವಿಚಾರದಿಂದ ಸ್ಪಷ್ಟವಾಗಿದೆ. ಮೂಡಬಿದರೆ ಕೊಲ್ಲಾಪುರ ಪ್ರತಿಗಳನ್ನು ಅನುಸರಿಸಿ ಈ ಕನ್ನಡ ಕೃತಿಯನ್ನು 'ವಡ್ಡಾರಾಧನೆ' ಎಂದು ಕರೆಯಬಹುದಾದರೂ ಆ ಕಥೆಗಳ ರಚನೆಯನ್ನು ಶಿವಕೋಟಿಯ ತಲೆಗೆ ಕಟ್ಟುವುದಕ್ಕೆ ಯಾವ ಆಧಾರವೂ ಕಾಣುವುದಿಲ್ಲ. ನಿರ್ಣಯವಿಷ್ಟು: ಈ ಕಥೆಗಳನ್ನು ವಡ್ಡಾರಾಧನೆ ಎಂದು ಕರೆಯಬಹುದು; ಅವುಗಳ ಕರ್ತೃ ಯಾರೋ ನಮಗೆ ತಿಳಿಯದು.

ಶಿವಕೋಟಿಯ ಮತ್ತು ಅವನ 'ಭಗವತೀ ಆರಾಧನಾ' ಗ್ರಂಥದ ಕಾಲ ಇಂಥದಿರಬಹುದೆಂಬುದನ್ನು ನಾನು ಆಗಲೇ ಚರ್ಚಿಸಿದ್ದೇನೆ.[1] ಈಗ ಈ ಕನ್ನಡ ಗ್ರಂಥದ ಕಾಲವನ್ನು ಸುಮಾರಾಗಿ ಕಂಡುಹಿಡಿಯುವ ಪ್ರಯತ್ನಕ್ಕೆ ತೊಡಗಬೇಕಾಗಿದೆ; ಈ ವಿಷಯವಾಗಿ ಆಗಲೇ ಕೆಲವು ಅಭಿಪ್ರಾಯಗಳು ಪ್ರಕಟವಾಗಿವೆ. (1) ಪಾಠಕರು ಈ ಗ್ರಂಥ ಕ್ರಿ.ಶ. ೧೧೮೮ರಲ್ಲಿ ಹುಟ್ಟಿದ ತೊರಗಲ್ಲು ಶಾಸನಕ್ಕೆ ಸಮಕಾಲಿಕವಾದದ್ದೆಂಬ ಸೂಚನೆಯನ್ನು ಪ್ರಾಸಂಗಿಕವಾಗಿ ಹೇಳಿದ್ದಾರೆ; ಈ ಗ್ರಂಥದ ಪೂರ್ಣಪ್ರತಿಯನ್ನು ಪರೀಕ್ಷೆಮಾಡುವ ಅವಕಾಶ ದೊರೆಯದ್ದರಿಂದ ರಾ. ನರಸಿಂಹಾಚಾರ್ಯರು ಪಾಠಕರ ಅಭಿಪ್ರಾಯವನ್ನು ಸುಮ್ಮನೆ ಒಪ್ಪಿಕೊಂಡು ಸು. ೧೧೮೦ (ಕ್ರಿ.ಶ.) ಎಂದು ಗ್ರಂಥರಚನೆಯ ಕಾಲವನ್ನು ಕೊಟ್ಟಿದ್ದಾರೆ. (2) ಕ್ರಿ.ಶ. ೮ನೆಯ ಶತಮಾನದ ವರೆಗೆ ಕನ್ನಡ ಶಾಸನಗಳಲ್ಲಿ ದೊರೆಯುವ ಒಂ, ಒಳ್, ಒರ್, ಮುಂತಾದ ಹಳೆಯ ಪ್ರತ್ಯಯಗಳು ಈ ಗ್ರಂಥದಲ್ಲಿ ಪ್ರಯೋಗವಾಗಿವೆ; ಇರ್ದೊನ್, ಪೊರ್ದಿರ್ದೊನ್ ಮುಂತಾದ ಹಳೆಯ ಕ್ರಿಯಾರೂಪಗಳು ಇಲ್ಲಿವೆ; ಹತ್ತನೆಯ ಶತಮಾನದ ವರೆಗಿನ ಕನ್ನಡ ಗ್ರಂಥಗಳಲ್ಲಿ ದೊರೆಯುವ ಅಮ್ಮ (= ಅಪ್ಪ) ಎಂಬುದು ಈ ಗ್ರಂಥದಲ್ಲೆ ಸಿಕ್ಕುವುದು; ಚಾವುಂಡರಾಯ ಪುರಾಣದ (ಕ್ರಿ.ಶ. ೯೭೮) ಶೈಲಿಗೂ ಇದರ ಶೈಲಿಗೂ ಸಾದೃಶ್ಯವಿದೆ; ಇಲ್ಲಿ ಬರುವ ಭದ್ರಬಾಹುವಿನ ಕಥೆಗೂ ಕ್ರಿ.ಶ. ೯೩೧ರಲ್ಲಿ ಹರಿಷೇಣನಿಂದ ರಚಿತವಾದ 'ಕಥಾಕೋಶ'ದಲ್ಲಿರುವ

[1] ಈ ವಿಷಯವು ಇಂಗ್ಲಿಷ್ ಪ್ರಸ್ತಾವನೆಯ ಮುಂಚಿನ ಅಂಶದಲ್ಲಿ ಚರ್ಚಿತವಾಗಿದೆ.

ಭದ್ರಬಾಹುವಿನ ಕಥೆಗೂ ಹೋಲಿಕೆಯಿರುವುದರಿಂದ ಆ ಸಂಸ್ಕೃತ ಗ್ರಂಥ ಇದಕ್ಕೆ ಆಕರವಾಗಿರಬಹುದು—ಈ ಕಾರಣಗಳಿಂದ ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಈ ಗ್ರಂಥದ ಕಾಲ ಸು. ೯೪೦ ಇರಬೇಕೆಂದು ಹೇಳಿದ್ದಾರೆ. (3) ಈ ಗ್ರಂಥದ ಕಾಲನಿರ್ಣಯಕ್ಕೆ ಶ್ರೀ ಎಂ. ಗೋವಿಂದ ಪೈ ಅವರು ಈ ಮುಂದೆ ಹೇಳುವ ವಾದವನ್ನು ಹೂಡಿದ್ದಾರೆ. ಭರ್ತೃಹರಿ ಶತಕಗಳಲ್ಲಿರುವ ಕೆಲವು ಪದ್ಯಗಳು 'ವಡ್ಡಾರಾಧನೆ'ಯಲ್ಲಿ ಉದ್ಧೃತವಾಗಿವೆ; ಆದರೆ ಆ ಶತಕಗಳ ಪಾಠವಾಗಲಿ ಕಾಲವಾಗಲಿ ನಿರ್ಣೀತವಾಗಿಲ್ಲ. 'ವಡ್ಡಾರಾಧನೆ'ಯಲ್ಲಿ ದೀನಾರ ಎಂಬ ಪದವು ಪ್ರಯೋಗವಾಗಿರುವುದರಿಂದ ಆ ಗ್ರಂಥ ಕ್ರಿ.ಶ. ೭ನೆಯ ಶತಮಾನಕ್ಕಿಂತ ಈಚಿನದಾಗಿರಬೇಕು. ಕ್ರಿ.ಶ. ೬೫೦ ರ ಶ್ರವಣಬೆಳಗೊಳದ ಶಾಸನದಲ್ಲಿ ಪ್ರಥಮತಃ ಪ್ರಯುಕ್ತವಾಗಿರುವ ಕಟ್ಟಪ್ಪು ಎಂಬ ಪದದಿಂದಲೇ ಬೆಳಗೊಳವನ್ನು ಈ ಗ್ರಂಥದಲ್ಲಿ ಕರೆದಿರುವುದರಿಂದ ಈ ಗ್ರಂಥ ಕ್ರಿ.ಶ. ೬೫೦ ಕ್ಕಿಂತ ಸಾಕಷ್ಟು ಹಿಂದಿನದಾಗಿರಬೇಕು. ಇದನ್ನು ಸಮರ್ಥಿಸುವುದಕ್ಕಾಗಿ ಅವರು ಪ್ರಾಚೀನ ಕನ್ನಡ ಗ್ರಂಥಗಳಿಂದಲೂ ಶಾಸನಗಳಿಂದಲೂ ಶಬ್ದಗಳನ್ನೂ ಶಬ್ದರೂಪಗಳನ್ನೂ ಕ್ರೋಡೀಕರಿಸಿದ್ದಾರೆ; ಆದ್ದರಿಂದ ಕನ್ನಡ 'ವಡ್ಡಾರಾಧನೆ'ಯ ಕಾಲವನ್ನು ಕ್ರಿ.ಶ. ೬ನೆಯ ಶತಮಾನಕ್ಕಿಂತ ಈಚೆಗೆ ಹಾಕಲಾಗುವುದಿಲ್ಲ. ಅವರ ಕೆಲವು ಹೇಳಿಕೆಗಳು ಆಧಾರರಹಿತವಾದುವು, ಕಾಲ್ಪನಿಕವಾದುವು; ತಮ್ಮ ಉದ್ದೇಶಸಾಧನೆಗಾಗಿ ಎಲ್ಲ ಯುಕ್ತಿಗಳನ್ನೂ ಹೇಗೋ ಬಳಸಿಕೊಂಡು ಈ ಗ್ರಂಥಕ್ಕೆ ಅತಿಪ್ರಾಚೀನವಾದ ಕಾಲವನ್ನು ಕೊಡಲೇಬೇಕೆಂಬ ಆಗ್ರಹವನ್ನು ಅವರು ತೊಟ್ಟಿರುವಂತೆ ಯಾರಿಗಾದರೂ ತೋರಬಹುದು.[1] ಅವರು ಕೊಡುವ ಕಾರಣಗಳೂ ಹೂಡಿರುವ ಪೂರ್ವಪಕ್ಷಗಳೂ ಅವರ ಸಿದ್ಧಾಂತದ ಕಡೆಗೆ ತರ್ಕಬದ್ಧವಾಗಿ ಸಾಗುವುದಿಲ್ಲ. ಕಾಲನಿರ್ಣಯ ಕಾರ್ಯವು ಅಭಿರುಚಿಯ ಮತ್ತು ಅಭಿಪ್ರಾಯತೀವ್ರತೆಯ ವಿಷಯವಲ್ಲ: ದೊರೆಯುವ ಆಧಾರಗಳನ್ನು ನಿಷ್ಪಕ್ಷಪಾತತೆಯಿಂದ ವಿಮರ್ಶಿಸಿ ಈ ಗ್ರಂಥದ ಕಾಲವಿಷಯವಾಗಿ ವರಿಷ್ಠ ಕನಿಷ್ಠ ಕಾಲಾವಧಿಗಳಾವುವೆಂಬುದನ್ನು ಕಂಡುಹಿಡಿಯಬೇಕಾಗಿದೆ. (೪) ಪ್ರೊ. ಎಸ್. ಶ್ರೀಕಂಠಶಾಸ್ತ್ರಿಗಳು ತಮ್ಮ ನಿರ್ಣಯಕ್ಕೆ ಯಾವ ವಾದವನ್ನೂ ಹೂಡದೆ ಶಿವಕೋಟಿಯ 'ವಡ್ಡಾರಾಧನೆ' ಕ್ರಿ.ಶ. ೬ನೆಯ ಶತಮಾನಕ್ಕೆ ಸೇರುತ್ತದೆಂದು ಹೇಳಿದ್ದಾರೆ.

---

[1] ಶ್ರೀ. ಪೈ ಅವರ ಕೆಲವು ಹೇಳಿಕೆಗಳೂ ಪೂರ್ವಪಕ್ಷಗಳೂ ತಪ್ಪಾಗಿವೆಯಲ್ಲದೆ ತಿಳಿದ ಸಂಗತಿಗಳಿಗೆ ವಿರುದ್ಧವೂ ಆಗಿವೆ. ಸಂಸ್ಕೃತ ಕೃತಿಯಲ್ಲಿ ಪ್ರಾಕೃತ ಗಾಥೆಗಳನ್ನು ರಚಿಸಿಡುವ ಅಥವಾ ಉದ್ಧರಿಸುವ ಪದ್ಧತಿಯಿಲ್ಲವೆಂದೂ, ಪ್ರಾಕೃತ ಕೃತಿಗಳಲ್ಲಿ ಸಂಸ್ಕೃತ ಪದ್ಯವೇಷ್ಟನವಾಗಲಾರದೆಂದೂ, ಪ್ರಾಕೃತವು ಪ್ರೌಢ ಸಾಹಿತ್ಯವಲ್ಲವೆಂದೂ ಇರುವ ಅವರ ಹೇಳಿಕೆಗಳೆಲ್ಲ ಕಾಲ್ಪನಿಕವಾದುವು; ಚರ್ಚಿಸಿ ಸುಳ್ಳೆಂದು ಸಾಧಿಸುವುದಕ್ಕೂ ಅವು ಅನರ್ಹ.

ಈ ಗ್ರಂಥವನ್ನು, ಅದರಲ್ಲಿಯೂ ಅಚ್ಚಾಗಿರುವ ಭಾಗವನ್ನು, ಕಣ್ಣಿಟ್ಟು ಓದಿರುವುದರಿಂದ ನನಗೆ ಕೆಲವು ಸಂಗತಿಗಳು ತಿಳಿದುಬಂದಿವೆ; ಅವುಗಳನ್ನು ಇಲ್ಲಿ ಸಮೂದಿಸಿ ಈ ಮುಖ್ಯವಾದ ಕನ್ನಡ ಗ್ರಂಥದ ರಚನೆ ಯಾವ ಕಾಲಾವಧಿಯಲ್ಲಿ ನಡೆದಿರಬೇಕೆಂಬುದನ್ನು ತಿಳಿಸಲು ಪ್ರಯತ್ನಿಸುತ್ತೇನೆ. ಆಂತರಿಕ ಆಧಾರಗಳನ್ನು ಪರಿಶೀಲಿಸುವಾಗ ಈ ಗ್ರಂಥದಲ್ಲಿ ಪ್ರಾಕೃತ (ಅಪಭ್ರಂಶವೂ ಸೇರಿ), ಸಂಸ್ಕೃತ ಕನ್ನಡ ಪದ್ಯವೇಷ್ಟನಗಳು ಹೇರಳವಾಗಿರುವುದು ಕಂಡುಬರುತ್ತದೆ. ಕೆಲವು ಪ್ರಾಕೃತ ಸಂಸ್ಕೃತ ಪದ್ಯಗಳು ಈ ಗ್ರಂಥದ ಪ್ರಾಕೃತ ಮೂಲದಿಂದ ನೇರವಾಗಿ ಬಂದಿರಲೂ ಬಹುದು; ಉಳಿದ ಕೆಲವು, ಕನ್ನಡ ಪದ್ಯಗಳೂ ಸೇರಿ, ಈ ಕನ್ನಡ ಗ್ರಂಥಕರ್ತನೇ ಸೇರಿಸಿದುವಾಗಿರಬಹುದು. ಒಂದೇ ಅರ್ಥವನ್ನು ಕೊಡುವ ಪದ್ಯವೃಂದಗಳು ಏಕೆ ಬಂದಿವೆಯೆಂಬುದು (ಪು. ೮, ೯, ೯೬, ೯೭, ಇತ್ಯಾದಿ) ಇದರಿಂದ ಸ್ವಲ್ಪ ವಿಶದ ವಾಗಬಹುದು. ಎಲ್ಲ ದೊರೆಯುವ ಪ್ರತಿಗಳಲ್ಲಿಯೂ ಏಕಕಂಠವಾಗಿ ಉದ್ಧೃತ ವಾಗಿರುವ ಈ ಪದ್ಯವೇಷ್ಟನಗಳ ಮೂಲಗಳನ್ನು ನಾವು ಕಂಡುಹಿಡಿದರೆ ಈ ಗ್ರಂಥದ ಮಿಶ್ರಕಾಲಾವಧಿಯನ್ನು ಗೊತ್ತುಮಾಡಲು ಅಷ್ಟೇನೂ ಕಷ್ಟವಾಗಲಾರದು. ಕೆಲವು ಪದ್ಯವೇಷ್ಟನಗಳ ಮೂಲಗಳನ್ನು ನನಗೆ ಕಂಡುಹಿಡಿಯಲು ಸಾಧ್ಯವಾಯಿತು; ಅವುಗಳನ್ನು ಈಗಿನ ಮಟ್ಟಿಗೆ ತಿಳಿದಿರುವ ಕಾಲಕ್ರಮದ ಪ್ರಕಾರ ಕೆಳಗೆ ಸಮೂದಿಸು ತ್ತೇನೆ. ಹತ್ತೊಂಬತ್ತು ಕಥೆಗಳ ಆರಂಭದಲ್ಲಿರುವ ಗಾಹೆಗಳೂ, ಕೊಲ್ಲಾಪುರದ ಪ್ರತಿಯ ಕೊನೆಯಲ್ಲಿರುವ ಮೂರು ಗಾಹೆಗಳೂ ಗುರುದತ್ತನ ಕಥೆಯಲ್ಲಿ ಉದ್ಧೃತ ವಾಗಿರುವ "ಜಹ ಜಹ" ಎಂದು ಮೊದಲಾಗುವ ಗಾಹೆಯೂ (ಕೊಲ್ಲಾಪುರದ ಪ್ರತಿ, ಪು. ೧೨೦) ಶಿವಕೋಟಿಯಿಂದ ರಚಿತವಾದ 'ಭಗವತೀ ಆರಾಧನಾ' ಗ್ರಂಥ ದಲ್ಲಿ ಅಲ್ಪಪಾಠಭೇದಗಳೊಡನೆ ದೊರೆಯುತ್ತವೆ. ಕನ್ನಡ ಗ್ರಂಥಕರ್ತನು ಮಂಗಳ ಶ್ಲೋಕಗಳೆಂದು, ಕೊಲ್ಲಾಪುರದ ಪ್ರತಿಯ ಪ್ರಕಾರ, ಗ್ರಂಥಾದಿಯಲ್ಲಿ ಕೊಟ್ಟಿರುವ ಮೂರು ಪ್ರಾಕೃತಪದ್ಯಗಳಲ್ಲಿ ಮೊದಲನೆಯದು ಕುಂದಕುಂದಾಚಾರ್ಯರ 'ಪಂಚಾಸ್ತಿ ಕಾಯ' (ಸಂ. ೧)ದಲ್ಲಿಯೂ ಎರಡನೆಯದು 'ಪ್ರವಚನಸಾರ' (ಸಂ. ೧) ದಲ್ಲಿಯೂ ಸಿಕ್ಕುತ್ತವೆ. 'ಖಮ್ಮಾಮಿ . . .' ಎಂದು ಮೊದಲಾಗುವ ಗಾಹೆ (ಪು. ೪೩) 'ಮೂಲಾಚಾರ'ದಲ್ಲಿಯೂ (II. ೭) 'ಪ್ರತಿಕ್ರಮಣ'ದಲ್ಲಿಯೂ (ಪು. ೯, ಭಾವನಗರ ಮುದ್ರಣ, ಸಂವತ್ ೧೯೫೪) ದೊರೆಯುತ್ತದೆ; 'ಹಾದುಟ್ಟು . . .' ಎಂದು ಪ್ರಾರಂಭವಾಗುವ ಪದ್ಯವೂ ಅಲ್ಪಪಾಠವ್ಯತ್ಯಾಸಗಳನ್ನು ಹೊಂದಿ 'ಪ್ರತಿಕ್ರಮಣ' ಗ್ರಂಥಕ್ಕೇ ಸೇರಿರುವಂತೆ (ಅದೇ, ಪು. ೧೦) ಕಾಣುತ್ತದೆ. 'ಯದ್ಯಪಿ . . . .' ಎಂಬ ಪದ್ಯ ಉಮಾಸ್ವಾತಿಯ 'ಪ್ರಶಮರತಿ ಪ್ರಕರಣ'ದಿಂದ ಉದ್ಧೃತವಾದದ್ದು.

ಗ್ರಂಥಾದಿಯ 'ನಮಃ ಶ್ರೀ . . .' ಎಂಬ ಸಂಸ್ಕೃತ ಪದ್ಯ, ಸು. ಕ್ರಿ.ಶ. ೨ನೆಯ ಶತಮಾನಕ್ಕೆ ಸೇರಿದವರಾದ ಸಮಂತ ಭದ್ರರ 'ರತ್ನಕರಂಡಕ' ಗ್ರಂಥದ ಮಂಗಳ ಶ್ಲೋಕವಾಗಿದೆ. 'ಯೇಷಾಂ ನವಿದ್ಯಾ . . .' (ಪು. ೯೭), 'ಯಾವತ್ ಸ್ವಸ್ಥಮಿದಂ . . .' (ಪು. ೨೨೯), ಮತ್ತು 'ತೃಷ್ಣಾಂಥಿಂಧಿ . . . (ಪು. ೧೨೧ (a) ಕೊಲ್ಲಾಪುರ ಪ್ರತಿ) ಎಂಬ ಪದ್ಯಗಳು ಭರ್ತೃಹರಿಯ ಶತಕಗಳಿಂದ (ನೀತಿ, ೧೩; ವೈರಾಗ್ಯ, ೮೮; ನೀತಿ, ೭೭)[1] ಬಂದಿವೆ; ಆದರೆ ಭರ್ತೃಹರಿಯ ಕಾಲವಾಗಲಿ ಆತನ ಶತಕಗಳಲ್ಲಿ ಇಂಥ ಮತ್ತು ಇಷ್ಟೇ ಪದ್ಯಗಳಿದ್ದಿರಬೇಕೆಂಬ ವಿಷಯವಾಗಲಿ ಅನಿರ್ದಿಷ್ಟವಾಗಿದೆ. 'ಥಿಜ್ಜಉ . . .' ಎಂಬ ಅಪಭ್ರಂಶ ಪದ್ಯವೇಷ್ಟನವು ಕ್ರಿ.ಶ. ೬ನೆಯ ಶತಮಾನದಲ್ಲಿ ಪ್ರಾಯಶಃ ಜೀವಿಸಿದ್ದ ಜೋಇಂದು[2] ಎಂಬಾತನ 'ಪರಮಾತ್ಮಪ್ರಕಾಶ'ಕ್ಕೆ ಸೇರಿದ್ದಾಗಿದೆ. ಗುರುದತ್ತನ ಕಥೆಯಲ್ಲಿ ಕಾಣುವ 'ಕಸ್ಯಮಾತಾ . . .' ಎಂದು ಮೊದಲಾಗುವ ಪದ್ಯ (ಪು. ೧೧೯ (a) ಕೊ. ಪ್ರತಿ) ಕ್ರಿ.ಶ. ಸು. ೬ನೆಯ ಶತಮಾನದ ಅಂತ್ಯದಲ್ಲಿದ್ದ ಜಟಾಸಿಂಹನಂದಿಯಿಂದ ವಿರಚಿತವಾದ 'ವರಾಂಗಚರಿತ'ದಲ್ಲಿ ದೊರೆಯುತ್ತದೆ (xv. ೭೮)[3]. 'ಆದೌಜನ್ಮ . . .' ಎಂದು ಮೊದಲಿಡುವ ಪದ್ಯ 'ಮಹಾಪುರಾಣ'ದಲ್ಲಿ, ಗುಣಭದ್ರರು ವಿರಚಿಸಿದ ಭಾಗದಲ್ಲಿ, ದೊರೆಯುತ್ತದೆ (ಅಧಿ. ೪೬–೧೯೬, ಪು. ೩೧೨೧, ಕೊಲ್ಲಾಪುರ ಮುದ್ರಣ); ಗುಣಭದ್ರರು ಈ ಭಾಗವನ್ನು ಶಕ ೮೨೦ (+ ೭೮ = ಕ್ರಿ.ಶ. ೮೯೮) ಕ್ಕೆ, ಎಂದರೆ ಲೋಕಸೇನನು ಆ ಗ್ರಂಥಕ್ಕೆ ಪ್ರತಿಷ್ಠೆಯನ್ನುಂಟುಮಾಡಿದ ಕಾಲಕ್ಕೆ, ಕೊಂಚ ಹಿಂದೆಯೇ ಪೂರ್ಣಗೊಳಿಸಿದನು[4] ಈ ಪದ್ಯವೇಷ್ಟನಗಳು ಮೇಲೆ ಹೇಳಿರುವ ಆಕರ ಗ್ರಂಥಗಳಿಗಿಂತ ಇನ್ನೂ ಹೆಚ್ಚು ಪ್ರಾಚೀನವಾದ ಗ್ರಂಥಗಳಲ್ಲಿ ದೊರೆಯುವುವೆಂದೂ ಕನ್ನಡ ಗ್ರಂಥದಲ್ಲಿ ಉದ್ಧೃತವಾಗಿರುವ ಪದ್ಯಗಳ ಸತ್ಯತೆಯ ಬಗ್ಗೆ ಸಂದೇಹವಿದೆಯೆಂದೂ ಬೇರೆ ಆಧಾರಗಳನ್ನಿತ್ತು ತೋರಿಸಿಕೊಡುವ ವರೆಗೆ ಕನ್ನಡ 'ವಡ್ಡಾರಾಧನೆ' ಶಕ ೮೨೦ ಅಥವಾ ಕ್ರಿ.ಶ. ೮೯೮ಕ್ಕಿಂತ ಹಿಂದಿನದಲ್ಲವೆಂದು ಒಪ್ಪಿಕೊಳ್ಳಲೇಬೇಕಾಗುತ್ತದೆ.

ಇತರ ಪದ್ಯವೇಷ್ಟನಗಳಲ್ಲಿ 'ಸೋಧರ್ಮೋ - - -' ಎಂಬ ಪದ್ಯ (ಪು. ೯) ವನ್ನು ಪದ್ಮಪ್ರಭಾನೆಂಬಾತನು[5] (ಕಾಲ. ಸು. ೧೨–೧೩ನೆಯ ಶತಮಾನಗಳ ಅಂತ್ಯಾದಿ)

---

1 ಈ ಸಂಖ್ಯೆಗಳು ತೆಲಾಂಗ್ ಅವರ ಮುದ್ರಣದಿಂದ (ಬೊಂಬಾಯಿ, ೧೮೭೪).

2 ಆ ಗ್ರಂಥದ ಪೀಠಿಕೆ ಪು. 67. ನನ್ನಿಂದ ಸಂಪಾದಿತವಾದದ್ದು (ಬೊಂಬಾಯಿ, 1937).

3 ಮಾಣಿಕಚಂದ್ರ ದಿ. ಜೈ. ಗ್ರಂಥಮಾಲೆಯಲ್ಲಿ ನನ್ನಿಂದ ಸಂಪಾದಿತವಾದದ್ದು (ಬೊಂಬಾಯಿ, ೧೯೩೮), ಪೀಠಿಕೆ, ಪು. 22; ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, XXV, ಸಂ. ೩, ಪು. ೧೩೩-೧೪೬.

4 ಪ್ರೇಮಿ: ಜೈನ ಸಾಹಿತ್ಯ ಔರ್ ಇತಿಹಾಸ್, ಪು. ೫೧೩f.

5 *Journal of the University of Bombay*, September, 1942.

'ನಿಯಮಸಾರ' ಕ್ಕೆ ತಾನು ಬರೆದಿರುವ ವ್ಯಾಖ್ಯಾನದಲ್ಲಿ (I. ೬, ಪು. ೬) 'ತಥಾ ಚೋಕ್ತಂ' ಎಂದು ಉದ್ಧರಿಸಿರುವುದು ಕಾಣುತ್ತದೆ; 'ಕಾಲೇ ಸಂಪ್ರತಿ' ಎಂಬ ಪದ್ಯ (ಪು. ೮೧) ಸು. ಕ್ರಿ.ಶ. ೧೪೯೪ರಲ್ಲಿದ್ದ ಸಕಲಕೀರ್ತಿಯ 'ಸುಭಾಷಿತಾವಲೀ' ಎಂಬ ಗ್ರಂಥದಲ್ಲಿ ಅಲ್ಪಪಾಠ ಭೇದಸಹಿತವಾಗಿ ದೊರೆಯುತ್ತದೆ; ಆದರೆ ಇದು ಸಂಕಲನ ಗ್ರಂಥ. ಪ್ರಕೃತ ನಮ್ಮ ಗ್ರಂಥದ ಕಾಲನಿರ್ಣಯಕ್ಕೆ ಈ ಆಧಾರಗಳಿಂದ ಯಾವ ಪ್ರಯೋಜನವೂ ಇಲ್ಲ.

ಹರಿಷೇಣನ 'ಕಥಾಕೋಶ'ವು ಗಂಧರ್ವಭೂಪಾಲ ಎಂಬ ರಾಜನೊಬ್ಬನನ್ನು ಹೆಸರಿಸಿದೆ (೧೨೭–೧೫೨); ಆದರೆ ಅದೇ ಸಂದರ್ಭದಲ್ಲಿ ಈ ಕನ್ನಡ ಗ್ರಂಥ 'ಸುಂದರ ಪಾಂಡ್ಯ' ಎಂದು ಆ ರಾಜನ ಹೆಸರನ್ನು ಹೇಳುತ್ತದೆ; ಇದಕ್ಕೆ ಗಂದರ, ಗಾಂದಾರ, ಗಂದಾರ (ಪು. ೩೧) ಎಂಬ ಪಾಠಾಂತರಗಳಿವೆ. ಪಾಂಡ್ಯರಾಜರ ಹೆಸರುಗಳ ಹಿಂದೆ 'ಸುಂದರ' ಎಂಬ ಅಂಕಿತ ಹಲವುಬಾರಿ ಪ್ರಯುಕ್ತವಾಗಿರುವುದರಿಂದಲೂ[1] ಸರಿಯಾದ ಪಾಠವೇ ಅನಿಶ್ಚಿತವಾಗಿರುವುದರಿಂದಲೂ ಈ ಅಂಶವನ್ನು ಕಾಲನಿರ್ಣಯ ಕಾರ್ಯಕ್ಕೆ ಉಪಯೋಗಿಸಿಕೊಳ್ಳುವುದು ಅಪಾಯಕರ.

ಹೀಗೆ 'ವಡ್ಡಾರಾಧನೆ' ಕ್ರಿ.ಶ. ೮೯೮ಕ್ಕಿಂತ ಈಚಿನದೆಂದೂ ಕ್ರಿ.ಶ. ೧೪೦೩ಕ್ಕಿಂತ (ಈಗ ದೊರೆತಿರುವ ಪ್ರಾಚೀನತಮ ಪ್ರತಿಯ ಕಾಲ) ಹಿಂದಿನದೆಂದೂ ದೃಢವಾಗಿ ಸ್ಥಾಪಿಸಬಹುದು.

ಈ ಗ್ರಂಥದ ಶೈಲಿಯನ್ನೂ ವ್ಯಾಕರಣದ ದೃಷ್ಟಿಯಿಂದ ಅಪೂರ್ವವಾದ ಪ್ರಯೋಗಗಳನ್ನೂ ಪರಿಶೀಲಿಸಿ ಮೇಲೆ ಕೊಟ್ಟಿರುವ ಕಾಲಗಳ ಅಂತರವನ್ನು ಕಡಿಗ್ಗಿಸಲು ಸಾಧ್ಯವೇ, ಇಲ್ಲವೇ ಎಂಬುದನ್ನು ನೋಡೋಣ. ಈ ಗ್ರಂಥದ ಗದ್ಯಶೈಲಿ 'ಚಾವುಂಡರಾಯ ಪುರಾಣ'ದ ಶೈಲಿಗಿಂತ ಈಚಿನದೆಂದೂ ನೋಂಪಿ ಕಥೆಗಳ ಗದ್ಯಶೈಲಿಗಿಂತ ಹಳೆಯದೆಂದೂ ನನಗೆ ತೋರುತ್ತದೆ; ಹೀಗೆ ಹೇಳುವಾಗ ಈ ಕಥೆಗಳಲ್ಲಿ ಸಂಸ್ಕೃತ ಪದಪ್ರಯೋಗ ಅಲ್ಪತರವಾಗಿರುವುದನ್ನೂ ಇವುಗಳ ದೇಶೀಯವಾದ ನುಡಿಗಟ್ಟನ್ನೂ ಗಮನಿಸಿದೆ. ಆದ್ದರಿಂದ ಈ ಗ್ರಂಥದ ಕಾಲವನ್ನು ನಾನು 'ಚಾವುಂಡರಾಯ ಪುರಾಣ'ದ ಕಾಲಕ್ಕಿಂತ (ಕ್ರಿ.ಶ. ೯೭೮) ಈಚೆಗೆ ಹಾಕುತ್ತೇನೆ. ಹಳೆಯ ಶಬ್ದರೂಪಗಳೇ ಮುಂತಾದ ಆಧಾರಗಳ ಮೇಲೆ ಈ ಗ್ರಂಥಕ್ಕೆ ಅತಿಪ್ರಾಚೀನತೆಯನ್ನು ಕೊಡುವ ಪ್ರಯತ್ನವಾಗಿದೆ. ಈ ಶಬ್ದರೂಪಗಳ ಮತ್ತು ಪ್ರಯೋಗಗಳ ಬೆಲೆಯನ್ನು ನಿರ್ಣಯಿಸುವಾಗ ಪ್ರತಿಗಳ ಲೇಖಕರು ತಮ್ಮ ತಮ್ಮ

[1] Smith: *Early History of India*, 3rd. edition, Oxford, (1914, ಪು. 456, Banerji: *Prehistoric, Ancient and Hindu India*, Calcutta, 1939, ಪು. 283.

ಕಾಲಗಳಲ್ಲಿ ಬಳಕೆಯಲ್ಲಿದ್ದ ಪ್ರಯೋಗಗಳನ್ನು ಅಲ್ಲಿ ಇಲ್ಲಿ ಗ್ರಂಥದಲ್ಲಿ ತಂದುಹಾಕಿ ತಿದ್ದಿರಬಹುದೆಂಬುದನ್ನು ಗಮನದಲ್ಲಿರಿಸಿಕೊಳ್ಳಬೇಕು; ಹೀಗೆ ನಡೆದಿದೆಯೆಂಬುದಕ್ಕೆ ಗ್ರಂಥದಲ್ಲಿರುವ ಹಲವು ಪಾಠಾಂತರಗಳೇ ಸಾಕ್ಷಿಯಾಗಿವೆ; ಆದ್ದರಿಂದ ಇವುಗಳನ್ನು ಆಧಾರವಾಗಿರಿಸಿಕೊಂಡು ಮಾಡುವ ನಿರ್ಣಯಗಳೆಲ್ಲ ಸ್ಥಿರವಾದುವಲ್ಲ. ವ್ಯಾಕರಣದ ದೃಷ್ಟಿಯಿಂದ ಪ್ರಾಚೀನತರವಾದ ಪ್ರಯೋಗರೂಪ ಸಾಮಗ್ರಿ ಗ್ರಂಥದಲ್ಲಿದೆಯೆಂದು ಅನ್ನಿಸುತ್ತದೆ; ಆದರೆ ಇದಿಷ್ಟರಿಂದಲೇ ಗ್ರಂಥದ ಪ್ರಾಚೀನತೆಯನ್ನು ಪ್ರಮಾಣಿಸಲು ಸಾಧ್ಯವಿಲ್ಲ; ಗ್ರಂಥಕರ್ತನು ಕನ್ನಡನುಡಿಯ ಪ್ರಾಚೀನ ಅವಸ್ಥಾಭೇದಗಳಲ್ಲಿ ಪರಿಣತನಾಗಿದ್ದನೆಂಬುದನ್ನು ಇವು ಸೂಚಿಸಬಹುದು. ಶ್ರೀಮಾನ್ ಪೈಗಳು ಮಾಡಿರುವಂತೆ ಹಳೆಯ ಶಬ್ದರೂಪಗಳನ್ನು ಕಂಡು ಹಿಡಿಯುವುದಷ್ಟೇ ಸಾಲದು; ಅವು ಎಲ್ಲಿಯವರೆಗೆ ಬಳಕೆಯಲ್ಲಿದ್ದುವು, ಯಾವಾಗ ಅವು ತಪ್ಪಿಹೋಗಿ ಹೊಸರೂಪಗಳಿಗೆ ಎಡೆಕೊಟ್ಟವು ಎಂಬ ಕಾಲಾವಧಿಯನ್ನು ನಿರ್ಣಯಿಸಲು ಸಾಧ್ಯವಾಗಿರಬೇಕು; ಹೀಗೆ ಮಾಡಿದರೂ ಕೂಡ ಆ ಕಾಲದ ಈಚಿನ ಎಲ್ಲೆಯನ್ನು ಸದ್ಯದ ಮಟ್ಟಿಗೆ ಹೇಳಲು ಸಹಾಯವಾಗುವುದೇ ಹೊರತು ಹಿಂದಿನಕಾಲದ ಎಲ್ಲೆಗಲ್ಲ. ನಾನು ಹೇಳುವ ಮಾತುಗಳಿಗೆ ಗ್ರಂಥದ ಸಕೃದವಲೋಕನ ಮಾತ್ರ ಆಧಾರವಾಗಿದೆ; ಕನ್ನಡ ಪಂಡಿತರು ಯಾರಾದರೂ ಕೂಲಂಕಷವಾಗಿ ಗ್ರಂಥವನ್ನು ಅಭ್ಯಾಸಮಾಡಿ ಪ್ರಾಚೀನರೂಪಗಳ ಸಂಖ್ಯಾಬಲಾಬಲಗಳನ್ನು ಗೊತ್ತುಹಚ್ಚಿ ವಿಚಾರಮಾಡುವರೆಂದು ನಂಬಿದ್ದೇನೆ. ಈ ಗ್ರಂಥದಲ್ಲಿ ಪದಾದಿಯ ಪಕಾರಕ್ಕೆ ಸಾಧಾರಣವಾಗಿ 'ಹ' ಬರುವುದಿಲ್ಲ; ಪೋದಪೆಂ (ಪು. ೩), ಪೇೞ್ದಂ (ಪು. ೧೧), ಪುಟ್ಟಿದೊಂ, ಪುಟ್ಟಿದಳ್ (ಪು. ೩೩); ವೋದನ್ ಎಂಬ ರೂಪವೂ ಉಂಟು (ಪು. ೨೮). ಪಕಾರ ಕ್ರಮೇಣ ಹಕಾರಕ್ಕೆ ಮಾರ್ಪಾಟಾದದ್ದು ಕ್ರಿ.ಶ. ೧೧ನೆಯ ಶತಮಾನವಾದ ಮೇಲೆ ಎಂದು ಶಾಸನಗಳಿಂದ ತಿಳಿದುಬರುತ್ತದೆ.[1] ಇರ್ದ್ದು (ಪು. ೪೮), ಇರ್ಪ್ಪೊರ್ (ಪು. ೫೫), ಕರ್ಚಿತ್ತು (ಪು. ೩೧) ಮುಂತಾದೆಡೆಗಳಲ್ಲಿ ರೇಫಸಂಯುಕ್ತ ಈ ಗ್ರಂಥದಲ್ಲಿ ದೊರಕುತ್ತದೆಯೇ ಹೊರತು ಅದಕ್ಕೆ ಸಜಾತೀಯತ್ವ ಪ್ರಾಪ್ತಿಯಾಗಿಲ್ಲ. ಹೀಗೆ ಸಜಾತೀಯವಾಗುವುದು ಹನ್ನೆರಡನೆಯ ಶತಮಾನದ ಮಧ್ಯಭಾಗದ ಜನರ ಬಾಯಿಮಾತಿನಲ್ಲಿ ಕಣ್ದೋರಿತಾದರೂ ೧೩ನೆಯ ಶತಮಾನ ಮುಗಿಯುವ ಹೊತ್ತಿಗೆ ಸಾರ್ವತ್ರಿಕವಾದ ಭಾಷಾವ್ಯಾಪಾರವಾಗಿ ಪರಿಣಮಿಸಿತು.[2] ಕೊನೆಯದಾಗಿ ಪೊರ್ದಿದೊಂ (ಪು. ೧)

---

[1] A. N. Narasimhaiya: *A Grammar of the Oldest Kanarese Inscriptions*, Mysore (1941) ಪು. 2.

[2] ಅದೇ, ಪು. 92.

ಕಳ್ಪೆಂ (ಪು. ೧೨), ಕೂಡಿದೊಂ (ಪು. ೨೭), ಸತ್ತೊಳ್ (ಪು. ೩೪)—ಸತ್ತಳ್ ಎಂದೂ ಉಂಟು (ಪು. ೩೮)—ಎಂಬಂಥ ಕ್ರಿಯಾರೂಪಗಳು ಇಲ್ಲಿ ದೊರೆಯುತ್ತವೆ; ನಿಸ್ಸಂದೇಹವಾಗಿ ಇವು ಪ್ರಾಚೀನರೂಪಗಳು[1]; ಆದರೆ ೧೧ನೆಯ ಶತಮಾನವಾದ ಮೇಲೆ ಇವುಗಳ ಪ್ರಯೋಗ ವಿರಳವಾಗುತ್ತದೆ.[2] ಮೇಲೆ ಹೇಳಿದ ಭಾಷಾವೈಲಕ್ಷಣ್ಯಗಳು ಕನ್ನಡ 'ವಡ್ಡಾರಾಧನೆ'ಯ ಕಾಲ ಕ್ರಿ.ಶ. ೮೯೮–೧೪೦೩ರ ವರೆಗಿರುವ ವಿಶಾಲವಾದ, ಆದರೆ ನಿಷ್ಕೃಷ್ಟವಾದ ಅಂತರಕ್ಕೆ ಸೇರಿದೆಯೆಂಬುದನ್ನೂ, ಬಹುಶಃ ಅದು ೧೧ನೆಯ ಶತಮಾನದಲ್ಲಿ ರಚಿತವಾಗಿರಬಹುದೆಂಬುದನ್ನೂ ಸೂಚಿಸುತ್ತವೆ.

ಮೂಲ (ಇಂಗ್ಲಿಷ್) ಲೇಖಕರು : ಡಾ|| ಎ. ಎನ್. ಉಪಾಧ್ಯೆ
(ಅನುವಾದಕರು : ಡಿ. ಎಲ್. ಎನ್.)

---

[1] ಅದೇ, ಪು. 168, 206.

[2] ಕ್ರಿ.ಶ. ೫ನೆಯ ಶತಮಾನದ, ಅದಕ್ಕೂ ಸ್ವಲ್ಪ ಈಚಿನ, ಶಾಸನಗಳಲ್ಲಿ ದೊರೆಯುವ-ಆನ್, -ಉಳ್ ಎಂಬ ದ್ವಿತೀಯಾ ಸಪ್ತಮೀ ವಿಭಕ್ತಿಗಳೂ,-ಆನ್,-ಆಳ್ ಮತ್ತು-ಆರ್ ಎಂಬ ಪ್ರಥಮ ಪುರುಷ ಏಕ ಬಹುವಚನಗಳ ಪ್ರತ್ಯಯಗಳೂ ವಡ್ಡಾರಾಧನೆಯಲ್ಲಿ ಕಾಣುತ್ತಿಲ್ಲವೆಂದು ನನಗೆ ನನ್ನ ಮಿತ್ರರಾದ ಪ್ರೊ|| ಕುಂದಣಗಾರರು ತಿಳಿಸಿದ್ದಾರೆ (ಹಲ್ಮಿಡಿ ಶಾಸನವನ್ನು ನೋಡುವುದು, *Sources of Karṇāṭaka History*, p. 20)

# ಸಂಧ್ಯಾಯಕ್ಷಿಣಿ

ಸಂಧ್ಯಾಶಿಲ್ಪಿಯ ಸುವರ್ಣಯಕ್ಷಿಣಿ
ಮೇಘಲೋಕಕೆ ಓಕುಳಿಯೆರಚಿದೆ
ವಿಧವಿಧ ರೂಪದ ವಿಧವಿಧ ವರ್ಣದ
ಚಿತ್ರರಥೋತ್ಸವಕೆ.
ಚಿಂತಾತೀತಂ ಭಾಷಾತೀತಂ
ಬುದ್ಧಿಗಸಾಧ್ಯಂ ಹೃತ್‌ಸಂವೇದ್ಯಂ
ಭಾವ ತರಂಗಗಳೇಳುತಿವೆ,
ವಿವಿಧಾಕಾರವ ತಾಳುತಿವೆ,
ಗಗನ ಮಹಾ ಮನದಿ !
ನಿಶ್ಚಳ ಪಕ್ಷ್ಮಂ ನಿಶ್ಚಳ ತಾರಂ
ನಿಷ್ಪಂದಿತ ತನು ತಾನ್,
ಕಾಯ್ದಾ ಕಬ್ಬುನ ನೀರಾಗುವವೋಲ್
ಹೊಮ್ಮಿದ ಗಾನಂ ದೂರಾಗುವವೋಲ್,
ಭಾವ ಸಮಾಧಿಯಿನಂತಸ್ಸಾರನ್
ಧ್ಯಾನಪ್ರಲಯಿತ ಕವಿ ತಾನಾದನ್
ಬೈಗಿನ ಬಾನ್ !

"ಕುವೆಂಪು"

---

# ರಾಹು

'ಒಯ್ಯನೆ ಬಂದಂಬರದೊಳ್
ಮೆಯ್ಯಂ ಮಱೆಮಾಡಿ ಕಲಸಿದಮೃತದ ತುತ್ತಂ
ಸುಯ್ಯದೆಳೆದುಂಬ ಕಾಲನ
ಕಯ್ಯೆನೆ ನಿಮಿರ್ದತ್ತು ರಾಹು ಸಸಿವಿಡಿದೆಡೆಯೊಳ್'

—ಮಧುರ.

ಬಾಬಯ್ಯನ ಮೆರವಣಿಗೆ ಅಂಗಡಿಬೀದಿಯ ಚೌಕಕ್ಕೆ ಬಂದಿತ್ತು. ಜನ ಸುತ್ತಲೂ ಘೇರಾಯಿಸಿ, ನಿಂತು ಕೌತುಕದಿಂದ ನೋಡುತ್ತಿದ್ದರು. ಕಿವಿ ಕಿವುಡಾಗುವಂತೆ ಒಂದೆಸಮನೆ ತಂಬಟೆ ಘೋರಿಡುತ್ತಿತ್ತು. ಮಧ್ಯೆಮಧ್ಯೆ ಅದರ ಹೊಯ್ಲನ್ನು ಮೆಟ್ಟಿ 'ಅಲಿ—ದೂಲ' ಎಂಬ ಕೂಗೂ ಅದಕ್ಕೆ ಮರುದನಿ ಕೊಟ್ಟಂತೆ 'ಅಬೀರ್—ಅಬೀರ್' ಎಂಬ ಕೂಗೂ ಅದರ ಜೊತೆಯಲ್ಲಿ ಜನ ಸಮ್ಮರ್ದದ ಮೂಕ ಗೆದ್ದಲವೂ ಕೇಳಿಬರುತ್ತಿದ್ದುವು. ನಿಮಿಷಕ್ಕೊಮ್ಮೆ ಬಾಬಯ್ಯನ ಮಂಟಪಗಳ ಮುಂದೆ ಗುಗ್ಗುಳ ಹಾಕಿದಂತೆ ಘಗ್ಗನೆ ಹೊಗೆ ಉರಿಗಳೆದ್ದು ಸಾಂಬ್ರಾಣಿಯ ವಾಸನೆ ಸುತ್ತಿಕೊಳ್ಳುತ್ತಿತ್ತು. ಮಂಟಪಗಳನ್ನು ಹೊತ್ತಿದ್ದವರು ತಪ್ಪುಹೆಜ್ಜೆ ಹಾಕುತ್ತಿದ್ದರು. ಚಿಲ್ಲರೆ ವೇಷಗಳನ್ನು ಹಾಕಿದ್ದ ನಾಲ್ಕಾರುಮಂದಿ ಗರಡಿಯ ಹುಡುಗರು ಮಂಟಪಗಳ ಮುಂದೆ ಅವರಿಗಾಗಿ ತೆರವು ಮಾಡಿದ್ದ ಜಾಗದಲ್ಲಿ ಹಿಡಿತವಿಲ್ಲದ ಕುಣಿತಗಳನ್ನು ಕುಣಿಯುತ್ತಿದ್ದರು. ಮೆರವಣಿಗೆಯ ಮುಂದಾಳುಗಳಂತೆ ಕಂಡುಬರುತ್ತಿದ್ದ ಹಲವುಮಂದಿ ಇಳಿವಯಸ್ಸಿನ ಮುಸಲ್ಮಾನರು ಮೌನವಾಗಿ ತಲೆ ಬಗ್ಗಿಸಿಕೊಂಡು ಮುಂದೆ ನಡೆದುಬರುತ್ತಿದ್ದರು. ನೋಟ ನೋಡುತ್ತಿದ್ದ ಜನದ ದೃಷ್ಟಿ ಗುಂಪಿನಲ್ಲಿ ಏನನ್ನೊ ಹುಡುಕುವಂತೆ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಚಲಿಸುತ್ತಿತ್ತು. ಒಂದನ್ನು ಇನ್ನೊಂದು ಸಂಧಿಸಿ ಏನನ್ನೊ ಪ್ರಶ್ನಿಸುವಂತೆ ತೋರುತ್ತಿತ್ತು. ಆದರೆ ಈ ದೃಷ್ಟಿಪ್ರಶ್ನೆಗೆ ಮೌನವೆ ಉತ್ತರವಾಗಿ ಎಲ್ಲರೂ ಸುಮ್ಮನಾಗಿ ಮತ್ತೆ ಮೂಕನೋಟದಲ್ಲಿ ಮುಳುಗುತ್ತಿದ್ದರು.

ಇಷ್ಟಕ್ಕೂ ಕಾರಣವಿತ್ತು. ಕಳೆದ ಎಂಟು ಹತ್ತು ವರ್ಷಗಳಿಂದ ತಪ್ಪದೆ ಹುಲಿ ವೇಷ ಹಾಕುತ್ತಿದ್ದ ಅಮೀರ್ ಸಾಬಿ ಈಸಲ ವೇಷ ಹಾಕಿರಲಿಲ್ಲ. ಕೊನೆಗೆ ಗುಂಪಿನಲ್ಲಿ ಕೂಡ ಅವನು ಎಲ್ಲೂ ಕಂಡುಬರಲಿಲ್ಲ. ಅವನೆಲ್ಲಿದ್ದಾನೆಂದೂ ಏಕೆ ವೇಷ ಹಾಕಲಿಲ್ಲವೆಂದೂ ಕೇಳುವ ಕುತೂಹಲ ಗುಂಪಿನಲ್ಲಿ ಬಹುಮಂದಿಗೆ ಇದ್ದರೂ ಅದೇಕೊ ಬಾಯಿಗೆ ಬಂದ ಪ್ರಶ್ನೆಯನ್ನು ನಾಲಗೆಯಿಂದ ತಡೆದು ಸುಮ್ಮನಾಗಿಬಿಡುತ್ತಿದ್ದರು.

ಅಮೀರ್ ಎಲ್ಲಿದ್ದಾನೆಂಬುದು ಗುಂಪಿನಲ್ಲಿ ಯಾರಿಗೂ ತಿಳಿಯದು. ಅವನು ಇಂದು ವೇಷ ಹಾಕದಿರುವುದಕ್ಕೆ ಕಾರಣವನ್ನು ಮಾತ್ರ ಎಲ್ಲರೂ ಹುಡುಕುವವರೆ ಆಗಿದ್ದರು.

ಆದರೆ ಅಮೀರ್ ತನ್ನ ಮನೆಯಲ್ಲೆ ಇದ್ದ. ಮನಸ್ಸನ್ನು ಕಲ್ಲುಮಾಡಿಕೊಂಡು ಕುಳಿತಿದ್ದರೂ ಬಾಬಯ್ಯನ ಮೆರವಣಿಗೆ ಅಂಗಡಿಬೀದಿಗೆ ಬಂದ ಸದ್ದನ್ನೂ ವಾದ್ಯ ಘೋರ್ಗರೆಯುತ್ತಿದ್ದುದನ್ನೂ ಕಿವಿ ಕದ್ದು ಕೇಳಿತು. ಅಮೀರನ ಮೈ ಒಂದು ಕ್ಷಣ ನಡುಗಿಹೋಯಿತು. ಮೈಯಲ್ಲಿ ವಿದ್ಯುತ್ತು ಹರಿದಂತಾಯಿತು. ಕಣ್ಣು ಮುಚ್ಚಿ ಕೊಂಡು ಹಣೆಯಮೇಲೆ ಕೈಯಿಟ್ಟುಕೊಂಡು ಕುಳಿತ. ಹಣೆ ಕೆಂಡದಂತೆ ಸುಡುತ್ತಿತ್ತು, ಒಡೆದುಹೋಗುವಷ್ಟು ಮಟ್ಟಿಗೆ ಬಡಿದುಕೊಳ್ಳುತ್ತಿತ್ತು. ಕ್ಷಣಕ್ಷಣಕ್ಕೆ ಬಿಸಿಯುಸಿರು ಧಾವಿಸಿ ಬರುತ್ತಿತ್ತು. ಮುಖದಮೇಲೆ ಅಲ್ಲೊಂದು ಇಲ್ಲೊಂದು ಬೆವರು ಹನಿ ಮೂಡುತ್ತಿತ್ತು. ಇದ್ದಕ್ಕಿದ್ದ ಹಾಗೆ ಹೊಸದೊಂದು ಭಾವನೆ ಮನಸ್ಸಿನಲ್ಲಿ ಮಿಂಚಿ ನಂತೆ ಸುಳಿದುಹೋಯಿತು. ಅಮೀರನ ಮೈ ಮತ್ತೆ ನಡುಗಿತು. ಕಣ್ಣುಬಿಟ್ಟು ಮೈಯನ್ನು ಮೇಲಿನಿಂದ ಕೆಳಗಿನವರೆಗೂ ಒಂದುಸಲ ನೋಡಿಕೊಂಡ. ಥಟ್ಟನೆ ಎರಡು ಕೈಗಳನ್ನೂ ಮೇಲಕ್ಕೆ ಎತ್ತಿ ಹುಲಿವೇಷದ ಒಂದು ವಿಚಿತ್ರ ವಿನ್ಯಾಸವನ್ನು ಅನುಭವಿಸಿದ. ಕಟ್ಟೆಯೊಡೆದು ಕಿತ್ತುಕೊಂಡು ಬರುವ ಪ್ರವಾಹದಂತೆ ಮನಸ್ಸಿನಲ್ಲಿ ನೂರಾರು ಭಾವನೆಗಳು ತುಮುಲವಾಗಿ ನೆಣಸಿ ಬಂದರಮೇಲೊಂದು ಹಾಯ್ದು ಬಂದವು. ಸರಪಳಿಯಂತೆ ಒಂದಕ್ಕೊಂದು ಕೊಂಡಿಬಿದ್ದು ಹಿಂದಿನದೆಲ್ಲ ಮನಸ್ಸಿನ ಮುಂದೆ ಅಲೆಅಲೆಯಾಗಿ ಸುಳಿಯಿತು. ಅಮೀರ್ ಅದರಲ್ಲಿ ಮುಳುಗಿದ.

* * * * *

ಅಮೀರನ ಹುಲಿವೇಷವೆಂದರೆ ಸೀಮೆಗೇ ಪ್ರಸಿದ್ಧಿ. ಪ್ರತಿವರ್ಷವೂ ಮೊಹರಮಿ ನಲ್ಲಿ ಅವನು ಹುಲಿವೇಷ ಹಾಕದಿದ್ದ ಸಂದರ್ಭ ಒಂದಾದರೂ ಇಲ್ಲ. ಸುತ್ತ ನಾಲ್ಕೈದು ಊರುಗಳಿಂದ ಜನ ಬಂದು ಅವನ ವೇಷವನ್ನು ನೋಡಿ ಊರ ಮರ್ಯಾದೆ ಸಲ್ಲಿಸಿ ಹೋಗುತ್ತಿದ್ದುದು ವಾಡಿಕೆ. ಹುಲಿವೇಷ ಕಟ್ಟುವುದರಲ್ಲಿ ಬಣ್ಣನೆಗೆ ನಿಲುಕದ ಒಂದು ನೈಪುಣ್ಯವನ್ನು ಅಮೀರ್ ತೋರಿಸುತ್ತಿದ್ದುದೆ ಜನದ ಈ ಮೆಚ್ಚುಗೆಗೆ ಕಾರಣ. ಅವನ ನೃತ್ಯದಲ್ಲಿ ವಿಶಿಷ್ಟವಾದ ಒಂದು ಗಾರುಡಿ ಮೈವೆತ್ತು ನೋಟಕರನ್ನು ಆಶ್ಚರ್ಯ ಮುಗ್ಧರನ್ನಾಗಿ ಮಾಡುತ್ತಿತ್ತು. ಇದನ್ನು ಅರಿತಿದ್ದ ಊರಜನ ಅಮೀರನನ್ನು ನೋಡಿ ಹೆಮ್ಮೆಪಟ್ಟುಕೊಳ್ಳುತ್ತಿದ್ದರು. ಮುಸಲ್ಮಾನರ ಗುಂಪಿಗಂತು ಇದೊಂದು ದೊಡ್ಡ ಗೌರವವೆ ಆಗಿಹೋಗಿತ್ತು.

ಮೊಹರಮಿನಲ್ಲಿ ಅಮೀರ್ ಹುಲಿವೇಷ ಹಾಕುತ್ತಿದ್ದುದು ಒಂದೆ ಒಂದು ದಿನ: ಕೊನೆಯ ದಿನ. ಅದೂ ಕೆಲವು ಘಂಟೆಗಳು ಮಾತ್ರ. ಈ ಕೆಲವು ಗಂಟೆಗಳ ಅವನ

ನೃತ್ಯಕೌಶಲವನ್ನು ನೋಡುವುದಕ್ಕೆ ಜನ ಸಾವಿರವಾಗಿ ಬರುತ್ತಿದ್ದರು. ಮೆರವಣಿಗೆ ಗರಡಿಯ ಕಡೆಯಿಂದ ಹೊರಟು ಕೆಲವು ಮುಖ್ಯ ಬೀದಿಗಳಲ್ಲಿ ಬಂದು ಅಂಗಡಿಬೀದಿಯ ಚೌಕದಲ್ಲಿ ಸ್ವಲ್ಪ ಹೊತ್ತು ನಿಂತುಕೊಳ್ಳುತ್ತಿತ್ತು. ಅಲ್ಲಿಂದ ಮುಂದೆ ಹೊರಟು ಪಕ್ಕದ ಬೀದಿಯಲ್ಲಿ ಅಮೀರನ ಮನೆಯ ಮುಂದೆ ಹಾದು ಕೆರೆಗೆ ಹೋಗುತ್ತಿತ್ತು. ಆಟ ವಿಶೇಷ ಸಂಭ್ರಮದಿಂದ ನಡೆಯುತ್ತಿದ್ದುದು ಎರಡೆ ಕಡೆ. ಅಂಗಡಿಬೀದಿಯ ಚೌಕದಲ್ಲಿ; ಅಮೀರನ ಮನೆಯ ಮುಂದೆ. ಈ ಎರಡು ಕಡೆಗಳಲ್ಲೂ ಮೆರವಣಿಗೆ ಬರುವುದಕ್ಕೆ ಬಹಳ ಹೊತ್ತು ಮೊದಲೆ ಜನ ಗುಂಪು ಸೇರಿಬಿಡುತ್ತಿದ್ದರು. ಅಂಗಡಿಬೀದಿಯ ಚೌಕಕ್ಕಿಂತಲೂ ಅಮೀರನ ಮನೆಯ ಮುಂದೆಯೆ ಆಟದ ಸ್ವಾರಸ್ಯ ಹೆಚ್ಚು.

ಮೆರವಣಿಗೆ ವಾದ್ಯಘೋಷದೊಡನೆ ಬಂದು ಮನೆಯ ಮುಂದೆ ನಿಂತಾಗ ಗುಂಪಿನ ಮುಂದಾಳುಗಳು ಅಮೀರನ ನೃತ್ಯಕ್ಕೆ ಜಾಗ ತೆರವುಮಾಡಿಕೊಟ್ಟು ಜನವನ್ನು ಸುತ್ತಲೂ ಒಂದು ಆವರಣವಾಗಿ ನಿಲ್ಲಿಸುತ್ತಿದ್ದರು. ಆಟ ಸ್ವಲ್ಪ ಹೊತ್ತು ನಡೆದ ಮೇಲೆ ಅಮೀರನ ಪುಟ್ಟಮಗಳು ಕೈಯಲ್ಲಿ ನಿಂಬೆಹಣ್ಣು ಹೂವಿನ ಹಾರಗಳನ್ನು ಹಿಡಿದುಕೊಂಡು, ಮನೆಯ ಮೆಟ್ಟಲಿಳಿದು ಮೆಲ್ಲನೆ ಗುಂಪು ಬಿಡಿಸಿಕೊಂಡು ಬಂದು, ಅಂಜಿಕೆ ಕುತೂಹಲಗಳು ಬೆರೆತ ಕಣ್ಣುಗಳಿಂದ ಅಮೀರನನ್ನು ನೋಡುತ್ತಾ ಸ್ವಲ್ಪ ಹೊತ್ತು ನಿಂತುಕೊಳ್ಳುತ್ತಿತ್ತು. ಮಗಳ ಕೈಯಲ್ಲಿ ಹೂವಿನಹಾರ ನಿಂಬೆಹಣ್ಣುಗಳನ್ನು ಕೊಟ್ಟು ಕಳಿಸುತ್ತಿದ್ದ ಮಡದಿ ಬಾಗಿಲಿಗೆ ಹಾಕಿದ್ದ ಪರದೆಯನ್ನು ಅರ್ಧ ಓರೆಮಾಡಿ ಕೊಂಡು ನೋಡುತ್ತಾ ನಿಂತಿರುತ್ತಿದ್ದುದೂ ಅಮೀರನಿಗೆ ಕಾಣುತ್ತಿತ್ತು. ಆಟ ಮುಗಿಯುವ ವೇಳೆಗೆ ಅಮೀರ್ ನೃತ್ಯದ ಒಂದು ಭಂಗಿಯಲ್ಲಿ ಮಂಡಿಯೂರಿ ನೆಲದ ವರೆಗೂ ಬಗ್ಗಿ, ಮಗು ಹಾಕುವ ಹಾರವನ್ನು ಕತ್ತಿನಲ್ಲಿ ತಳೆದು, ಮಗುವನ್ನು ಎತ್ತಿಕೊಂಡು ಒಂದು ನಿಮಿಷ ತಲೆಯ ಎತ್ತರದಲ್ಲಿ ಮೆಲ್ಲನೆ ತಿರುಗಿಸುತ್ತಿದ್ದ ಆಮೇಲೆ ಮಗುವಿನ ಹೂಗೆನ್ನೆಗೆ ಒಂದು ಮುತ್ತಿಟ್ಟು ಅದನ್ನು ಕೆಳಗೆ ಇಳಿಸುತ್ತಿದ್ದ. ಮಗುವಿನ ಕೈಯ ನಿಂಬೆಹಣ್ಣನ್ನು ತೆಗೆದುಕೊಂಡು ತನ್ನ ಬಾಯಲ್ಲಿಟ್ಟುಕೊಂಡು, ಮನೆಯ ಒಳಬಾಗಿಲಲ್ಲಿ ಒಲುಮೆಸೂಸುವ ಕಣ್ಣುಗಳಿಂದ ತನ್ನನ್ನೆ ನೋಡುತ್ತಾ ನಿಂತಿರುತ್ತಿದ್ದ ನಲ್ಲೆಯ ಕಡೆಗೆ ಒಂದು ನೋಟವನ್ನು ಎಸೆದು ಮುಂದೆ ಹೆಜ್ಜೆಹಾಕುತ್ತಿದ್ದ. ಆಗ ಜನ ಜಯಘೋಷಮಾಡುತ್ತಿದ್ದರು. ಆಮೇಲೆ ಕೆರೆಗೆ ಹೋಗಿ ಬಣ್ಣತೊಳೆದುಕೊಂಡು ಮುಸಲ್ಮಾನರ ಗುಂಪಿನ ಗರಡಿ ಜನದ ಮರ್ಯಾದೆ ತೆಗೆದುಕೊಂಡು ಮನೆಗೆ ಬರುತ್ತಿದ್ದ. ಇದು ಯಾವಾಗಲೂ ನಡೆಯುವ ಕಾರ್ಯಕ್ರಮ, ಪದ್ಧತಿ.

ಅಮೀರನಿಗೆ ಜನರಿಂದ ಸಲ್ಲುತ್ತಿದ್ದ ಈ ಗೌರವ ಅವನ ಚಮತ್ಕಾರವಾದ ನೃತ್ಯಕಲೆಗೆ ಇಟ್ಟ ಕಲಶದಂತಿತ್ತು. ಹೊರಗಿನ ಈ ಹೆಮ್ಮೆಯೊಡನೆ ಮನೆಯ ಸುಖವೂ

ಬೆರೆತಿತ್ತು. ಚಿನ್ನದಂಥ ಹೆಂಡತಿ; ಮುತ್ತಿನಂಥ ಮಗು. ಬಡತನದ್ದಾದರೂ ಯಾವ ಕೊರತೆಯನ್ನೂ ಕಾಣದ ಸಂಸಾರ. ಈ ಸಂಸಾರದ ಕೊಡ ತೃಪ್ತಿಯಿಂದ ತುಂಬಿತ್ತು. ಅಂತೆಯೆ ಆ ಮೂವರ ಜೀವ ಒಂದಾಗಿ ಒಬ್ಬರ ಮನಸ್ಸು ಮೂವರದಾಗಿ ಹೆಣೆದು ಹೋಗಿತ್ತು. ಒಲುಮೆಯ ಜೇಡ ಮೂವರನ್ನೂ ಸೇರಿಸಿ ಬಲೆ ನೆಯ್ದಿತ್ತು. ಸೂರಾ ಎಂದರೆ ಉನ್ನೀಸಳಿಗೆ ಪ್ರಾಣ. ಆ ಮಗುವಿಗೂ ಅಷ್ಟೆ. ಹುಟ್ಟಿದೊಡನೆ ತಾಯಿ ಯನ್ನು ಕಳೆದುಕೊಂಡಿದ್ದ ಆ ಹಸುಳೆಗೆ ಉನ್ನೀಸಾ ನಿಜವಾಗಿಯೂ ತಾಯಿಯಂತೆ ಇದ್ದಳು. ಆ ಋಣಾನುಬಂಧವಾಗಿತ್ತು. ಈ ತಾಯ್ತನ ಮಡದಿತನಗಳ ಎರಡು ಸುಂದರ ಮುಖಗಳನ್ನು ಹೆಂಡತಿಯಲ್ಲಿ ಕಾಣುತ್ತಾ ಅಮೀರ್ ಅಪೂರ್ವ ಸುಖಿಯಾಗಿದ್ದ. ಅವನ ಸಂಸಾರದಲ್ಲಿ ಸುಖದ ಬುಗ್ಗೆ ಉಕ್ಕುವುದಕ್ಕೆ ಇದೇ ಕಾರಣವಿರಬಹುದು. ತೀರಿಹೋದ ಹೆಂಡತಿ ತಿರುಗಿಬಂದು ಉನ್ನೀಸಳಾಗಿರುವಂತೆ ಅವನಿಗೆ ತೋರುತ್ತಿತ್ತು.

ಆದರೆ ವಿಧಿ ಬೆನ್ನ ಹಿಂದೆ ನಿಂತು ಬೇರೊಂದು ಹೂಟ ಹೂಡಿತ್ತು. ಉನ್ನೀಸಳ ಒಲುಮೆಯಲ್ಲಿ, ಸೂರಳ ಲಲ್ಲೆಯಲ್ಲಿ ಮುಳುಗಿ ಮೈಮರೆತಿದ್ದ ಅಮೀರನಿಗೆ ಅದು ಸೋಂಕು ಬಡಿದಿದ್ದರೂ ಗೊತ್ತಾಗುತ್ತಿರಲಿಲ್ಲ. ಅವನು ಈ ಸ್ಥಿತಿಯಲ್ಲಿದ್ದಾಗಲೆ ಅವನಿಗೆ ಆ ಬರಸಿಡಿಲು ಬಡಿದದ್ದು. ಅವನ ಮುದ್ದಿನ ಮಡದಿ ಉನ್ನೀಸಾ, ಅವನ ಬಾಳನ್ನು ಐದು ವರ್ಷಕಾಲ ಬೆಳಗಿದ್ದ ಉನ್ನೀಸಾ, ಅವನ ಜೀವಕ್ಕೆ ಜೀವವಾಗಿ ತಾಯಿಯಿಲ್ಲದ ಸೂರಳಿಗೆ ತಾಯಿಯಾಗಿದ್ದ ಉನ್ನೀಸಾ ಹೀಗೆ ನಂಬಿಸಿ ಕೊರಳು ಕೊಯ್ಯುವಳೆಂದು ಅಮೀರ್ ಕನಸಿನಲ್ಲೂ ಎಣಿಸಿರಲಿಲ್ಲ. ಮುಡಿದ ಹೂವಿನಲ್ಲಿ ಮಿಡಿ ನಾಗರ ಅಡಗಿತ್ತೆಂಬುದು ಅವನಿಗೆ ತಿಳಿದಿರಲಿಲ್ಲ. ತನ್ನ ಬಾಳನ್ನು ನೆಮ್ಮಿ ಹಬ್ಬುತ್ತಿದ್ದ ಉನ್ನೀಸಳ ಒಲುಮೆಯ ಬಳ್ಳಿ ಬೇರೆ ಜಾಡು ಹಿಡಿದೀತೆಂಬ ಯೋಚನೆಯೆ ಅವನಿಗೆ ಬಂದಿರಲಿಲ್ಲ. ಅವಳಿಗೆ ಏನು ಅರೆಯಾಗಿತ್ತು; ಯಾವುದು ಬೇಡವಾಗಿತ್ತು? ಈ ಸುಖದ ಕೆನೆಹಾಲಿಗೆ ವಂಚನೆಯ ಹುಳಿಹಿಂಡಿ ಹೋಗುವುದಕ್ಕೆ ಅವಳ ಮನಸ್ಸು ಹೇಸಲಿಲ್ಲವೆ? ಹೃದಯ ಕುದಿಯಲಿಲ್ಲವೆ? ಈ ಸಂಸಾರ ಅವಳಿಗೆ ಅಷ್ಟು ನಿಕೃಷ್ಟವಾಗಿ ಕಂಡಿತೆ? ಹಾಗಾದರೆ ಅವಳು ತೋರಿಸುತ್ತಿದ್ದ ಪ್ರೀತಿ ಬರಿ ಬೂಟಾಟಿಕೆಯೆ? ತನ್ನ ನಂಬಿಕೆಯೆ ಕುರುಡೆ? ಇರಬಹುದು. ಆದರೆ ಇಷ್ಟಾದರೂ ತುಂಬಿದ ತನ್ನ ಒಲುಮೆಯ ಹಿಂದೆ ಇಂಥ ಒಳಸಂಚು ನಡೆದಿತ್ತೆಂಬ ಅರಿವೆ ಅವನಿಗಿರಲಿಲ್ಲ. ಈ ನಾಟಕದ ಮೋಸದ ಮುಖವಾಡ ಕಳಚಿದ ಮೇಲೂ, ಭ್ರಾಂತಿ ಬಯಲಾದ ಮೇಲೂ ಮನಸ್ಸು ಇದು ಕಠೋರ ನಿಜತ್ವವನ್ನು ಗ್ರಹಿಸಲಾರದಾಗಿತ್ತು. ಯಾವುದು ಆಗಬಾರದೊ ಅದು ಆಗಿಹೋಗಿತ್ತು. ಈ ಹಠಾತ್‌ಘಟನೆ ಅವನ ಜೀವವನ್ನೆ ಹಿಂಡಿಬಿಟ್ಟಿತ್ತು. ರೋಷ ಕ್ಕಿಂತ ಹೆಚ್ಚಾಗಿ ದುಃಖ, ಅಪಮಾನ, ನಿರಾಶೆ, ಜುಗುಪ್ಸೆಗಳು ಅವನನ್ನು ಮುತ್ತಿ

ಮೂದಲಿಸುತ್ತಿದ್ದವು. ಯಾರಿಗೂ ಮುಖತೋರಿಸದೆ ಹಲವು ದಿನಗಳನ್ನು ಕಳೆದ. ದೇಶಾಂತರ ಹೊರಟುಹೋಗಬೇಕೆಂದೂ ಎಷ್ಟೋಸಲ ಯೋಚಿಸಿದ್ದ. ಆದರೆ ಪುಟ್ಟ ಮಗಳನ್ನು ನೋಡಿಕೊಂಡು, ಅವಳಿಗಾಗಿ ಎಲ್ಲ ಚಿಂತೆಯನ್ನೂ ನುಂಗಿಕೊಂಡು ಬಾಳನ್ನ ನೂಕಬೇಕೆಂದು ಬಗೆದ. ಅಂಥ ಬಾಳೂ ಕೆಲವುಕಾಲ ಕಳೆಯಿತು. ಆದರೆ ವಿಧಿಗೆ ಇದನ್ನೂ ನೋಡಿ ಸಹನೆಯಿದ್ದಂತೆ ಕಾಣಲಿಲ್ಲ. ವಿಷಮಶೀತಜ್ವರ ಬಂದು ನಲವತ್ತು ದಿನ ನರಳಿ ನೂರ್ ಕಣ್ಣು ಮುಚ್ಚಿಕೊಂಡಿತು.

ಕಷ್ಟದ ಮೇಲೆ ಕಷ್ಟ; ಗಾಯದ ಮೇಲೆ ಬರೆ. ಜೀವ ಬೇಸತ್ತು ಬಾಳು ಬೆಂಡಾಯಿತು. ಕೊನೆಯ ಜೀವದುಸಿರು ಹಾರಿಹೋಯಿತು. ಎದೆ ಗೋರಿಯಾಯಿತು. ಇನ್ನು ಉಳಿದಿರುವುದು ಗಾಳಿಯಾಡುತ್ತಿರುವ ಈ ಕಳೇಬರ. ಇದನ್ನಿಟ್ಟುಕೊಂಡು ಯಾವ ಪುರುಷಾರ್ಥ ಸಾಧಿಸಬೇಕು? ಇದಕ್ಕೆ ಆಶೆ ಭರವಸೆಗಳೇನು? ಯಾರ ಸಂತೋಷಕ್ಕಾಗಿ ಎಲ್ಲ ನಡಗರ ಸಮಾರಂಭಗಳೂ ಬೇಕಾಗಿದ್ದುವೊ, ಯಾರ ಪ್ರೇಮ ಇವೆಲ್ಲಕ್ಕೂ ಒಂದು ಬಲವಾಗಿತ್ತೋ ಅವರೆ ಇಲ್ಲದೆ ಹೋದಮೇಲೆ ಯಾವುದರಿಂದ ತಾನೆ ಏನು ಪ್ರಯೋಜನ? ಇನ್ನು ಯಾವುದಕ್ಕಾಗಿ ಯೋಚಿಸಬೇಕು? ಶೋಕ ಬಾಳನ್ನು ತಬ್ಬಿರುವಾಗ, ಜಗತ್ತೆ ತನ್ನ ಪಾಲಿಗೆ ಅಳಿದಿರುವಾಗ ಯಾವುದರ ಗೊಡವೆಯೂ ಬೇಡವೆಂದು ರೋಸಿ ನಿರ್ಧಾರಮಾಡಿಬಿಟ್ಟ. ಇನ್ನು ಮುಂದೆ ತನ್ನ ಬಳಿ ಹುಲಿವೇಷದ ಮಾತನ್ನೆ ಎತ್ತಬೇಡಿರೆಂದು ಗುಂಪಿನವರಿಗೆ ಕಂಡಿತವಾಗಿ ಹೇಳಿಬಿಟ್ಟ. ಇದರಮೇಲೆ ದೊಡ್ಡ ಚರ್ಚೆ ಎದ್ದಿತ್ತು. ಆದರೆ ಗುಂಪಿನ ಕೆಲವು ಮುಂದಾಳುಗಳ ಸಲಹೆಯಿಂದ ಅದು ಹಾಗೆಯೆ ಅಡಗಿತ್ತು.

ಕಳೆದ ಆ ವರ್ಷಕ್ಕೂ ಈ ವರ್ಷಕ್ಕೂ ಎಷ್ಟು ವ್ಯತ್ಯಾಸ. ಅಂದಿನ ಮೊಹರಮಿಗೂ ಇಂದಿನ ಈ ಮೊಹರಮಿಗೂ ಎಷ್ಟು ತೀವ್ರವಾದ ಅಂತರ. ಎಳೆಂಟು ತಿಂಗಳಲ್ಲಿ ಎಂಥ ಬದಲಾವಣೆ. ಹೀಗಾದೀತೆಂದು ಅಮೀರ್ ಕಲ್ಪನೆಯಲ್ಲಿ ಕೂಡ ಎಣಿಸಿರಲಿಲ್ಲ. ಒಂದು ಚರಿತ್ರೆಯಲ್ಲಿ ನಡೆಯುವಂಥ ಘಟನಾವಳಿ ವಿದ್ಯುದ್ವೇಗದಿಂದ ಅತ್ಯಲ್ಪಕಾಲದಲ್ಲಿ ಅವನ ಬಾಳಿನಲ್ಲಿ ಜರುಗಿಹೋಗಿತ್ತು. ಅದರ ಕಾವು ಮರುಕೊಳಿಸುವ ಜ್ವರದಂತೆ ಈಗ ಮತ್ತೆ ಮೈದೋರಿ ಅವನ ಮನಸ್ಸಿನ ಕಗ್ಗತ್ತಲಿನ ಮೂಲೆಗಳಲ್ಲಿ ಸುಪ್ತವಾಗುತ್ತಿದ್ದ ಭಾವನೆಗಳನ್ನು ಕೆರಳಿಸಬೇಕೆ?

* * * * *

ಧಡಧಡನೆ ಬಾಗಿಲು ಬಡಿದ ಸದ್ದಾಯಿತು. ಅಮೀರನ ಯೋಚನೆಗೆ ಕಲ್ಲು ಬಿತ್ತು. ಒಂದು ಕ್ಷಣ ಅವನ ಮುಖ ವ್ಯಗ್ರವಾಯಿತು. ಮೇಲೆದ್ದುನಿಂತು ಮನಸ್ಸನ್ನು ಮುತ್ತುತ್ತಿದ್ದ ಆಲೋಚನೆಗಳನ್ನು ಪ್ರಯತ್ನಪೂರ್ವಕವಾಗಿ ಕೊಡವುತ್ತಾ ಕುಗ್ಗಿದ

ಧ್ವನಿಯಲ್ಲಿ 'ಯಾರದು ?' ಎಂದ. ಮತ್ತೆ ಬಾಗಿಲು ಬಡಿಯುವ ಸದ್ದು; ಹೆಸರು ಹಿಡಿದು ಕೂಗುವ ಸದ್ದು; ಹೊರಗೆ ಜನ ಸೇರಿರುವಂತೆ ಸದ್ದು.

"ಅಮೀರ್, ಅಮೀರ್."

"ಯಾರಯ್ಯ ಅದು ?"

"ಬಾಗಿಲು ತೆಗೆ ಅಮೀರ್."

ಮನಸ್ಸಿಲ್ಲದ ಮನಸ್ಸಿನಿಂದ ಹೋಗಿ ಬಾಗಿಲು ತೆಗೆದು ನೋಡಿದ. ಖಾದರ್ ಸಾಬರ ಗರಡಿಯ ಗುಂಪೆ ಬಂದು ನಿಂತಿತ್ತು. ಬೆಳ್ಳಗಾಗಿದ್ದ ಗಡ್ಡವನ್ನು ನೇವರಿಸುತ್ತಾ ಖಾದರ್ ಒಳಗೆ ಬಂದು, ಅಮೀರನ ಹೆಗಲಮೇಲೆ ಕೈಯಿಟ್ಟು ಅವನ ಮುಖವನ್ನು ದಿಟ್ಟಿಸಿ ನೋಡಿದ. ಅಮೀರ್ ಮಾತನಾಡದೆ ಅವಡು ಕಚ್ಚಿಕೊಂಡು ನಿಂತಿದ್ದ. ಒದ್ದೆಯಾಗಿದ್ದ ಕಣ್ಣುಗಳು ಇನ್ನೂ ಪೂರ್ತಿ ಆರಿರಲಿಲ್ಲ. ಮನಸ್ಸಿನ ಬೇಗುದಿ ಕಣ್ಣಿನಿಂದ ಧುಮುಕುತ್ತಿತ್ತು. ಆದರೆ ಖಾದರ್ ಬೇರೆ ಅವಸರದಲ್ಲಿದ್ದ.

"ಅಮೀರ್."

"ಏನು ಖಾದರ್ ?"

"ಏನು ಎನ್ನಬೇಡ ಅಮೀರ್. ನಾನು ಬಂದಿರುವುದೇಕೆಂದು ನೀನು ಬಲ್ಲೆ."

"ಹಾಂ ? . . ."

"ಹೌದು, ನಿನಗೆ ಗೊತ್ತು ಅಮೀರ್."

"ಆ ಮಾತು ಈಗ ಬೇಡ ಖಾದರ್ ; ಅದನ್ನು ಮರೆತುಬಿಡು."

"ಮರೆಯುವ ಹಾಗಿಲ್ಲ ಅಮೀರ್; ಇದೊಂದು ದಿನ ನೀನು ಮನಸ್ಸು ಮಾಡಬೇಕು."

"ಇಲ್ಲ, ಆದಾಗುವುದಿಲ್ಲ; ನೆಲೆಗೆ ನಿಂತ ಮನಸ್ಸು ತಿರುಗುವಂತಿಲ್ಲ. ಅದು ಬಿಟ್ಟು ಬೇರೆ ಮಾತಾಡು, ಖಾದರ್."

"ಯೋಚನೆಮಾಡಿ ನೋಡು ಅಮೀರ್. ನಿನ್ನ ಇಷ್ಟಕ್ಕೆ ನಾವು ಯಾವಾಗಲೂ ಅಡ್ಡಬಂದಿಲ್ಲ. ಆದರೆ ಈಗ . . . ನಮ್ಮ ಸತ್ವದ ಪರೀಕ್ಷೆ ಬಂದಿರುವಾಗ . . ."

"ನಿಲ್ಲಿಸು ಖಾದರ್, ಮುಂದೆ ಹೇಳಬೇಡ."

"ಇಲ್ಲ ಅಮೀರ್, ಹಾಗೆನ್ನಬೇಡ, ಇತರರು ನಮ್ಮನ್ನು ನೋಡಿ ನಗುತ್ತಾರೆ. ನಮ್ಮ ಹೆಸರಿಗೆ ಕಳಂಕ ತಟ್ಟುತ್ತದೆ. ಗುಂಪಿಗೆ ಅಪಮಾನವಾಗುತ್ತದೆ. ಇದನ್ನು ನೀನು ಬಲ್ಲೆ, ಇದನ್ನು ನೀನು ಪರಿಹರಿಸಲೂ ಬಲ್ಲೆ."

"ಖಾದರ್, ಖಾದರ್, ನೀನು ನನ್ನನ್ನು ಕೊಲ್ಲುತ್ತಿರುವೆ."

"ಇಲ್ಲ ಅಮೀರ್, ಒಂದು ಗಳಿಗೆ ಯೋಚನೆಮಾಡು. ಇಲ್ಲ ಎನ್ನಬೇಡ.

ಮೆರವಣಿಗೆ ಅಂಗಡಿಬೀದಿಯ ಚೌಕಕ್ಕೆ ಬಂದು ನಿಂತಿದೆ. ಅಲ್ಲಿಂದ ಕದಲುವಂತಿಲ್ಲ. ಜಾಸ್ಕೆ ಬಾಯಿಕೊಡುವಂತಿಲ್ಲ. ಗುಂಪಿನ ಗೌರವ ನಿನ್ನ ಕೈಯಲ್ಲಿದೆ."

ಗುಂಪಿನ ಮಾತೆತ್ತಿದ್ದು ಅಮೀರನ ಮನಸ್ಸನ್ನು ಈಟಿಯಿಂದ ಇರಿದಂತಾಯಿತು. ತನ್ನೊಬ್ಬನಿಂದ ಇಷ್ಟಾಗುವುದೆಂದು ಅವನು ಎಣಿಸಿರಲಿಲ್ಲ. ಅವನ ಮನಸ್ಸು ಒಂದು ಕ್ಷಣ ಹೀಗೊ ಹಾಗೊ ತೂಗಿರಬಹುದು. ಈ ಸಮಯ ಕಾಯುತ್ತಿದ್ದ ಖಾದರ್ ತನ್ನವರ ಕಡೆ ತಿರುಗಿ ಕಣ್ಣುಸನ್ನೆಮಾಡಿದ. ಗರಡಿಯ ಜನ ಒಳಸುಗ್ಗಿ ಬೇಡ ಬೇಡ ಎನ್ನುತ್ತಿದ್ದ ಅಮೀರನನ್ನು ಅನಾಮತ್ತಾಗಿ ಎತ್ತಿಕೊಂಡು ಹೊರಟುಹೋದರು.

*   *   *   *   *

ಬಾಬಯ್ಯನ ಮೆರವಣಿಗೆ ಆ ನೂಕುನುಗ್ಗಲಿನಲ್ಲಿ ಅಂಗಡಿಬೀದಿಯ ಚೌಕದಿಂದ ಮುಂದೆ ಹೊರಡುವುದೆ ಕಷ್ಟವಾಗಿತ್ತು. ಜನ ನಾಲ್ಕೂಕಡೆ ಕೋಟೆಯಂತೆ ಕಟ್ಟಿ ಕೊಂಡು ನಿಂತುಬಿಟ್ಟಿದ್ದರು. ಕಾವೇರಿದ್ದ ತಂಬಟೆ ಒಂದೆ ತಾನದಲ್ಲಿ ನುಡಿಯುತ್ತಿತ್ತು. ಯಾವುದೊ ಒಂದು ಅವ್ಯಕ್ತಗತಿಗೆ ಸಿಕ್ಕಿದಂತೆ ಎಲ್ಲ ಸದ್ದೂ ಕೂಡಿ ಮಹತ್ತರವಾದ ಒಂದು ಧ್ವನಿಮಂಡಲ ಏರ್ಪಟ್ಟಂತೆ ತೋರುತ್ತಿತ್ತು. ಎಲ್ಲ ಕಣ್ಣುಗಳೂ ಬಾಬಯ್ಯನ ಮಂಟಪಗಳ ಮುಂದೆ ಹೋಗಿ ನೆಲಸಿ ಕ್ಷಣಕ್ಕೊಮ್ಮೆ ಹಾಗೆ ಹೀಗೆ ತಿರುಗುತ್ತಿದ್ದುವು. ಜನದ ಉತ್ಸಾಹ ನಿರೀಕ್ಷೆಗಳು ಮೇರೆಮೀರುವಂತಿದ್ದುವು.

ಉಕ್ಕಿನಂಥ ಮೈಕಟ್ಟು; ವಿಚಿತ್ರವರ್ಣಸಂಯೋಜನದಿಂದ ಕೂಡಿದ ಮೈ; ಅಪೂರ್ವವಾದ ರೇಖಾವಿನ್ಯಾಸ; ರಾಗೋಜ್ವಲವಾದ ದೇಹಕಾಂತಿಯ ಥಳಥಳ್ಯ; ವ್ಯಾಘ್ರನಖಖಚಿತವಾದ ವಜ್ರಮುಷ್ಟಿ; ಬಾಯಿಯಲ್ಲಿ ಗಜನಿಂಬೆ ಹಣ್ಣು; ಅದನ್ನು ಹಾಯ್ದುಬರುವಂತಿರುವ ನಿಗಿನಿಗಿಸುವ ಕೋರೆ ಹಲ್ಲುಗಳು; ಹೊರಚಾಚಿರುವ ಕೆನ್ನಾಲಗೆ; ಕುಣಿಯುತ್ತಿರುವ ಕೆಮ್ಮೀಸೆ; ರಕ್ತವರ್ಣರಂಜಿತವಾದ ಮುಖ; ಒಂದನ್ನೊಂದು ಸಂಧಿಸಿ ಹಿಮ್ಮೆಟ್ಟುತ್ತಿರುವ ಭ್ರುಕುಟಿಗಳು; ಇವುಗಳ ನಡುವೆ ಕೆಂಡ ಕಾರುವಂಥ ಕಣ್ಣುಗಳು; ತಲೆಯನ್ನು ಅಪ್ಪಿ ಕುಳಿತಿರುವ ಸ್ವರ್ಣವರ್ಣದ ಕುಲಾವಿ; ಹೆಗಲ ಮೇಲೆ ಸೆರೆಸಿಕ್ಕಿ ಕ್ಷಣಕ್ಷಣಕ್ಕೆ ಭಯದಿಂದ ಚೀರುತ್ತಿರುವ ಮೇಕೆಯ ಮರಿ; ಅದರ ಸಮೇತ ಹಾರಿ ಹೂಂಕರಿಸಿ, ನೆಲಕ್ಕಿಳಿದು, ಅತ್ತ ಇತ್ತ ಧಾವಿಸಿ, ತಂಬಟೆಯ ಗತಿಗೆ ತಕ್ಕಂತೆ ನಡೆಕೊಡುತ್ತಿರುವ ಪದಾಘಾತ; ಆ ಚಪಲಗತಿಗೆ ಹೊಂದಿಕೊಂಡಂತೆ ಅವಿಚ್ಛಿನ್ನವಾಗಿ ತಲೆಯ ಮೇಲಿಳಿದು ಮತ್ತೆ ಮೇಲೆ ಚಿಮ್ಮುತ್ತಾ 'ಝುಲ್-ಝುಲ್' ಎಂದು ದನಿಗೈಯುತ್ತಿರುವ ಡಬ್ಬೆಕಟ್ಟಿದ ಕಾಗದದ ಭಾರಿ ಹೂಚೆಂಡು; ಮಧ್ಯೆ ಮಧ್ಯೆ ಕಾಲ್ಗೆಜ್ಜೆಯೂ ನಾಲ್ಕೂಕಡೆ ಹಾಕಿ ಹಿಡಿದಿರುವ ಸರಪಳಿಯೂ ಮೇಳೈಸಿರುವ ಝಣತ್ಕೃತಿ. ವಿಚಿತ್ರ ನೃತ್ಯಗತಿಯಿಂದ ಎಲ್ಲೆಲ್ಲೂ ತಾನೆ ಆಗಿ ಕಣ್ಗೊಳಿಸುತ್ತಿದಾನೆ

ಅಮಿೂರ್. ಈ ನೃತ್ಯದಲ್ಲಿ ಜನದ ದೃಷ್ಟಿಯೆಲ್ಲವೂ ಕೀಲಿಸಿದೆ, 'ಅಲಿ-ದೂಲ; ಅಬೀರ್-ಅಬೀರ್' ಎಂಬ ಕೂಗು ಸುತ್ತಲೂ ವ್ಯಾಪಿಸಿದೆ; ಧೂಪದ ಹೊಗೆ ಮುಚ್ಚಿದೆ.

ಅಮಿೂರ್ ಇಂದು ತನ್ನ ಸರ್ವಶಕ್ತಿಯನ್ನೂ ವಿನಿಯೋಗಿಸಿ ನೃತ್ಯಮಾಡುತ್ತಿದಾನೆ. ತಂಬಟೆಯ ಉಚ್ಚಘೋಷದಲ್ಲಿ, ಆ ಶಬ್ದಮಂಡಲದಲ್ಲಿ ಬುದ್ಧಿ ಹೊರಗಿನ ಪ್ರಪಂಚವನ್ನು ಸ್ವಲ್ಪಸ್ವಲ್ಪವಾಗಿ ಮರೆತು ಅಂತರ್ಮುಖವಾಗುತ್ತಿದೆ. ರಾಗಮತ್ತವಾಗಿರುವ ಮನಸ್ಸಿನ ಪ್ರಬಲಪ್ರೇರಣೆಗೆ ಸಿಕ್ಕಿ ಮೈ ನಾನಾ ರೀತಿಗಳಲ್ಲಿ ನಾಟ್ಯ ಕಟ್ಟುತ್ತಿದೆ. ಕಣ್ಣು ಅರ್ಧನಿಮಿೂಲಿತವಾಗಿದೆ. ಮನಸ್ಸು ಅನಿರ್ವಚನೀಯವಾದ ಒಂದು ಭಾವದ ಉಯ್ಯಾಲೆಯಲ್ಲಿ ತೂಗುತ್ತಿದೆ. ಇದರ ಯಾತಾಯಾತದಿಂದ ಒಳಮುಖವಾಗಿರುವ ಪ್ರಜ್ಞೆ ಜೋಂಪಿಸುತ್ತಿದೆ. ಈ ಸ್ಥಿತಿಯಲ್ಲಿ ಮೆರವಣಿಗೆ ತನ್ನ ಮನೆಯ ಮುಂದೆ ಬಂದು ಎಂದಿನಂತೆ ನಿಂತದ್ದು ಅಮಿೂರನಿಗೆ ಗೋಚರವಾಗಲಿಲ್ಲ ಆ ವೇಳೆಗೆ ಸರಿಯಾಗಿ ಅವನು ಪುಟಗೊಳಿಸಿದ ಅಗ್ನಿಯಂತೆ ಚಿಮ್ಮಿ ಅಪೂರ್ವವಾದ ಒಂದು ನೃತ್ಯವಿನ್ಯಾಸವಿಸ್ತರಣೆಯಲ್ಲಿ ಮುಳುಗಿದ. ತಂಬಟೆಯ ಸದ್ದು ಇಮ್ಮಡಿಸಿತು. ತಾನತಾನವಾದ ಅದರ ದುಡಿತ ಮನಸ್ಸನ್ನು ಹುರುಪುಗೊಳಿಸಿ ಬಗೆಬಗೆಯ ಭಾವಗಳನ್ನು ಕೆರಳಿಸತೊಡಗಿತು. ಅದನ್ನು ಮೆಟ್ಟಿನಿಲ್ಲುವಂತೆ ಅಮಿೂರನ ನೃತ್ಯವೂ ರಾಗೋದ್ರೇಕದಿಂದ ಇಮ್ಮಡಿಯಾಗಿ ಜನವನ್ನು ಒಂದು ಮಾಟದಲ್ಲಿ ಕಟ್ಟಿ ನಿಲ್ಲಿಸಿತು. ಲಯಬದ್ಧವಾದ ಆ ಪದಾಘಾತ; ಅಲೆಅಲೆಯಾದ ಆ ತೋಳ್‌ಬಳಸು; ಹೊಂಚುಕಾದು ಮೇಲೆ ಬೀಳುವಂಥ ಆ ನಿಲುವು; ಈದ ಹೆಬ್ಬುಲಿಯಂತೆ ಕುಪ್ಪಳಿಸಿ ಪಂಜವನ್ನೆತ್ತಿ ಪ್ರತಿಭಟಿಸುವಂತೆ ಮೈತೂಗಿ ನಿಲ್ಲುವ ಆ ಠೀವಿ; ಹೆಗಲಮೇಲಿನ ಮೇಕೆಯ ಮರಿ ಹವಣುತಪ್ಪದಂಥ ಆ ಸಂಚಲನೆಯ ಜಾಣ್ಮೆ. ಅನನ್ಯಸಾಧಾರಣವಾದ ಈ ನೃತ್ಯ ಕೌಶಲಕ್ಕೆ ಮಾರುಹೋದ ಜನ ಕ್ಷಣಕ್ಷಣಕ್ಕೆ ಉತ್ತೇಜನಧ್ವನಿಗಳನ್ನು ಮಾಡತೊಡಗಿದರು.

ಹೀಗೆ ಕಾಲುಘಂಟೆ ನೃತ್ಯ ನಡೆದಿರಬಹುದು. ಹೊತ್ತಿನ ಅರಿವು ಯಾರಿಗೂ ಇಲ್ಲ ಎಲ್ಲರ ಕಣ್ಣೂ ಮನಸ್ಸೂ ಒಂದಾಗಿ ಅಮಿೂರನ ವಿಚಿತ್ರ ಚಪಲಗತಿಯ ಸುಳಿಯಲ್ಲಿ ಸಿಕ್ಕಿಹೋಗಿದೆ. ಜನ ಉಸಿರು ಹಿಡಿದು ಹಿಡಿದು ಬಿಡುತ್ತಿದಾರೆ, ಕೌತುಕ ಮೈಯಾಂತು ನಿಂತಿದೆ. ವಾತಾವರಣವೆ ವಿಲಕ್ಷಣ ರಾಗೋದ್ವೇಗದಿಂದ ತುಂಬಿ ಸಿಡಿಯುವಂತಿದೆ ಎಲ್ಲವೂ ಅಮಿೂರನ ನೃತ್ಯಾಧೀನವಾಗಿ ಪರವಶತೆಯ ಪರಾಕಾಷ್ಠೆಗೇರಿದೆ. ಈ ಇಂದ್ರಜಾಲದಲ್ಲಿ ಜನವನ್ನು ಹಿಡಿದು ನಿಲ್ಲಿಸಿದ್ದ ಅಮಿೂರ್ ನೃತ್ಯದ ಕೊನೆಯ ಆವರ್ತಕ್ಕೆ ಮುಕ್ತಾಯಕೊಡುವ ಸಂರಂಭದಲ್ಲಿ ಥಂಗನೆ ನೆಗೆದು, ರಾಟಳದಂತೆ ಗಿರಗಿರನೆ ತಿರುಗಿ ನಿಂತು, ಎರಡು ತೋಳುಗಳನ್ನೂ ಹಾವಿನಂತೆ ಬಳಸಿ, ಮಂಡಿಯೂರಿ ಒಂದು

ಕಾಲನ್ನು ಮುಂದಿಟ್ಟು ಹಾರಸ್ವೀಕಾರಕ್ಕೆ ಕತ್ತುಬಗ್ಗಿಸುವಂತೆ ನೆಲದವರೆಗೂ ಬಾಗಿದ. ಅಭ್ಯಾಸಬಲದಿಂದೆಂಬಂತೆ ದೃಷ್ಟಿ ಮನೆಯ ಕಡೆ ಹೊರಳಿತು. ಕೆಂಡದಿಂದ ಕಿಡಿ ಸಿಡಿಯುವಂತೆ ಮನಸ್ಸಿನ ಅಂತರಾಳದಿಂದ ನೆನಪು ಉಕ್ಕಿ ಉಜ್ವಲವಾಯಿತು. ಕಣ್ಣು ನೀರಿನಲ್ಲಿ ತೇಲಿ ಮಂಜಾಯಿತು; ಮುಖ ವಿವರ್ಣವಾಯಿತು; ಶಕ್ತಿ ಉಡುಗಿತು; ಮೈ ಭಾರವಾಯಿತು; ನಾಟ್ಯಚೇತನ ಕಂಗೆಟ್ಟು ಕುಸಿಯಿತು. ಒಂದು ಕ್ಷಣ ಆ ನಿಲುವಿನಲ್ಲಿದ್ದವನು ಬವಳಿಬಂದವನಂತೆ ಧೊಪ್ಪನೆ ನೆಲಕ್ಕೆ ಕುಸಿದು ಬಿದ್ದುಬಿಟ್ಟ. ಸುತ್ತಲೂ ಘೇರಾಯಿಸಿ ನೋಟದಲ್ಲಿ ಮುಳುಗಿಹೋಗಿದ್ದ ಜನ ಪ್ರಜ್ಞೆಬಂದವರಂತೆ ಎಚ್ಚತ್ತು ಹೋ ಎಂದು ಏಕ ಕಂಠದಲ್ಲಿ ಕೂಗಿಕೊಂಡರು. ನಾಲ್ಕೂಕಡೆಯಿಂದ ಅವಿನಾರನ ಬಳಿಗೆ ಧಾವಿಸಿ ಬಂದರು. ಬೇಟೆಗಾರನ ಗುಂಡಿನೇಟಿಗೆ ಸಿಕ್ಕಿ ನೆಗೆದು ನೆಲಕ್ಕುರುಳುವ ಹುಲಿಯಂತೆ ಆ ಹುಡಿಯಲ್ಲಿ ಹೊರಳಿಬಿದ್ದಿದ್ದ.

* * * * *

ಗರಡಿ ಗೋವಿಂದಯ್ಯನ ಬೀದಿಯಲ್ಲಿ ನಾಲ್ಕುಮಾರು ದೂರ ಹೋದರೆ ಬಲಗಡೆ ಒಂದು ಸಣ್ಣ ಮನೆ ಕಂಡುಬರುತ್ತದೆ. ಮನೆಯ ಮೇಲ್ಛಾವಣಿಯೆಲ್ಲಾ ಕುಸಿದು ಮುಂದಕ್ಕೆ ಚಾಚಿಕೊಂಡಿದೆ. ಗೋಡೆಗಳು ಅಲ್ಲಲ್ಲೆ ಬಿದ್ದುಹೋಗಿವೆ. ಎಷ್ಟೋ ಕಾಲದಿಂದ ಮುಚ್ಚಿರುವ ಬಾಗಿಲ ಮೇಲೆ ಗೆದ್ದಲು ತೊಗಟೆ ತೊಗಟೆಯಾಗಿ ಹಬ್ಬಿಕೊಂಡಿದೆ. ಪಕ್ಕದಲ್ಲಿ ಒಂದೆ ಒಂದು ಸಣ್ಣ ಕಿಟಕಿ. ಅದಕ್ಕೆ ಬಾಗಿಲಿಲ್ಲ. ಮನೆಯ ಮುಂದಿದ್ದ ಮೆಟ್ಟಲುಗಳೆಲ್ಲಾ ಮುರಿದುಹೋಗಿ ಆ ಜಾಗದಲ್ಲಿ ಸೊಪ್ಪುಸೆದೆ ಬೆಳೆದುಕೊಂಡಿದೆ. ಅದನ್ನು ದಾಟಿಕೊಂಡು ಬಾಗಿಲ ಬಳಿಗೆ ಹೋದರೆ ಜೇಡ ನಿರಾತಂಕವಾಗಿ ನೆಯ್ದಿರುವ ದಪ್ಪ ಪೊರೆ ಮುಖಕ್ಕೆ ಸುತ್ತಿಕೊಳ್ಳುತ್ತದೆ. ಪಕ್ಕದ ಕಿಟಕಿಯಿಂದ ಒಳಗಿನ ಗಾಳಿ ಸುಯ್ಯೆಂದು ಬೀಸಿಬಂದು ಬಡಿಯುತ್ತದೆ. ಒಂದು ಕ್ಷಣಕ್ಕಿಂತ ಹೆಚ್ಚಾಗಿ ಇಲ್ಲಿ ನಿಲ್ಲುವುದಕ್ಕೆ ಆಗುವುದಿಲ್ಲ. ಈ ಮನೆ ಅವಿನಾರನದೆಂದು ಜನ ಈಗಲೂ ಹೇಳುತ್ತಾರೆ.

ಭಾರತೀಪ್ರಿಯ.

---

# ಕಾವ್ಯಾವಲೋಕನ

**ಸತ್ವಶಾಲಿ ರಶಿಯಾ:** (ಮಿಂಚಿನ ಬಳ್ಳಿಯ ೫ನೆಯ ವರುಷದ ಒಂದನೆಯ ಕುಡಿ)—ಪುಟಗಳು, ೧೨೫+೩೦; ಬೆಲೆ, ರೂ. ೧-೪-೦.

ಈ ಪುಟ್ಟ ಪುಸ್ತಕ ಶ್ರೀಮಾನ್ ಶ್ರೀ ನಿತ್ಯನಾರಾಯಣ ಬ್ಯಾನರ್ಜಿ ಅವರು ಬರೆದಿರುವ ಆಧುನಿಕರಶಿಯಾ (*Russia Today*) ಎಂಬ ಇಂಗ್ಲಿಷ್ ಪುಸ್ತಕದ ಅನುವಾದ. ಅನುವಾದಕರು ಶ್ರೀಮಾನ್ ಡಿ. ಎಸ್. ಶರ್ಮ; ಸಂಪಾದಕರು: ಶ್ರೀಮಾನ್ ಬುರ್ಲಿ ಬಿಂದುಮಾಧವ. ಗ್ರಂಥಕರ್ತರು ಸ್ವತಃ ರಶಿಯಾಕ್ಕೆ ಹೋಗಿ ತಮಗೆ ಪ್ರತ್ಯಕ್ಷವಾಗಿ ಕಂಡುಬಂದ ಸಂಗತಿಗಳ ವಿವರಗಳನ್ನೇ ತಮ್ಮ ಗ್ರಂಥದಲ್ಲಿ ಕೊಟ್ಟಿದ್ದಾರೆ. ಶ್ರೀಮಾನ್ ಡಿ. ಎಸ್. ಶರ್ಮ ಅವರು ಈ ಗ್ರಂಥವನ್ನು ತಿಳಿಗನ್ನಡದಲ್ಲಿ ಅನುವಾದಮಾಡಿ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಈ ಪುಸ್ತಕದಲ್ಲಿ ೧೯ ಅಧ್ಯಾಯಗಳ ಜೊತೆಗೆ ಹೊಸನೋಟವೆಂಬ ಹಿಸ್ಸೆಯೂ ಇದೇ.

ಅನುವಾದಕರು ರಶಿಯಾದ ಮುಖ್ಯಪಟ್ಟಣಗಳಲ್ಲಿ ಒಂದಾದ ಲೆನಿನ್‌ಗ್ರಾಡಿನಲ್ಲಿ ಪ್ರಭುತ್ವಸರ್ಕಾರ ಏರ್ಪಡಿಸಿರುವ 'ಯಾತ್ರಿಕಶಾಖೆ', ಹೋಟಲು, ಸರ್ವರ ಮನಸ್ಸನ್ನು ಆಕರ್ಷಿಸುವ ನಾಟಕ ರಂಗಸ್ಥಳ ಇವುಗಳ ಪ್ರಥಮ ಪರಿಚಯವನ್ನು ಪಾಠಕರಿಗೆ ಮಾಡಿಸುವರು. ಇದಾದ ಮೇಲೆ ರಶಿಯಾ ಜನರ ಹೊಸ ರಾಜಕೀಯ, ಆರ್ಥಿಕ, ಸಾಮಾಜಿಕ ಜೀವನದ ಮುಖ್ಯ ಅಂಶಗಳನ್ನು ಉದಾಹರಣೆಯಾಗಿಟ್ಟುಕೊಂಡು ಸಮಾಜವಾದವನ್ನು ವ್ಯಾವಹಾರಿಕ ದೃಷ್ಟಿಯಿಂದ ವಿವರಿಸಿರುವರು.

ಈಗಿನ ರಶಿಯಾ ದೇಶ ಕೂಲಿಗಾರರ ದೇಶ. ಎಲ್ಲವೂ—ಅಂಗಡಿ ವಾಹನ, ವಿನೋದ ಮಂದಿರ, ಆಸ್ಪತ್ರೆ ಮೊದಲಾದವು—ಕೂಲಿಗಾರರ ಸೌಕರ್ಯಕ್ಕಾಗಿಯೇ ಏರ್ಪಾಡಾಗಿರುವುವು. ರಶಿಯಾದಲ್ಲಿ ಬಂಡವಾಳಗಾರರ ಸುಳಿವಿಲ್ಲ, ಮೋಜಿನ ಜೀವನಕ್ಕೆ ಅವಕಾಶವಿಲ್ಲ. ಎಲ್ಲಿ ನೋಡಿದರೂ ಜನಜೀವನದಲ್ಲಿ ಸರಳಸ್ವಭಾವವೇ ಕಂಡುಬರುತ್ತಿರುವುದು. ಜನಜೀವನದ ಪ್ರತಿ ಒಂದು ಅಂಶವೂ ದೇಶೋನ್ನತಿಗಾಗಿರುವುದೇ ಹೊರತು ಸ್ವಾರ್ಥಕ್ಕಲ್ಲ.

'ಇಂದಿನ ಬಾಲಕರು ಮುಂದಿನ ಪಾಲಕರು' ಎಂಬ ಧ್ಯೇಯಸಾಧನೆಗಾಗಿ ಪ್ರಭುತ್ವಸರ್ಕಾರ 'ಶಿಶುಸಂರಕ್ಷಣಾಲಯ' (ಕ್ರೇಚಿ)ವನ್ನು ಸ್ಥಾಪಿಸಿರುವುದು. ಇದರ ರೀತಿನೀತಿಗಳು, ಇದರ ಕಾರ್ಯಕಲಾಪಗಳ ಸಿಸ್ತು ಇತರ ಜನಾಂಗದವರಿಗೆ ಆಶ್ಚರ್ಯವನ್ನುಂಟುಮಾಡದಿರಲಾರವು. ವಿವಾಹ ಭೋಗತೃಪ್ತಿಗಲ್ಲ, ಮಕ್ಕ

ಳನ್ನ ಪಡೆಯಬಾರದೆಂದಿರುವ ಸ್ತ್ರೀಯರೇ ವ್ಯಭಿಚಾರಿಣಿಯರು, ಮಕ್ಕಳೇ ದೇಶದ ಸರ್ವಸಂಪತ್ತು ಎಂದು ಹೇಳುವುದು ರಶಿಯನ್ನರ ಹೊಸ ನೀತಿ. ರಶಿಯನ್ನರ ಮದುವೆಗೆ ಪ್ರೇಮವೇ ಬಂಧನವೆಂದೂ, ಯಾವಾಗ ಪ್ರೇಮ ಹಾರಿಹೋಗುವುದೋ ಅಂದು ಗಂಡಹೆಂಡರು ಬೇರೆಯಾಗಬಹುದೆಂದೂ ಸರ್ಕಾರ ತೀರ್ಪುಕೊಟ್ಟಿರುವುದು.

ಕೇವಲ ಆರ್ಥಿಕ ಮಾರ್ಗವನ್ನೇ ಅವಲಂಬಿಸಿರುವ ರಶಿಯಾ ದೇಶದ ಜನರಿಗೆ ಕಲಾಕುಶಲತೆಗಳಲ್ಲಿ ಅಭಿರುಚಿ ಹುಟ್ಟುವುದು ಅಪೂರ್ವವೆಂದು ಕೆಲವರು ತಿಳಿದಿರುವರು. ಇದು ತಪ್ಪುತಿಳುವಳಿಕೆ. ಹರ್ಮಿಟೇಜ್ ಎಂಬ ಸೌಧದಲ್ಲಿ ಪುರಾತನ ಚಿತ್ರಗಳನ್ನು ಪ್ರಭುತ್ವ ಸರ್ಕಾರ ಇಟ್ಟಿರುವುದಲ್ಲದೆ, ಕಲಾಮಂದಿರವೆಂಬ ಹೊಸ ಕಟ್ಟಡದಲ್ಲಿ ವಿಪ್ಲವದ ಕಾಲದಿಂದೀಚೆಗೆ ಕಲಾಕೋವಿದರು ಬರೆದಿರುವ ಚಿತ್ರ, ಮೂರ್ತಿಗಳನ್ನು ಕ್ರಮವಾಗಿ ಪ್ರದರ್ಶಿಸಿರುವುದು. ಈ ಚಿತ್ರಗಳನ್ನು ನೋಡುವುದರಿಂದ ರಶಿಯಾ ಜನರ ಮಾನಸಿಕ ಪ್ರವೃತ್ತಿವಿಕಾಸವು ಹೇಗೆ ಕಾಲಧರ್ಮಕ್ಕನುಸಾರವಾಗಿ ವ್ಯತ್ಯಾಸವಾಗುತ್ತಿರುವುದು ಎಂಬ ಅಂಶ ಚೆನ್ನಾಗಿ ವ್ಯಕ್ತವಾಗುವುದು.

ಆಧುನಿಕ ರಶಿಯಾದಲ್ಲಿ ಇತರ ದೇಶಗಳಲ್ಲಿರುವಂತೆ ನ್ಯಾಯಸ್ಥಾನ ಮತ್ತು ನ್ಯಾಯವನ್ನು ದೊರಕಿಸುವ ವಿಧಾನಗಳು ಇಲ್ಲ. ರಶಿಯಾದ ನ್ಯಾಯಸ್ಥಾನಗಳಲ್ಲಿ ಫೀಜು ಇಲ್ಲ; ವಾದಿಸಲು ವಕೀಲರು ಇದ್ದೇತೀರಬೇಕೆಂಬ ನಿರ್ಬಂಧವಿಲ್ಲ; ಸಾವಿರಾರು ರೂಪಾಯಿ ಸಂಬಳವಿರುವ ದೊಡ್ಡ ನ್ಯಾಯಾಧೀಶರೂ ಇಲ್ಲ; ಸಿವಿಲ್, ಕ್ರಿಮಿನಲ್ ಕೋರ್ಟುಗಳೆಂಬ ಪ್ರತ್ಯೇಕ ನ್ಯಾಯಸ್ಥಾನಗಳಿಲ್ಲ. ಇವು ಇತರರಿಗೆ ಆಶ್ಚರ್ಯಕರವಾಗಿದ್ದರೂ ರಶಿಯಾದಲ್ಲಿ ಪ್ರತಿದಿವಸವೂ ನೋಡಬಹುದಾದ ದೃಶ್ಯಗಳು. ಪ್ರಾಂತೀಯ ನ್ಯಾಯಸ್ಥಾನ, ಕೇಂದ್ರನ್ಯಾಯಸ್ಥಾನಗಳಲ್ಲದೆ ಪ್ರಜೆಗಳ ನ್ಯಾಯಸ್ಥಾನ (Peoples' Court) ಕೂಲಿಗಾರರ ನ್ಯಾಯಸ್ಥಾನ (Comrade Courts) ಎಂಬ ವಿಶೇಷ ನ್ಯಾಯಸ್ಥಾನಗಳು ರಶಿಯಾದಲ್ಲಿರುವುದು ಒಂದು ವಿಶೇಷ ಸಂಗತಿ.

ವ್ಯವಸಾಯದ ವಸ್ತುಪ್ರದರ್ಶನಶಾಲೆ, ವೈಜ್ಞಾನಿಕ ಪದ್ಧತಿಯ ಪ್ರಕಾರ ಕಟ್ಟಿರುವ ಪಶುಶಾಲೆ, ರೈತರ ಮನೆಗಳು, ವ್ಯವಸಾಯದ ಉಪಕರಣಗಳು ಇವುಗಳನ್ನೊಳಗೊಂಡ ಸರ್ಕಾರದಿಂದ ಸ್ಥಾಪಿತವಾಗಿರುವ ರೈತರ ಭವನ, ಇಡೀ ಪ್ರಪಂಚಕ್ಕೆ ಮಾರ್ಗದರ್ಶಿ ಎನ್ನಬಹುದು. ಜನರ ಮಾನಸಿಕಾಭಿವೃದ್ಧಿಗಾಗಿ ಕ್ಲಬ್ಬು, ಪಾಠಶಾಲೆ, ಗ್ರಂಥಾಲಯ, ರೇಡಿಯೋ, ಶರೀರಾಭಿವೃದ್ಧಿಗಾಗಿ ಮಲ್ಲಶಾಲೆ, ಭೋಜನಶಾಲೆ ಆಸ್ಪತ್ರೆ, ವಿಶ್ರಾಂತಿ ಗೃಹಗಳು, ಪುರೋಭಿವೃದ್ಧಿಗಾಗಿ ಜೀವವಿಮಾ ಪದ್ಧತಿ ಇವುಗಳನ್ನೆಲ್ಲಾ ಸರ್ಕಾರ ಏರ್ಪಡಿಸಿ ದೇಶವು ಸರ್ವತೋಮುಖವಾಗಿ ಬೆಳೆಯಲು ಸರ್ಕಾರ ಅವಕಾಶವನ್ನು ಕಲ್ಪಿಸಿರುವುದು.

ಒಟ್ಟಿನಲ್ಲಿ ಪುಸ್ತಕದ ಕೊನೆಯಲ್ಲಿ ಬರೆದಿರುವ ಹಿನ್ನುಡಿಯಲ್ಲಿ ಕ್ರಾಂತಿಯ ತತ್ವ, ಹೆಂಗಸರ ಉತ್ತಮಸ್ಥಿತಿ, ದೇಶ ಸಮ್ಮದೆಂಬ ಜನರ ಹೊಸ ಹಮ್ಮೆ, ಆಚಾರದಿಂದ ಅಭ್ಯಾಸ ಎನ್ನುವ ಹೊಸ ವಿದ್ಯಾಭ್ಯಾಸದ ನೀತಿ, ಔದ್ಯೋಗಿಕ ಪ್ರಗತಿಗಾಗಿ ಮಾಡುತ್ತಿರುವ ಪ್ರಯತ್ನ, ಕೌಟುಂಬಿಕಜೀವನ ಸೌಕರ್ಯ ಮೊದಲಾದ ವಿಷಯಗಳ ಸಾರಾಂಶವನ್ನು ಅನುವಾದಕರು ವಿವರಿಸಿರುವರು. ಪುಸ್ತಕ ಸಣ್ಣದು; ಅದರಲ್ಲಿ ಅಡಗಿ ರುವ ವಿಷಯವಾದರೋ ಬಹು ದೊಡ್ಡದು. ಪುಸ್ತಕದ ಪ್ರತಿಪಙ್ತಿ ಪ್ರತಿ ಪುಟ ವಿಷಯಗರ್ಭಿತವಾಗಿದ್ದರೂ ಶೈಲಿಯಲ್ಲಿ ಕಾಠಿಣ್ಯವಿಲ್ಲ. ಪುಸ್ತಕ ಕಾದಂಬರಿಯಂತೆ ಬಹು ಸ್ವಾರಸ್ಯವಾಗಿಯೂ ಜ್ಞಾನಸದಾಯಕವಾಗಿಯೂ ಇರುವುದು. ಶ್ರೀಮಾನ್ ಶರ್ಮ ಅವರು ಮತ್ತಿಷ್ಟು ಗ್ರಂಥಗಳನ್ನು ಅನುವಾದಮಾಡಿ ಕನ್ನಡ ಭಾಷೆಯ ಸೇವೆಯನ್ನು ಮಾಡಲೆಂದು ಹಾರೈಸುವ.

ಹ.ಕೃ.

---

"ವಿಶ್ವಮೇಧ"—ಸಂಯುಕ್ತ ಕರ್ನಾಟಕ ಮುದ್ರಣಮಂದಿರ, ಹುಬ್ಬಳ್ಳಿ. ಪುಟಗಳು, ೨೨೦; ಬೆಲೆ, ರೂ. ೦-೧೨-೦.

ಈ ಪುಸ್ತಕವನ್ನು ಶ್ರೀಮಾನ್ ಸಂಜಯ ಅವರು ಬರೆದಿರುವರು. ಇದಕ್ಕೆ ಶ್ರೀಮಾನ್ ಮೋಹರೆ ಹನುಮಂತರಾಯರು ಮುನ್ನುಡಿಯನ್ನು ಬರೆದಿರುತ್ತಾರೆ. ಕಳೆದ ಮೂರು ವರ್ಷಗಳಿಂದ ಅವಿಚ್ಛಿನ್ನವಾಗಿ ನಡೆಯುತ್ತಿರುವ ವಿಶ್ವಮೇಧಯಾಗ ಅಥವಾ ನರಯಜ್ಞದ ಸಮಗ್ರವೃತ್ತಾಂತವನ್ನು ಸಂಕ್ಷೇಪವಾಗಿ ಗ್ರಂಥಕರ್ತರು ತಿಳಿಸಿರುವರು. ಪುಸ್ತಕದಲ್ಲಿ ೧೭ ಅಧ್ಯಾಯಗಳೂ, ಕಾಂಗ್ರೆಸ್ಸಿನ ಯುದ್ಧನೀತಿ, ಮಹಾತ್ಮಾ ಗಾಂಧಿಯವರ ಯುದ್ಧನೀತಿ, ಫ್ರಾನ್ಸ್-ಜರ್ಮನಿ ಒಪ್ಪಂದದ ಕರಾರು, ಫ್ರಾನ್ಸ್-ಇಟಲಿ ಒಪ್ಪಂದದ ಕರಾರುಗಳೆಂಬ ನಾಲ್ಕು ಪರಿಶಿಷ್ಟಗಳೂ ಇವೆ. ಪುಸ್ತಕದ ಕೊನೆಯಲ್ಲಿ ವಿಶ್ವಸಂಗ್ರಾಮದ ದಿನಚರ್ಯದ ಪಟ್ಟಿಯನ್ನು ಸಹ ಕೊಟ್ಟಿರು ವರು. ವಿಷಯಗಳನ್ನು ಪಾಠಕರಿಗೆ ಮಂದಟ್ಟುಮಾಡುವ ಉದ್ದೇಶದಿಂದ ಅಲ್ಲಲ್ಲೆ ನಕ್ಷೆ, ವ್ಯಂಗ್ಯಚಿತ್ರ (ಕಾರ್ಟೂನ್) ಗಳನ್ನು ಬರೆದಿರುವರು. ಉದಾಹರಣೆಗಾಗಿ ರಣಕುಂಡವೆಂಬ ಚಿತ್ರ ಹಿಟ್ಲರಿನ ರಾಷ್ಟ್ರಾಕಾಂಕ್ಷೆ, ಅರ್ಥಕಾಂಕ್ಷೆ, ವರ್ಣದ್ವೇಷ; ಅಧಿಕಾರತೃಷ್ಣೆ ಇವುಗಳನ್ನು ಉದಹರಿಸುವುದು. ಮತ್ತೊಂದು ಚಿತ್ರದಲ್ಲಿ ಗೋಳಾ ಕಾರವಾಗಿರುವ ವಿಶ್ವವನ್ನು ಹಿಟ್ಲರನು ಬಲಾತ್ಕಾರದಿಂದ ಜರ್ಮನಿಯ ಜೇಬಿಗೆ ನೂಕಬೇಕೆಂದು ಪ್ರಯತ್ನಿಸುತ್ತಿರುವನು. ಇದು ಅವನ ಮಹತ್ವಾಕಾಂಕ್ಷೆಯನ್ನು ವಿಶದಗೊಳಿಸುವುದು.

ಒಟ್ಟಿನಲ್ಲಿ ಗ್ರಂಥಕರ್ತರು ಈಗ ನಡೆಯುತ್ತಿರುವ ಪ್ರಚಂಡ ಯುದ್ಧದಕಾರಣ, ಅಂತರರಾಷ್ಟ್ರೀಯ ಅರಾಜಕತ್ವ, ಈ ಮಹಾ ಯಜ್ಞದಲ್ಲಿ ಭಾಗವನ್ನು ವಹಿಸಿರುವ ರಾಷ್ಟ್ರಗಳ ಬಲಾಬಲ, ಸರ್ವತೋಮುಖಯುದ್ಧದ ಅರ್ಥ ಇವೇ ಮೊದಲಾದ ವಿಷಯಗಳನ್ನೂ, ಹಿಟ್ಲರನು ರ್ಹಾಯರ್ಲ್ಯಾಂಡ್‌ಸ್ನು ಆಕ್ರಮಿಸಿಕೊಂಡ ದಿನದಿಂದ ಜಪಾನೀಯರು ಈ ಯುದ್ಧಕ್ಕೆ ಸೇರಿ ಸಿಂಗಪುರವನ್ನು ಆಕ್ರಮಿಸಿಕೊಂಡ ದಿನದ ವರೆಗೆ ನಡೆದಿರುವ ಮುಖ್ಯವಾದ ಘಟನೆಗಳನ್ನೂ ಚೆನ್ನಾಗಿ ವಿವರಿಸಿರುವರು. ಈಗಿನ ಅಂತರರಾಷ್ಟ್ರೀಯ ಪರಿಸ್ಥಿತಿಯನ್ನು ತಿಳಿಯಬೇಕೆಂದಿರುವ ಕನ್ನಡಿಗರಿಗೆ ಸಂಜಯ ಅವರು ಬರೆದಿರುವ ಗ್ರಂಥವು ಒಂದು ಸಣ್ಣ ಕೈಪಿಡಿಯಾಗಿರುವುದರಲ್ಲಿ ಸಂದೇಹವಿಲ್ಲ.

ಹ.ಕೃ.

---

**"ಚಿಗುರು"**—ಬರೆದವರು: ದಿವಂಗತೆ ಸೌ. ಗೌರಮ್ಮ; ಸಂಪಾದಕರು: ಚುಳಕಿ ಗೋವಿಂದರಾಯರು, ಲಲಿತ ಸಾಹಿತ್ಯಮಾಲೆ; ಪ್ರಕಾಶಕರು: ದ. ಬಾ. ಕುಲಕರ್ಣಿ, ಮನೋಹರ ಗ್ರಂಥಭಾಂಡಾರ, ಧಾರವಾಡ; ಬೆಲೆ, ೦-೧೪-೦.

ಸೌ. ಗೌರಮ್ಮನವರು "ಕಂಬನಿ"ಯನ್ನೇ ಮೊದಲು "ಚಿಗುರು" ಎಂದು ಕರೆಯಬೇಕೆಂದಿದ್ದುದು ಅವರ ಧ್ಯೇಯದ ಔನ್ನತಿಯನ್ನು ಮಾತ್ರ ಸೂಚಿಸುತ್ತದೆ. ಆ ಕಥಾಸಂಗ್ರಹದಲ್ಲಿ ಅವರ ಕಲೆಯು ಪೂರ್ಣವಾಗಿ ಅರಳಿದೆ. ಆದರೆ ಅದರಲ್ಲಿ ಪ್ರಕಟಿತವಾಗದೆ ಉಳಿದಿದ್ದ ಕಥೆಗಳಲ್ಲಿ ಒಂಬತ್ತರ "ಚಿಗುರು" ಎಂಬ ಈ ಸಂಗ್ರಹಕ್ಕೆ ಈ ಹೆಸರು ಒಪ್ಪುತ್ತದೆ. ಇಲ್ಲಿ ಕಾಣುವುದು ಚಿಗುರಿನ ಎಳಸು, ಚಿಗುರಿನ ಸೊಗಸು.

ಸಮಾಜದ ಕುರುಡುಕಟ್ಟುಗಳೂ ತರುಣಮನದ ಲೋಭಮೋಹಗಳೂ ಪ್ರೇಮ ಪಥದಲ್ಲಿ ಭೂತಗಳಂತೆ ಸುಳಿದು ಒಮ್ಮೊಮ್ಮೆ ಪ್ರೇಮಿಗಳ ಸೌಖ್ಯವನ್ನು ನುಂಗುವುವು. ಈ ದುರಂತದ ಜವಾಬ್ದಾರಿ ಬಹುಮಟ್ಟಿಗೆ ಪುರುಷರ ಮೇಲೆ. ಬಾಲೆಯರು ಅಸ್ವತಂತ್ರರಾಗಿರುವುದರಿಂದ ಎಷ್ಟೋ ಬಾರಿ ನಿರಪರಾಧಿನಿಯರಾದರೂ ದುಃಖಕ್ಕೆ ಗುರಿಯಾಗುವರು. ಒಮ್ಮೊಮ್ಮೆ ಪ್ರೇಮಿಯ, ಪ್ರೇಯಸಿಯ ಅಥವಾ ಅವರ ಮಿತ್ರರ ಚಾತುರ್ಯ, ಸರಳತೆ ಅಥವಾ ಧೈರ್ಯದಿಂದ ಪ್ರೇಮವು ವಿಜಯಿಯಾಗುವುದು. ಇದು ಈ ಕಥೆಗಳ ವಸ್ತು. ಪ್ರೇಮದ ಗೆಲವಿನಲ್ಲಿ ನಲ್ಮೆ, ಪ್ರೇಮದ ಸೋಲಿನಲ್ಲಿ ಮರುಕ—ಇವು ಈ ಕಥೆಗಳ ಸ್ಫೂರ್ತಿ. ಈ ಸುಧಾರಕದೃಷ್ಟಿಯು ಸ್ಫೂರ್ತಿಯಾಗುಳಿದಿದೆಯೇ ಹೊರತು ರಸಸೃಷ್ಟಿಯ ಧ್ಯೇಯಪ್ರಮುಖತೆಗೆ ಎಳ್ಳಷ್ಟೂ ಕುಂದು ತಂದಿಲ್ಲ. ಸಮಾಜದ ವಿಮರ್ಶೆಯಲ್ಲಿ ರೋಷದ ರೊಚ್ಚಿಲ್ಲ, ದುಃಖದ ವರ್ಣನೆಯಲ್ಲಿ ಕರುಣದ

ಅತಿರೇಕವಿಲ್ಲ. ಪ್ರತಿ ಕಥಾನಕದಲ್ಲಿಯೂ ಒಂದೊಂದು ಮೌಢ್ಯದಿಂದ ಪ್ರತ್ಯೇಕಿಸಲ್ಪಟ್ಟ ಪ್ರೇಮವು ಸಾಣೆಯ ಮೇಲಿನ ಸ್ವರ್ಣರೇಖೆಯಂತೆ ಥಳಿಸುತ್ತದೆ.

ಈ ಕಥೆಗಳಲ್ಲಿ ವ್ಯಕ್ತಿಗಳ ಚಿತ್ತದ ಚಲನವಲನಗಳ ಕಡೆಗೇ ದೃಷ್ಟಿ ಹೆಚ್ಚು. ಆದರೆ "ನನ್ನ ಮದುವೆ" ಎಂಬ ಕಥೆಯ ನಾಯಕನಲ್ಲಿ ಮಾತ್ರ "ಕಂಬನಿ"ಯ ಪಾತ್ರಗಳ ಸ್ವಭಾವಸೂಕ್ಷ್ಮತೆಯು ಕಂಡುಬರುತ್ತದೆ. ಅಲ್ಲದೆ ಅವನ ವಿಷಯದಲ್ಲಿ ವಿಧಿಯು ನಿರ್ಘೃಣನ್ಯಾಯದಿಂದ ನಡೆದುಕೊಳ್ಳುತ್ತದೆ. ಈ ಕಾರಣಗಳ ಪ್ರಭಾವದಿಂದ ಈ ಕಥೆಯು ಈ ಸಂಗ್ರಹದಲ್ಲೆಲ್ಲಾ ಅತ್ಯಂತ ಪರಿಣಾಮಕಾರಿಯಾಗಿ ಎದ್ದು ನಿಲ್ಲುತ್ತದೆ.

ಸೀಮೆಗೆ ಹೋಗಬೇಕೆಂಬಾಸೆಯು ರಾಮುವಿನಲ್ಲಿ ಬಾಲ್ಯದಿಂದಲೂ ಬೆಳೆದು ಉತ್ಕಟವಾಗಿತ್ತು. ಅದರ ಸಿದ್ಧಿಗೆ ಅವನ ತಂದೆ ನೆರವಾಗಲಿಲ್ಲ. ಆದರೆ ಹೈದರಾಬಾದಿನ ಜಮೀನ್ದಾರರೊಬ್ಬರು ತಮ್ಮ ಮಗಳು ಶಾರದೆಯನ್ನು ಅವನು ಮದುವೆಯಾಗುವುದಾದರೆ ಈ ವಿಷಯದಲ್ಲಿ ಅವನಿಗೆ ಸಹಾಯಮಾಡಲು ಒಪ್ಪಿದರು. ವರದಕ್ಷಿಣೆಯ ಪದ್ಧತಿಯನ್ನು ಮೊದಲಿನಿಂದ ವಿರೋಧಿಸುತ್ತಿದ್ದರೂ ರಾಮುವು ಅವರ ಮಾತಿಗೆ ಸಮ್ಮತಿಸಿದನು. ಆದರೆ ತಾನು ಹಣಕ್ಕಾಗಿ ಮಾತ್ರ ಮದುವೆಯಾಗುವುದರಿಂದ ಹೆಣ್ಣನ್ನು ಮದುವೆಗೆ ಮುನ್ನ ಒಮ್ಮೆ ನೋಡಲು ತಾನು ಅರ್ಹನಲ್ಲವೆಂದು ಅವನು ತನ್ನ ತಂದೆಗೆ ಹೇಳಿಬಿಟ್ಟನು. ಆದರೂ ಮೊದಲಿನಿಂದ ತಾನು ಮದುವೆಯಾಗುವವಳ ರೂಪವೈಭವವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುತ್ತಿದ್ದ ರಾಮುವಿಗೆ ಶಾರಿಯು ಹೇಗಿರುವಳೋ ಎಂದು ಅಂತರಂಗವು ತುಡಿಯುತ್ತಿತ್ತು. ಧಾರೆಯ ಸಮಯದಲ್ಲಿ ಅವನು ಮೊದಲಸಲ ಶಾರಿಯನ್ನು ನೋಡಿದುದನ್ನೂ ಆಗ ಅವರಲ್ಲುಂಟಾದ ಭಾವಗಳನ್ನೂ ಕಥೆಯ ಮುಕ್ತಾಯವು ಉಜ್ಜ್ವಲವಾಗಿ, ಕರುಣಭೀಷಣವಾಗಿ ಚಿತ್ರಿಸುತ್ತದೆ. ಅವಳು ಎಣ್ಣೆಗೆಂಪಾಗಿ ತೆಳ್ಳಗೆ ಉದ್ದವಾಗಿದ್ದುದಷ್ಟೇ ಅಲ್ಲ. ಪುರೋಹಿತರು ಮಾಲೆ ಹಾಕೆಂದು ಎರಡುಸಲ ಹೇಳಿದರೂ ಅವಳು ಸುಮ್ಮನಿದ್ದಳು. ಅವಳ ಮುಂದೆಯೇ ನಿಂತಿರುವರೆಂದೂ ಮಾಲೆಹಾಕಬೇಕೆಂದೂ ಅವಳ ತಾಯಿ ಹೇಳಿದಾಗ ಮಾತ್ರ ಶಾರಿಯು ತಡವರಿಸುತ್ತ ರಾಮುವಿಗೆ ಮಾಲೆ ಹಾಕಿದಳು. ಅವಳ ಕಣ್ಣುಗಳಲ್ಲಿ ತುಂಬಿದ್ದ ಕಣ್ಣೀರಿನ ತೊಟ್ಟುಗಳೆರಡು ಕಪೋಲಗಳ ಮೇಲುರುಳಿದುವು. ತನ್ನ ಕಡೆಯವರಾರಿಗೂ ಗೊತ್ತಾಗದ ಆ ವಿಷಯ ರಾಮುವಿಗೆ ಆಗ ತಿಳಿಯಿತು—ಅವನ ಹೆಂಡತಿ ಶಾರಿ ಕುರುಡಿಯೆಂದು.

"ಮುನ್ನಾದಿನ" ಎಂಬುದು ಇನ್ನೊಂದು ಉತ್ತಮಕಥೆ. ಗೌರಮ್ಮನವರು ಮೃತ್ಯುವಶರಾಗುವ ಮುನ್ನಾದಿನ ಇದನ್ನು ಬರೆದುದರಿಂದ ಇದನ್ನು ಸಂಪಾದಕರು ಈ ಹೆಸರಿನಿಂದ ಕರೆದಿದ್ದಾರೆ. ಇದು ಸಶೇಷವಾದರೂ ಇರುವಷ್ಟೆ ನಮ್ಮ ಮನಸ್ಸಿನ

ಮೇಲೆ ಪೂರ್ಣ ಕೃತಿಯಂತೆ ಪರಿಣಾಮವನ್ನುಂಟುಮಾಡುತ್ತದೆ. ಇದರ ಮೊದಲ ರ್ಧವು ಬಡ ಹುಡುಗನೊಬ್ಬನು ಜೀವನೋಪಾಯಕ್ಕಾಗಿ ಕಾಫೀ ತೋಟದಲ್ಲಿ ಕೆಲಸಕ್ಕೆ ಸೇರಿ ದೊರೆಯ ಇಚ್ಛೆಯನ್ನನುಸರಿಸಿ ಕ್ರಿಶ್ಚಿಯನ್ನಾಗುವುದನ್ನು ಚಿತ್ರಿಸಿ ದರೆ, ಇನ್ನೊಂದರ್ಧವು ಅವನು ಹರಯದಲ್ಲಿ. ಆಗಾಗ ಬೀಡಿಯಂಗಡಿಯೊಂದರಲ್ಲಿ ವ್ಯಾಪಾರಕ್ಕೆ ಕುಳಿತುಕೊಳ್ಳುತ್ತಿದ್ದ ಮಾಪಿಳ್ಳೆ ತರುಣಿಯೊಬ್ಬಳನ್ನು ಪ್ರೇಮಿಸಿ ಅವ ಳನ್ನು ಮದುವೆಯಾಗುವುದಕ್ಕೋಸ್ಕರ ಮತ್ತೊಮ್ಮೆ ತನ್ನ ಮತವನ್ನು ಬದಲಾಯಿಸಿ ಮುಸಲ್ಮಾನನಾದುದನ್ನು ವರ್ಣಿಸುತ್ತದೆ. ಮೊದಲರ್ಧಕ್ಕೆ ಎರಡನೆಯರ್ಧವು ಸಮು ಚಿತವಾಗಿ ಮೊದಲನೆಯದರ ಪರಿಣಾಮವು ಎರಡನೆಯದರದನ್ನು ಸಮರ್ಥಿಸುತ್ತದೆ. ಈ ವೈಶಿಷ್ಟ್ಯದಿಂದ ಅವನ ಸರಳಮನಸ್ಸಿನ ಅಧೈರ್ಯದ ಭಾವವು ಸುಂದರವಾಗಿ ಮೂರ್ತಿಗೊಳ್ಳುತ್ತದೆ. ಆವರಣದ ಸಾವೀನ್ಯದಿಂದಲೂ ವರ್ಣನೆಯ ಸಹಜತೆಯಿಂದಲೂ ಅವನೂ ಹುಸೇನ್ ಬೀಯೂ ಒಬ್ಬರನ್ನೊಬ್ಬರು ಪ್ರೇಮಿಸುವ ಚಿತ್ರವು ಬಹು ಮೋಹಕವಾಗಿದೆ. ಚೆನ್ನಾಗಿರುವ ಇತರ ಕಥೆಗಳೆಂದರೆ "ಪಾಪನ ಮದುವೆ", "ಮರದ ಬೊಂಬೆ" ಮತ್ತು "ಅದೃಷ್ಟದ ಆಟ". ಪಾಪ ಆಂಟಿಯರ ಬಾಲ್ಯದ ಚಿತ್ರವೂ, ತರಗತಿಯಲ್ಲಿ ಬಾಲೆಯರನ್ನು ನೋಡಲೂ ಮಾತಾಡಿಸಲೂ ಅಳುಕುತ್ತಿದ್ದ ಮರದ ಗೊಂಬೆ ಉಪಾಧ್ಯಾಯ ಕೃಷ್ಣಮೂರ್ತಿ ಚದುರೆ ವಿದ್ಯಾರ್ಥಿನಿ ಶೈಲೆಯರ ಪ್ರೇಮದ ಚಿತ್ರವೂ, ಮಣಿ ಲತೆಯರ ಅನುರಾಗವು ಪಗಡೆಯಾಟಗಳ ಆವರಣದಲ್ಲಿ ಹುಟ್ಟಿ ಬೆಳೆದುದರ ಮತ್ತು ಅದಕ್ಕೆ ತಟ್ಟಿದ ವಿಘ್ನದ ವಿಷಾದಾಂತದ ಚಿತ್ರಗಳೂ ಹೃದಯಂಗಮವಾಗಿವೆ.

ಆದರೆ ಈ ಎಲ್ಲ ಕಥೆಗಳಿಗೂ ಬೆಳೆವಣಿಗೆ, ಪುಷ್ಟಿ, ಸಾಲದು. ಈ ದೋಷದ ಜೊತೆಗೆ "ಪಾಪನ ಮದುವೆ"ಯಲ್ಲಿ ಕ್ರಿಯೆಯ ಐಕ್ಯಕ್ಕೂ, "ಮರದ ಗೊಂಬೆ" ಯಲ್ಲಿ ಕಥೆಯ ಓಟದ ನಿರ್ವಾಹದಲ್ಲಿ ಸಹಜತೆಗೂ ಭಂಗಬಂದಿದೆ. ಅಲ್ಲದೆ ಸಂಗ್ರಹದ ಮೊದಲನೆಯ ಮತ್ತು ಮೂರನೆಯ ಕಥೆಗಳು ಲೇಖಕಿಯರು ಮೊದಲುಮೊದಲು ಬರೆದುವು, ಅವುಗಳ ಕಲೆ ಬಾಲಿಶವಾಗಿದೆ. "ಚಿಗುರಿ"ನಲ್ಲಿ ಶೈಲಿ ಸರಳವಾಗಿ ಸೂಕ್ಷ್ಮ ವಾಗಿದೆ, ಆದರೆ "ಕಂಬನಿ"ಯ ಶೈಲಿಯ ಮೃದುಮಧುರತೆಯನ್ನು ಹೊಂದಿಲ್ಲ. ಈ ಬಗೆಯಲ್ಲಿ "ಚಿಗುರಿ"ನ ಕಲೆಯು ಪಕ್ವಸ್ಥಿತಿಯನ್ನು ಮುಟ್ಟಿಲ್ಲವಾದರೂ ಇಲ್ಲಿನ ಕಥೆಗಳಲ್ಲಿ ರಸಿಕರ ಮನವೊಲಿಸಿ ನಲಿಸಲು ಸಾಕಾದಷ್ಟು ಸತ್ತ್ವವಿದೆ, ಸೌಂದರ್ಯ ವಿದೆ. "ಚಿಗುರು" ಗೌರಮ್ಮನವರ ಕಲೆಯ ಮಾಮರದ ಚಿಗುರು. "ಕಂಬನಿ" ಆದರ ಮೊದಲಹಣ್ಣು. ಅವರ ಅಕಾಲಮರಣದ ಸಿಡಿಲಿನಿಂದ ತಟ್ಟನೆ ಆ ಕಲಾ ವೃಕ್ಷವು ಭಸ್ಮೀಭೂತವಾದುದು ಕನ್ನಡಿಗರ ದುರ್ದೈವವೇ ಸರಿ.

ಕೆ. ನರಸಿಂಹಮೂರ್ತಿ.

" ಆರತಿ "—ಹೆಣ್ಣುಮಕ್ಕಳ ಕಥಾಸಂಕಲನ ; ಸಂಪಾದಕರು : ಮೇವುಂಡಿ ಮಲ್ಲಾರಿ, ಕುಲಕರಣಿ ದತ್ತಾತ್ರೇಯ ; ಪ್ರಕಾಶಕರು : ದ. ಬಾ. ಕುಲಕರ್ಣಿ, ಮನೋಹರ ಗ್ರಂಥಭಾಂಡಾರ, ಧಾರವಾಡ ; ಬೆಲೆ, ಹನ್ನೆರಡಾಣೆ.

ಸ್ತ್ರೀ ಜೀವನದ ಸುಖದುಃಖಗಳನ್ನು ತಮ್ಮ ದೃಷ್ಟಿಕೋನದಿಂದಲೇ ಸ್ತ್ರೀಯರೇ ಚಿತ್ರಿಸಿರುವ ಒಂಬತ್ತು ಸಣ್ಣಕತೆಗಳ ಸಂಗ್ರಹ, " ಆರತಿ ". ಸ್ತ್ರೀ ಜೀವನದ ದುಃಖಗಳ ಮೇಲ್ಗೆಯೇ ಈ ಸಣ್ಣಕತೆಗಳು ಹೆಚ್ಚಾಗಿ ಬೆಳಕುಬೀರುವುವು. ಬಹುಪತ್ನೀತ್ವ ವಿಧವಾಕೇಶಖಂಡನವಿಧಿಗಳಿಂದುಂಟಾಗುವ ಶೋಕವನ್ನು . ಕೆಲವು ವಿವರಿಸಿದ್ದರೆ ಅಪುತ್ರತೆ ದಾರಿದ್ರ್ಯಗಳಿಂದುಂಟಾಗುವ ಅಳಲನ್ನು ಇನ್ನು ಕೆಲವು ಬಣ್ಣಿಸುತ್ತವೆ.

ಮೊದಲೆರಡು ಕಥೆಗಳು ಗೌರಮ್ಮನವರ ಸೆನಪಿನ ಕಥಾಸ್ಪರ್ಧೆಯಲ್ಲಿ ಬಹುಮಾನ ಪಡೆದುವು. ಕುಸುಮಾ ಹತ್ತಿರದಲ್ಲಿರುವುದು ಪರೀಕ್ಷೆಗೆ ಓದುವ ರಾಮುವಿಗೆ ನೆರವೇ ವಿನಾ ಅಡ್ಡಿಯಲ್ಲವೆಂಬುದರ ಸರಸಚಿತ್ರ ಸುಮಿತ್ರಮ್ಮನವರ " ನನ್ನ ಪರೀಕ್ಷೆ." ಭಾವದ ಸೂಕ್ಷ್ಮತೆಯು ಅದರ ಉನ್ಮೇಷದಲ್ಲಿ ಪೂರ್ಣವಾಗಿ ಉಳಿದುಬಂದಿರದಿದ್ದರೂ, ಈ ಕಥೆಯು ಆಹ್ಲಾದಕರವಾಗಿದೆ. ಎರಡನೆಯ ಕಥೆ " ವಾಣಿ "ಯವರ " ಕನಸೋ ನೆನಸೋ." ಒಂದು ರಾತ್ರಿ ಬೃಂದಾವನದಲ್ಲಿ ಬಹಳ ಹೊತ್ತು ತಮ್ಮ ಗುಂಪು ಉಳಿಯಬೇಕಾಗಿ ಬಂದ ಪ್ರಸಂಗವನ್ನು ಲೇಖಕಿಯರು ಗೌರಮ್ಮನವರಿಗೆ ವಿವರಿಸಿ ದಾಗ ಅವರು ತಾವು ಆಗ ಅಲ್ಲಿದ್ದಿದ್ದರೆ ಅಪಾಯಕ್ಕಳುಕದೆ ಈಸಿ ಆನಂದಿಸು ತ್ತಿದ್ದರೆಂದು ನುಡಿದುದು ನೆನಪೆಂದೇ ಭಾಸವಾಗುತ್ತಿರುತ್ತದೆ. ಆದರೆ ಇದ್ದಕ್ಕಿದ್ದಂತೆ ಅವರು ಈಸಲಿಳಿಯುವುದೂ ಲೇಖಕಿಯರು ಭಯಚಕಿತರಾಗಿ ಅವರನ್ನು ತಡೆಯ ಹೋಗುವುದೂ ಇದೆಲ್ಲವೂ ಗೌರಮ್ಮನವರ ಅಕಾಲಮರಣವು ಪ್ರಚೋದಿಸಿದ ಕನಸೆಂದು ಸ್ಪಷ್ಟಗೊಳಿಸುವುವು. ಈ ಕಥೆಯಲ್ಲಿನ ವರ್ಣನೆಯ ರಮ್ಯತೆಯಿಂದಲೂ ರಚನೆಯ ಚಾತುರ್ಯದಿಂದಲೂ ಪರಿಣಾಮವು ಕರುಣಾವ್ಯಂಜಕವಾಗಿದೆ. ಪ್ರಕೃ ತಿಯ ಚೆಲುವಿನಲ್ಲಿ ಗೌರಮ್ಮನವರಿಗಿದ್ದ ತೀವ್ರವಾದ ಒಲವು ಕಥೆಯುದ್ದಕ್ಕೂ ಹೆಚ್ಚು ಅಭಿವ್ಯಕ್ತವಾಗಿದ್ದು, ಸನ್ನಿವೇಶವಿವರಣೆ ಇನ್ನಷ್ಟು ಶಕ್ತಿಯುತವಾಗಿದ್ದಿದ್ದರೆ ಈ ಕಥೆಯು ಮಹತ್ತ್ವಕ್ಕೇರುತ್ತಿದ್ದಿತು.

ಆರ್. ರತ್ನಾಬಾಯಿಯವರ " ಚೆನ್ನಿ " ಘೋರವಾದ ಸನ್ನಿವೇಶವೊಂದನ್ನು ಚಿತ್ರಿಸುತ್ತದೆ. ಮಾದನ ಪ್ರೇಮವನ್ನು ವಿರಸಗೊಳಿಸಿ ಅವನ ಮನಸ್ಸನ್ನು ಹಿಂಸಿಸು ತ್ತಿದ್ದ ತನ್ನ ಅಪುತ್ರತೆಯನ್ನು ನೀಗಿಕೊಳ್ಳಲು ಅಸಹ್ಯವಾದ ಅಪರಾಧವನ್ನು ಮಾಡಿ ಅರಿಯದ ಮಾದನು ಹರ್ಷಿಸಿದರೂ ಚೆನ್ನಿ ತಾನು ಕೊರಗಿನಲ್ಲಿ ಮಡಿಯುವುದು ಹೃದಯವಿದ್ರಾವಕವಾಗಿ ಬಂದಿದೆ. ಕುಮಾರಿ ದೇವಾಂಗನಾ ಶಾಸ್ತ್ರಿಯವರ ಬಹು

ಮಾಸಪಡೆದ "ವೇಣೀಸಂಹಾರ" ಎಂಬ ಕಥೆ ಹಲವರು ಉಪಯೋಗಿಸಿರುವ ವಸ್ತುವನ್ನೇ ತೆಗೆದುಕೊಂಡರೂ ಅದನ್ನು ಬಳಸಿಕೊಂಡಿರುವ ಬಗೆಯಿಂದ ಉತ್ತಮ ಕಲಾಕೃತಿಯಾಗಿದೆ. ಬಾಲವಿಧವೆಯಾದ ಶಾಂತೆ ಬಡಪುರೋಹಿತನ ಮಗಳು. ಜನರ ಮೆಚ್ಚುಗೆಯನ್ನೂ ಆ ಮೂಲಕ ತನ್ನ ವೃತ್ತಿಯನ್ನೂ ಉಳಿಸಿಕೊಳ್ಳಲು ತಂದೆ ನವಪ್ರಾಯದ ಮಗಳ ಕೇಶವಾಪನಕ್ಕೆ ಒಪ್ಪುವನು. ಸನ್ನಿವೇಶರಚನೆಯಲ್ಲಿ ಸಾಕಷ್ಟು ಶಕ್ತಿಯಿದೆ, ವರ್ಣನೆಯಲ್ಲಿ ಸಾಕಷ್ಟು ಉಜ್ಜ್ವಲತೆಯಿದೆ. ಕೇಶಖಂಡನದ ಮುನ್ನ ಹೆರಳುಹಾಕಿಕೊಂಡು, ಅರಳಿದ ಹೂ ಮುಡಿದು ಅವಳು ಕನ್ನಡಿಯಲ್ಲಿ ತನ್ನನ್ನು ನೋಡಿಕೊಳ್ಳುತ್ತ ಬಹುಹೊತ್ತು ನಿಲ್ಲಬೇಕೆಂದಿರುವ ದೃಶ್ಯವು ಕಾರ್ಮೋಡದ ಮಿಂಚಿನಂತೆ ಹೃದ್ಯವೂ ಹೃದ್ವೇಧಕವೂ ಆಗಿದೆ.

ಎರಡನೆಯ ಮಟ್ಟದ ಈ ಉತ್ತಮ ಕಥೆಗಳ ಜೊತೆಗಿರುವ ಉಳಿದೈದು ಕಥೆಗಳು ಅಷ್ಟು ನೀರಸವಾಗಿರದಿದ್ದರೆ "ಆರತಿ" ಹೆಚ್ಚು ಆಕರ್ಷಕವಾಗಿರುತ್ತಿತ್ತು.

ಕೆ. ನರಸಿಂಹಮೂರ್ತಿ.

---

**ಸಾಹಿತ್ಯದ ಜೀವಾಳ** (ಷೋಪನ್‌ಹೌರನ ಪ್ರಬಂಧಗಳು)—ಅನುವಾದಕರು: ಶ್ರೀ ಗೊರೂರು ರಾಮಸ್ವಾಮಿ ಐಯಂಗಾರ್ ಅವರು; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಬೆಲೆ, ೦-೧೦-೦.

ಜರ್ಮನಿಯ ತಾತ್ವಿಕರಲ್ಲಿ ಷೋಪನ್‌ಹೌರನೂ ಒಬ್ಬನು. ತತ್ವವಿಚಾರದಲ್ಲಿ ಅವನು ಹೆಚ್ಚಾಗಿ ಬರೆದಿದ್ದರೂ ಮಿಕ್ಕ ವಿಚಾರಗಳಲ್ಲೂ ಅನೇಕ ಪ್ರಬಂಧಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಸಾಹಿತ್ಯಭಾಗದ ನಾಲ್ಕು ಪ್ರಬಂಧಗಳನ್ನು ಶ್ರೀ ಗೊರೂರು ರಾಮಸ್ವಾಮಿ ಐಯಂಗಾರ್ಯರು ಅನುವಾದಮಾಡಿದ್ದಾರೆ.

'ಲೇಖನಕಲೆ' ಎಂಬುವುದು ಮೊದಲನೆಯ ಪ್ರಬಂಧ. ಷೋಪನ್‌ಹೌರನ ಅಭಿಪ್ರಾಯ ಹೀಗಿದೆ: ಲೇಖನಕಲೆಯು ಬರೆಯುವ ಶೈಲಿಯಲ್ಲೂ, ಬರೆಯಬೇಕಾದ ವಿಷಯದಲ್ಲೂ, ಆ ವಿಷಯವು ತೆಗೆದುಕೊಳ್ಳುವ ರೂಪದಲ್ಲೂ ಕಂಡುಬರುತ್ತದೆ. ಹಣದಾಸೆಯಿಂದ ಯೋಚನೆಮಾಡದೆ ಬರೆದ ಕೆಟ್ಟಬರೆವಣಿಗೆಯಲ್ಲಿ ಸಡಿಲವಾದ ಗುರಿಯಿಲ್ಲದ ಶೈಲಿಯಿದೆ, ವಿಚಾರಮಾಡದ ವಿಷಯವಿದೆ, ರಸವಿಲ್ಲದ ರೂಪವಿದೆ. ಆದರೆ ವಿಷಯಪ್ರತಿಪಾದನೆಗಾಗಿ ಯೋಚಿಸಿದ ಮೇಲೆ ಬರೆದ ಒಳ್ಳೆ ಬರೆವಣಿಗೆಯಲ್ಲಿ ಬಿಗಿಯಾದ ಶೈಲಿ, ಗಹನವಾದ ವಿಷಯ, ಕಾವ್ಯರೂಪ ಇವು ಕಾಣುತ್ತವೆ. 'ತನ್ನಷ್ಟಕ್ಕೆ ತಾನು ಆಲೋಚನೆಮಾಡುವುದು' ಎಂಬ ಎರಡನೆಯ ಪ್ರಬಂಧದಲ್ಲಿ ಷೋಪನ್‌ಹೌರನು ಬರಿಯ ಓದಿನಿಂದುಂಟಾಗುವ ಕುರುಡು ಪಾಂಡಿತ್ಯಕ್ಕೂ ಸ್ವಂತ ಆಲೋಚನೆ

ಯಿಂದುಂಟಾಗುವ ವ್ಯವಸ್ಥಿತ ಜ್ಞಾನಕ್ಕೂ ಭೇದವನ್ನು ತೋರಿಸುತ್ತಾನೆ. ಮೂರನೆಯದಾದ 'ಗ್ರಂಥಗಳು ಮತ್ತು ಅವುಗಳ ವ್ಯಾಸಂಗ' ಎಂಬ ಪ್ರಬಂಧದಲ್ಲಿ ನಿಜವಾದ ಶಾಶ್ವತವಾದ ಸಾಹಿತ್ಯಕ್ಕೂ ತೋರಿಕೆಯ ಕ್ಷಣಿಕವಾದ ಬರೆವಣಿಗೆಗೂ ವ್ಯತ್ಯಾಸವನ್ನು ತಿಳಿಸಿ, ಗ್ರಂಥ ಓದುವುದಕ್ಕೆ ಸಂಯಮ ಮುಖ್ಯವೆಂದು ಹೇಳು ತ್ತಾನೆ. ನಾಲ್ಕನೆಯ ಪ್ರಬಂಧ, 'ಶೈಲಿ'. ಇದರಲ್ಲಿ ಮಧ್ಯಮತರಗತಿಯ ಮತ್ತು ಉತ್ತಮತರಗತಿಯ ಶೈಲಿಗಳ ವ್ಯತ್ಯಾಸವನ್ನು ಹೇಳಿ, ಅದರ ಮೂಲಕ ಒಳ್ಳೆ ಶೈಲಿಯ ಲಕ್ಷಣವನ್ನು ತಿಳಿಸುತ್ತಾನೆ; ಬರೆವಣಿಗೆಯು ಅವ್ಯವಸ್ಥೆಯಾಗಿರದೆ ಸ್ಪಷ್ಟವಾಗಿ, ಸರಳವಾಗಿ, ಸ್ವಾಭಾವಿಕವಾಗಿರಬೇಕೆಂದು ಅವನ ಅಭಿಪ್ರಾಯ.

ಈ ಪ್ರಬಂಧಗಳಲ್ಲೇ ಕಂಡುಬರುವಂತೆ, ತನಗೆ ಬೇಡದವರನ್ನು ಯಾವುದಾದರೂ ಒಂದು ರೀತಿಯಲ್ಲಿ ಹಿಯ್ಯಾಳಿಸದಿದ್ದರೆ ಷೋಪನ್‌ಹೌರನಿಗೆ ಸಮಾಧಾನವೇ ಇಲ್ಲ. ಅವನಿಗೆ ಜೀವನದ ಮೇಲೆ ಸಿಟ್ಟು; ಹಾಗಿರುವಾಗ ಅವನು ಯಾರನ್ನಾದರೂ ಬಯ್ಯುವುದೇನೂ ದೊಡ್ಡದಲ್ಲ. ಆದರೆ ಎಂಥ ಗಹನವಾದ ವಿಷಯ ಹೇಳಬೇಕಾದರೂ ಅವನಿಗೆ ಸ್ಪಷ್ಟವಾಗಿ ಸುಲಭವಾಗಿ ಹೇಳುವ ಶಕ್ತಿಯಿದೆ. ಅದಕ್ಕನುಗುಣವಾಗಿ ಶ್ರೀರಾಮಸ್ವಾಮಿ ಐಯಂಗಾರ್ಯರ ಅನುವಾದವು ಮೂಲದ ತಿರುಳನ್ನು ಗ್ರಹಿಸಿದೆ.

ಶ್ರೀ ಗೊರೂರವರ ಬರೆವಣಿಗೆಯೆಂದರೆ ಯಾರಿಗಾದರೂ ಓದೋಣವೆನ್ನಿಸುತ್ತದೆ. ಅವರದು ಒಳ್ಳೆ ನುರಿತ ಕೈ. ಆದರೆ ಇಲ್ಲಿ ಇನ್ನೊಬ್ಬರ ಮಾತನ್ನು ಬರೆಯಬೇಕಾಗಿರು ವುದರಿಂದ ಕೈ ಸ್ವಲ್ಪ ತಡೆದಿದೆ. ಶಬ್ದ ಸುಲಭವಾಗಿದ್ದರೂ ಭಾವ ಸುಲಭವಾದದ್ದಲ್ಲ. ಆದ್ದರಿಂದ ಕೆಲವು ವಾಕ್ಯಗಳನ್ನರ್ಥಮಾಡಿಕೊಳ್ಳಬೇಕಾದರೆ ಎರಡು ಮೂರು ಬಾರಿ ಓದಬೇಕಾಗುವುದು. ಉದಾ: "ಅವನು (ಮಧ್ಯಮತರಗತಿಯ ಲೇಖಕ) ಪ್ರಾರಂಭ ದಿಂದಲೂ ನಿಷ್ಕಪಟಿಯೂ, ಸರಳವಾದವನೂ ಆಗಿರುವ ಸ್ವಾತಂತ್ರ್ಯವನ್ನು ಕಳೆದು ಕೊಳ್ಳುತ್ತಾನೆ." (ಪು. ೩೦). "ಆಲೋಚನೆ ಮತ್ತೆ ಭಾವವಾಗಿ ರೂಪವನ್ನು ಹೊಂದಲು ಅವರ (ಅಸ್ಪಷ್ಟವಾಗಿ ಬರೆಯುವವರ) ಮನಸ್ಸು ತೊಳಲಾಡುತ್ತಿರುವುದು ಸೂಚನೆಮಾತ್ರ ಅವರಿಗೆ ತೋರುತ್ತದೆ." (ಪು. ೩೯).

ಅಚ್ಚಿನ ತಪ್ಪನ್ನು ತಿದ್ದಿಕೊಂಡು ಓದಬೇಕೆಂದು ಅನುವಾದಕರೇ ಹೇಳಿಬಿಟ್ಟಿ ದ್ದಾರೆ. ಆದರೆ ಅದರ ಜೊತೆಗೆ ಇನ್ನೂ ಕೆಲವು ಚಿಕ್ಕ ತಪ್ಪುಗಳು ನುಣುಚಿಕೊಂಡು ಬಂದಿವೆ. ಪುಸ್ತಕದ ಹೆಸರು ರಟ್ಟಿನ ಮೇಲೆ ಇರುವುದು "ಸಾಹಿತ್ಯದ ಜೀವಾಳ"; ಆದರೆ ಪುಸ್ತಕದ ಒಳಗೆ ಎಡಗಡೆ ಪುಟಗಳ ಮೇಲೆಲ್ಲಾ ಇರುವುದು "ಲೇಖನಕಲೆ" ಎಂಬ ಮೊದಲನೆಯ ಪ್ರಬಂಧದ ಹೆಸರು. ಮುನ್ನುಡಿಯಲ್ಲಿ ಈ ವಿಚಾರವಾಗಿ ಒಂದು ಮಾತು ಹೇಳಬಹುದಾಗಿತ್ತು.—ಪುಸ್ತಕದ ಚಿಕ್ಕ ಹೆಸರಿನಲ್ಲಿರುವಂತೆ 'ಷೋಪನ್'

'ಹಾರ್' ಎಂದು ಎರಡು ಶಬ್ದಗಳಿಲ್ಲ; 'ಷೋಪನ್‌ಹಾರ್' ಎಂದು ಒಂದೇ ಶಬ್ದ, ಮತ್ತು, ಡೆಸ್‌ಕಾರ್ಟೆಸ್ (ಡೇಕಾರ್ಟ್), ಫಿಟ್‌ಚೆ (ಫಿಶ್ಟೆ) ಮುಂತಾದ ಹೆಸರುಗಳನ್ನು ಸರಿಯಾಗಿ ಬರೆಯಬಹುದಾಗಿತ್ತು.

ಈ ಸಣ್ಣ ತಪ್ಪುಗಳು ಪುಸ್ತಕದ ಮಹತ್ವವನ್ನು ಮುಚ್ಚಿಲ್ಲ. ಷೋಪನ್ ಹಾರನಿಗೆ ಸಹಜವಾದ ಕಾರದ, ಕುಚೋದ್ಯದ ಮಾತುಗಳನ್ನೂ ಅವುಗಳೊಡನೆಯೆ ಹೆಣೆದುಕೊಂಡಿರುವ ಉದಾತ್ತವಾದ ಭಾವನೆಗಳನ್ನೂ ಶ್ರೀ ರಾಮಸ್ವಾಮಿ ಐಯಂಗಾರ್ ಆದದ್ದರಿಂದ ಅಷ್ಟು ಚೆನ್ನಾಗಿ ಬರೆಯುವುದಕ್ಕಾಯಿತೆಂದು ಹೇಳಬಹುದು. ಸರಿಯಾದ ಅನುವಾದಗಳು ಕನ್ನಡದಲ್ಲಿ ಕಡಮೆಯಾಗಿರುವಾಗ ಶ್ರೀ ಗೊರೂರವರ ಬರೆವಣಿಗೆಯು ಒಳ್ಳೆದಾರಿಯನ್ನು ತೋರಿಸಿದೆ ಎನ್ನುವುದರಲ್ಲಿ ಸಂದೇಹವಿಲ್ಲ.

ಹೆಚ್. ಕೆ. ರಾಜಾರಾವ್.

---

# ಸಾದರ ಸ್ವೀಕಾರ

೧. ಹಿಂದೂದೇಶದ ಚರಿತ್ರೆ—ಮೊದಲನೆಯ ಪುಸ್ತಕ; ಲೇಖಕರು: ಶ್ರೀ|| ಎಸ್. ಕಾಳಪ್ಪ, ಎಂ.ಎ., ಬಿ.ಟಿ.; ಪ್ರಕಾಶಕರು: ಗವರ್ನಮೆಂಟ್ ಪ್ರೆಸ್, ಬೆಂಗಳೂರು; ಬೆಲೆ, ೦-೪-೬.

೨. ಹಿಂದೂದೇಶದ ಚರಿತ್ರೆ—ಎರಡನೆಯ ಪುಸ್ತಕ; ಲೇಖಕರು: ಶ್ರೀ|| ಎ. ಶೇಷಯಂಗಾರ್, ಎಂ.ಎ. ಮತ್ತು ಎ. ಮೈಲಾರಿರಾವ್, ಎಂ.ಎ., ಬಿ.ಟಿ.; ಪ್ರಕಾಶಕರು: ವಿದ್ಯಾಭ್ಯಾಸದ ಇಲಾಖೆ, ಮೈಸೂರು.

೩. ಮಳೆರಾಯ; (೪) ಸುಳ್ಳಿನ ಸೋಲು—ಲೇಖಕರು: ಶ್ರೀ|| ಬಿ. ಶ್ರೀ. ಪಾಂಡುರಂಗರಾವ್, ಶ್ರೀಮತಿ ಆರ್. ಕಲ್ಯಾಣಮ್ಮನವರ ಮುನ್ನುಡಿಯೊಡನೆ.

೫. ಮೊಗವೀರ—ತ್ರೈಮಾಸಿಕ ಪತ್ರಿಕೆ; ಮೊಗವೀರ ವ್ಯವಸ್ಥಾಪಕ ಮಂಡಳಿ, ಬೊಂಬಾಯಿ.

೬. ವಿದ್ಯೋದಯ—ಸಂಪುಟ. ೧, ಸಂಚಿಕೆ ೧. ಸಂಪಾದಕರು: ಎಸ್. ಮುಕುಂದ ರಾವ್, ದಕ್ಷಿಣಕನ್ನಡ.

೭. ಸಂದೇಶ (ಮೋಟರ ಕಾಂಗ್ರೆಸ್ ಸಂಚಿಕೆ)—

೮. ಮರಳಿ ಮಣ್ಣಿಗೆ (ಕಾದಂಬರಿ)—ಲೇಖಕರು: ಶ್ರೀ|| ಶಿವರಾಮಕಾರಂತರು, ಸು. ೬೦೦ ಪುಟಗಳಿವೆ ಬೆಲೆ, ರೂ. ೩-೮-೦; ಪ್ರಕಾಶಕರು: ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ.

೯. ಕೌಟಿಲ್ಯ—ಶ್ರೀ|| ಎಂ. ವಿ. ಕೃಷ್ಣರಾವ್, ಎಂ.ಎ., ಬಿ.ಟಿ.; ವಿ. ವಿ. ನಿಲಯದ ಪ್ರ. ಪುಸ್ತಕಮಾಲೆ.

೧೦. ತೆಲುಗು ಚಾಟುಪದ್ಯಗಳು—ಶ್ರೀ|| ಕೆ. ವೆಂಕಟರಾಮಪ್ಪ, ಎಂ.ಎ. ವಿ. ವಿ. ನಿಲಯದ ಪ್ರಚಾರ ಪುಸ್ತಕಮಾಲೆ—೮೨; ಬೆಲೆ, ೦-೩-೦.

---

# ವಸ್ತುಕೋಶ

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಉಪಾಧ್ಯಕ್ಷರಾದ ಶ್ರೀಮಾನ್ ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು ಇತ್ತೀಚಿನ "ಕನ್ನಡ ನುಡಿ" (೨-೧೦-೪೨)ಯಲ್ಲಿ "ಮೈಸೂರಿನಲ್ಲಿ ಕನ್ನಡದ ಬೆಳೆವಣಿಗೆ" ಎಂಬ ಒಂದು ಲೇಖನದಲ್ಲಿ ಮೈಸೂರು ಸರ್ಕಾರಕ್ಕೂ ಕನ್ನಡಕ್ಕೂ ಇರುವ ಸಂಬಂಧವನ್ನು ಕುರಿತು ಹಲವು ಮಾತುಗಳನ್ನಾಡಿದ್ದಾರೆ. ಅವುಗಳನ್ನು ಇಲ್ಲಿ ಉದ್ಧರಿಸಿದೆ.

ಕನ್ನಡದ ಬೆಳವಣಿಗೆ

ಶ್ರೀಯುತರು ಸರ್ಕಾರಕ್ಕೂ ಆಯಾ ನಾಡಿನ ಭಾಷೆಗೂ ಇರುವ ನಿಕಟ ಬಾಂಧವ್ಯ, ಹಕ್ಕು, ಹೊಣೆಗಳನ್ನು ಪ್ರಸ್ತಾಪಿಸುತ್ತ, ಐರ್ಲೆಂಡ್ ಸರ್ಕಾರದ ಬೆಂಬಲದಿಂದ ಐರಿಷ್ ಭಾಷೆ ಉದ್ಧಾರವಾಯಿತು; ರಷ್ಯಾ ದೇಶದಲ್ಲಿ ಸ್ವಾತಂತ್ರ್ಯ ಬಂದ ಮೇಲೆ ಹಲವಾರು ದೇಶಭಾಷೆಗಳು ಬೆಳೆದವು; ನಮ್ಮ ಕಣ್ಣಿದುರಿನಲ್ಲಿಯೇ ಹೈದರಾಬಾದಿನಲ್ಲಿ ನೈಜಾಂ ಸರ್ಕಾರದ ಆಶ್ರಯದಲ್ಲಿ ಉರ್ದುಭಾಷೆಗೆ ಪ್ರಬಲವಾದ ಉತ್ತೇಜನ ದೊರೆತಿದೆ; ಭಾಷಾಂತರಕ್ಕಾಗಿಯೇ ೨೫ ಲಕ್ಷ ರೂ. ಗಳನ್ನು ವಿನಿಯೋಗಿಸಿದ್ದಾರೆ! ಎಂಬುದಾಗಿ ಹೇಳಿ ಇದೇ ರೀತಿಯಾಗಿ ಮೈಸೂರು ಸರ್ಕಾರದ ಪೋಷಣೆಯಲ್ಲಿ ಕರ್ಣಾಟಕದ ದೇಶಭಾಷೆಯಾದ ಕನ್ನಡದ ಮುನ್ನಡೆ ಸಾಗಬೇಕೆಂದು ಸೂಚಿಸಿರುತ್ತಾರೆ.

"ಮೈಸೂರು ಸಂಸ್ಥಾನ ಕರ್ನಾಟಕದ ಹೃದಯ. ಅಲ್ಲಿ ನಡೆದ ಕಾರ್ಯಗಳು ಇಡಿಯ ಕರ್ನಾಟಕವನ್ನೇ ಆಕರ್ಷಿಸುತ್ತವೆ. ಮೈಸೂರು ಸರ್ಕಾರದ ಭಾಷೆ ಕನ್ನಡವಾಗಬೇಕು, ಮೈಸೂರು ವಿಶ್ವವಿದ್ಯಾನಿಲಯ ಕನ್ನಡಮಯವಾಗಬೇಕು, ನಮ್ಮ (ಕನ್ನಡಿಗರ) ಅರಮನೆ ಭಾಷೆ ಕನ್ನಡವಿರುವುದರಿಂದ ಸರ್ಕಾರದ ಭಾಷೆ ಕನ್ನಡವಾಗಲೆ ಬೇಕು."

". . . . ಹೈದರಾಬಾದಿನವರಂತೆ ಕನ್ನಡ 'ಭಾಷಾಂತರ ಸಂಘ'ವನ್ನು ಸ್ಥಾಪಿಸಿ ಪ್ರತಿವರುಷ ಆ ಸಂಘಕ್ಕೆ ಸರ್ಕಾರದವರು ಸಹಾಯಮಾಡಿದರೆ ಬೇಕಾದ ಗ್ರಂಥಗಳನ್ನು ಸಿದ್ಧಪಡಿಸಬಹುದು. ಕನ್ನಡದಲ್ಲಿ ಅಂತಹ ವಿದ್ವಾಂಸರು ಬೇಕಾದಷ್ಟು ಜನರಿರುತ್ತಾರೆ."

ಈ ಅಭಿಪ್ರಾಯಕ್ಕೆ ಎಲ್ಲರ ಸಮ್ಮತಿಯೂ ಉಂಟು. ಈಗಾಗಲೇ ಆಗಿರುವ ಕಾರ್ಯ ಇನ್ನೂ ಸಾಲದೆಂಬ ಶ್ರೀಯುತರ ಅಭಿಪ್ರಾಯವು ಕನ್ನಡದ ಅಭಿಮಾನಿಗಳೆಲ್ಲರ ಮನಸ್ಸಿನ ಪ್ರತಿಧ್ವನಿಯೇ ಆಗಿದೆ.

ಜ. ವ. ರಾ.

೪-೧೦-೧೯೪೨ ರಲ್ಲಿ ಮೈಸೂರು ನಗರದಲ್ಲಿ ಮಹಾರಾಜರವರ ಹೈಸ್ಕೂಲಿನಲ್ಲಿ ನೂತನ ವಿದ್ಯಾಸಮಿತಿಯ (New Educational Fellowship) ವಾರ್ಷಿಕ ಸಭೆ ನಡೆಯಿತು. ಅಂದಿನ ಕಾರ್ಯಕಲಾಪಗಳಲ್ಲಿ ಮುಖ್ಯವಾದುದು ಹೈಸ್ಕೂಲುಗಳಲ್ಲಿ ಈಗ ಜಾರಿಯಲ್ಲಿರುವ ಕನ್ನಡ ಮಾಧ್ಯಮ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂಬುದು. ಇದರ ಪರಿಶೀಲನೆಗಾಗಿ ಒಂದು ಉಪಸಮಿತಿ ಏರ್ಪಟ್ಟಿತು. ಇದನ್ನು ಕುರಿತು "ಕನ್ನಡ ನುಡಿ" (೯-೧೦-೪೨)ಯ ಸಂಪಾದಕರು ಬರೆದಿರುವ ಅಗ್ರಲೇಖನದಲ್ಲಿ ಹಲವು ಮಾತುಗಳನ್ನು ಎತ್ತಿ ಹೇಳಲು ಆಶಿಸುತ್ತೇವೆ.

**ಕನ್ನಡ ಮಾಧ್ಯಮ ಸಮಸ್ಯೆ**

"ಹಲವು ವರ್ಷಗಳ ಕಾಲ ಚರ್ಚೆ, ಪರಿಶೀಲನೆ ಆಗಿ ಹೈಸ್ಕೂಲುಗಳಲ್ಲಿ ಭಾಷೇತರ ವಿಷಯಗಳನ್ನು ಕನ್ನಡದಲ್ಲಿ ಕಲಿಸುವ ಪ್ರಯೋಗ ಮಾಡಬಹುದೆಂದು ಆಜ್ಞೆ ಹೊರಟಿತು. ಕೆಲವು ವರ್ಷಗಳಿಂದ ಸಂಸ್ಥಾನದ ಹಲವು ಶಾಲೆಗಳಲ್ಲಿ—ಕೆಲವು ಶಾಲೆಗಳಲ್ಲಿ ಒಂದೆರಡು ತರಗತಿಗಳಲ್ಲಿ, ಮತ್ತೆ ಕೆಲವು ಶಾಲೆಗಳಲ್ಲಿ ಎಲ್ಲಾ ತರಗತಿಗಳಲ್ಲಿ—ಪ್ರಯೋಗ ನಡೆಯುತ್ತಿದೆ. ಈ ಪ್ರಯೋಗ ಫಲಕಾರಿಯಾಗುತ್ತಿದೆ ಎಂದು ಹಲವರು ಅಭಿಪ್ರಾಯಪಡುತ್ತಿದ್ದಾರೆ, ಮತ್ತು ಪರಿಷತ್ತು ಹೊರಡಿಸಿದ "ಪ್ರಶ್ನಾವಳಿ"ಗೆ ಬಂದಿರುವ ಬಹು ಸಂಖ್ಯೆಯ ಉತ್ತರಗಳು ಈ ಅಭಿಪ್ರಾಯಗಳನ್ನು ಸಮರ್ಥಿಸಿ, ಹೈಸ್ಕೂಲುಗಳಲ್ಲಿ ಕನ್ನಡಕ್ಕೆ ಸ್ಥಿರವಾದ ಮುಖ್ಯಸ್ಥಾನವನ್ನು ಕೊಡಬೇಕೆಂದು ಬಯಸಿವೆ."

"ವಿಶ್ವವಿದ್ಯಾನಿಲಯದಲ್ಲಿಯೂ ಕನ್ನಡದ ಸ್ಥಾನ ಉತ್ತಮವಾಗಬೇಕೆಂದು ಹಲವು ಶಿಕ್ಷಣ ಶಾಸ್ತ್ರಜ್ಞರ ಅಭಿಮತವಾಗಿದೆ. ಇದಕ್ಕೆ ಹಾಸನದಲ್ಲಿ ನಡೆದ ಶಿಕ್ಷಣ ಸಮ್ಮೇಳನದ, ಮತ್ತು ಹೋದಸಲದ ಪ್ರಜಾಪ್ರತಿನಿಧಿ ಸಭೆಯ ನಿರ್ಣಯಗಳೇ ನಿದರ್ಶನ. ವಿಶ್ವವಿದ್ಯಾನಿಲಯವೆಲ್ಲ ಕನ್ನಡವಾಗುವ ಮುನ್ನ ಮೊದಲ ಮೆಟ್ಟಲಾಗಿ ಹೈಸ್ಕೂಲಿನಿಂದ ಇಂಟರ್‌ಮೀಡಿಯೆಟ್ ಮಟ್ಟದ ಪೂರ್ತ ಕನ್ನಡವೇ ಮುಖ್ಯ ಭಾಷೆಯಾಗಿ ಎಲ್ಲಾ ಜ್ಞಾನವಿಷಯಗಳನ್ನೂ ಕನ್ನಡದಲ್ಲೇ ಬೋಧಿಸುವಂತಾಗುವುದು ಸಾಧ್ಯವಾದರೆಯೆ ಕನ್ನಡದ ಸಾರಸತ್ವಗಳು ತುಂಬಿಕೊಂಡು, ಆ ಫಲವಾಗಿ ಜನರ ಜ್ಞಾನಾನುಭವಗಳೂ ಹೆಚ್ಚಲು ಸಾಧ್ಯವಾಗುವುದು."

ಈ ಅಭಿಪ್ರಾಯವನ್ನು ಯಾರೂ ವಿರೋಧಿಸಲಾರರು. ಇದೇ ಸಂದರ್ಭದಲ್ಲಿ "ಸಂಭಾವನೆ" ಎಂಬ ಗ್ರಂಥದಲ್ಲಿ ಶ್ರೀಮಾನ್ ಕೋಲಾರ ಸಂಪದ್ಗಿರಿರಾಯರು "ಕನ್ನಡನಾಡಿನ ಪ್ರೌಢಶಿಕ್ಷಣ ಕನ್ನಡದಲ್ಲಿ" ಎಂಬ ಲೇಖನದಲ್ಲಿ ಬರೆದಿರುವ ಹಲವು ವಿಚಾರಗಳ ಕಡೆಗೆ ಗಮನಕೊಡುವುದು ಮೇಲು; ಹಾಗೂ ಅಗತ್ಯ.

"ಈ ಹೊಸ ಕ್ರಮವು (ಕನ್ನಡ ಮಾಧ್ಯಮ) ಆರಂಭವಾದಾಗ ತೋರಿದ್ದ ಅಧೈರ್ಯವೂ ಸಂಕೋಚವೂ ಈಗ ಬಹುಮಟ್ಟಿಗೆ ದೂರವಾಗಿದೆ. ಈ ಕ್ರಮವನ್ನು ಕೇವಲ ಪ್ರಯೋಗವೆಂದು ಭಾವಿಸುತ್ತಿದ್ದವರು ಕೆಲವರು. ಇದು ಆಚರಣೆಗೆ ಬರಬೇಕಾದ ಸುಧಾರಣೆಯೆಂದು ಬಯಸಿದವರು ಕೆಲವರು. ಇದು ಒಂದು ಪ್ರಯೋಗ ಮಾತ್ರವಾದ್ದು, ಇದು ನಿಷ್ಫಲವಾಯಿತೆಂದು ನಿರ್ಧರವಾದರೆ ಇದನ್ನು ರದ್ದುಮಾಡ ಬೇಕು ಎಂಬ ಕುತೂಹಲವಾಗಲೀ, ಹವಣಿಕೆಯಾಗಲೀ, ಈಗ ಯಾರಲ್ಲಿಯೂ ಇರಲಾರದು. ಈ ಸುಧಾರಣೆಯು ಸಾಧುವೆಂದೂ ಅನುಸರಣೀಯವೆಂದೂ ಬಹು ಜನರ ಮತ . . . . ಈ ಸುಧಾರಣೆಯು ಇನ್ನೂ ಹೆಚ್ಚಿಗೆ ವ್ಯಾಪಿಸುವುದಕ್ಕೆ ಬೇರೆ ಯಾವ ಆತಂಕವೂ ಇರುವುದಿಲ್ಲ. ಪಠ್ಯಪುಸ್ತಕಗಳು ಸಿದ್ಧವಾಗಿವೆ. ವರ್ಷೇ ವರ್ಷೇ ನೂರಾರು ವಿದ್ಯಾರ್ಥಿಗಳು ಕನ್ನಡದಲ್ಲಿಯೇ ಪಾಠಗಳನ್ನು ಕಲಿತು ಕಾಲೇಜುಗಳಿಗೆ ಸೇರುತ್ತಿರುವರು. ಅಲ್ಲಿ ಇಂಗ್ಲೀಷು ಮೂಲಕ ವ್ಯಾಸಂಗಗಳನ್ನೂ ಮಾಡಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುತ್ತಿರುವರು."

ಈ ಮಾತುಗಳು ಹೈಸ್ಕೂಲಿನ ಕನ್ನಡ ಮಾಧ್ಯಮಕ್ಕೆ ಸಂಬಂಧಪಟ್ಟವು. ಶ್ರೀಯುತರು ಇನ್ನೂ ದೀರ್ಘವಾಗಿ ಪ್ರಸ್ತಾಪಿಸುತ್ತಾ, ಕನ್ನಡ ಮಾಧ್ಯಮವಾಗುವುದರಿಂದ ಕನ್ನಡನಾಡಿನ ಒಗ್ಗಟ್ಟು, ಸಂಸ್ಕೃತಿ, ತಾಯಿನುಡಿಯ ಪುರೋಭಿವೃದ್ಧಿ ಎಲ್ಲವೂ ಏಕಕಾಲದಲ್ಲಿ ಮುಂದುವರಿಯಲು ನೆರವಾಗುತ್ತದೆಂದು ಹೇಳಿದ್ದಾರೆ. ಆದ್ದರಿಂದ ದೇಶಭಾಷೆಯ ಪ್ರಾಧಾನ್ಯ ಕೇವಲ ವಿದ್ಯಾಭ್ಯಾಸಕ್ಕೆ ಮಾತ್ರ ಸೇರಿದುದಲ್ಲ; ಅದರ ಅಭಿವೃದ್ಧಿ ಇಡೀ ನಾಡಿನ ಬಾಳಿಗೇ ಸೇರಿದ್ದು.

"ದೇಶಭಾಷೆಯನ್ನು ಬೆಳಸಬೇಕಾದರೆ ಅದನ್ನು ಬದುಕಿನ ಎಲ್ಲ ವ್ಯಾಪಾರದ ಸಾಧನವಾಗಿ ಮಾಡಿಕೊಳ್ಳದೆ ವಿಧಿಯಿಲ್ಲ. ಹಾಗೆ ಭಾಷೆಯನ್ನು ಬೆಳಸಿ ಬಳಸುವವರೆಗೆ ಜನದ ಬೆಳವಣಿಗೆ ಕುಂಟುತ್ತಿರಬೇಕಾಗುವುದು. ಈ ಸತ್ಯವನ್ನು ಎಷ್ಟುಬೇಗ ಕನ್ನಡಿಗರು ಅರಿತು ಆಚರಣೆಗೆ ತಂದರೆ ಅಷ್ಟುಬೇಗ ದೇಶಕ್ಕೆ ಅಭ್ಯುದಯ."

ಆದ್ದರಿಂದ ನೂತನ ವಿದ್ಯಾಸಮಿತಿಯವರು ಕೈಗೊಂಡಿರುವ ಅಂಕಿ ಅಂಶಗಳ ಪರಿಶೀಲನೆಯೊಂದಿಗೆ ಕರ್ಣಾಟಕದ ಉದ್ಧಾರಕ್ಕೆ ಸಂಬಂಧಿಸಿರುವ ನುಡಿಯ ಏಳಿಗೆಯನ್ನೂ ಗಮನದಲ್ಲಿಟ್ಟುಕೊಳ್ಳಬೇಕೆಂದು ನಮ್ಮ ಪ್ರಾರ್ಥನೆ. ಇಂದಿನ ಪ್ರಯೋಗವೇ ಮುಂದೆ ನಮಗಾಗಿ ಕಾದಿರುವ ಸುಯೋಗದ ಬೀಜ.

ಜಿ. ವ. ರಾ.

೧೯೪೨-೪೩ನೆಯ ಸಾಲಿನ ಪದವೀಧರರ ಪೈಕಿ ಪದಕಗಳು ಮತ್ತು ಬಹುಮಾನ ಗಳನ್ನು ಪಡೆಯಲು ಅರ್ಹರಾದವರ ಹೆಸರುಗಳು.

## ೧. ಪದಕಗಳು

### ಎಂ.ಎ.

| ಪದಕಗಳ ಹೆಸರುಗಳು : | ಪಡೆದವರ ಹೆಸರುಗಳು : ಶ್ರೀಗಳಾದ |
|---|---|
| ೧. ಸರ್ ಹ್ಯೂ ಡೇಲಿ ಮೆಮೋರಿಯಲ್ ಪದಕ | ಎ. ಎನ್. ಸುಬ್ರಹ್ಮಣ್ಯಂ. |
| ೨. ಪಂಡಿತ ನವೀನಂ ರಾಮಾನುಜಾಚಾರ್ಯರ ಪದಕ | .... ಕೆ. ಸುಬ್ರಹ್ಮಣ್ಯಂ. |

### ಬಿ.ಎ. (ಆನರ್ಸ್)

| | |
|---|---|
| ೩. ಕೇಣಿ ಸಿದ್ಧಪ್ಪನವರ ಪದಕ | .... ಜಿ. ವರದರಾಜರಾವ್. |
| ೪. ಪಂಡಿತ ನವೀನಂ ರಾಮಾನುಜಾಚಾರ್ಯರ ಪದಕ | .... ಕೆ. ಕೃಷ್ಣಮೂರ್ತಿ. |
| ೫. ಮೊದಲನೆಯ ವೈಸ್-ಛಾನ್ಸಲರ್ ಎಚ್. ವಿ. ನಂಜುಂಡಯ್ಯನವರ ಪದಕ | .... ಎಸ್. ಎಂ. ಕೃಷ್ಣಮಾಚಾರ್. |
| ೬. ಭಾಭಾ ಮೆಮೋರಿಯಲ್ ಪದಕ | .... ಎಸ್. ನಾಗಪ್ಪ. |
| ೭. ಪೂರ್ಣ ಕೃಷ್ಣರಾಯರ ಪದಕ (ಇಂಗ್ಲಿಷ್) | ಸಿ. ಡಿ. ನರಸಿಂಹಯ್ಯ. |
| ೮. ಪೂರ್ಣ ಕೃಷ್ಣರಾಯರ ಪದಕ (ಸಂಸ್ಕೃತ) | ಕೆ. ಕೃಷ್ಣಮೂರ್ತಿ. |
| ೯. ಕ್ಯಾಂಡಿ ಪದಕ | .... ವಿ. ರಾಮಾಚಾರ್. |
| ೧೦. ಪ್ರಧಾನಶಿರೋಮಣಿ ಆನಂದರಾವ್, ಸಿ.ಐ.ಇ. ಅವರ ಪದಕ | .... ವಿ. ರಾಮಾಚಾರ್. |
| ೧೧. ಸರ್ ಎಂ. ಕಾಂತರಾಜಾ ಅರಸರವರ ಪದಕ | .... ಬಷೀರ್ ಅಹಮದ್ ಷರೀಫ್. |
| ೧೨. ಎಂ. ಹಿರಿಯಣ್ಣನವರ ಪದಕ | .... ಪಿ. ಪರಶುರಾಂ. |
| ೧೩. ಶ್ರೀ ಬಾಲಾಮಣಿಯವರ ಪದಕ | .... ಬಷೀರ್ ಅಹಮದ್ ಷರೀಫ್. |
| ೧೪. ಶ್ರೀಮದ್ಯುವರಾಜರವರ ಪದಕ | .... ಅಬ್ದುಲ್ ಖಾದರ್. |

### ಬಿ.ಎ.

| | |
|---|---|
| ೧೫. ಸರ್ ಪಿ. ಎನ್. ಕೃಷ್ಣಮೂರ್ತಿಯವರ ಪದಕ | .... ಎನ್. ಸುಬ್ರಹ್ಮಣ್ಯ. |

೧೬. ಅಲಮೇಲಮ್ಮಾಳ್ ಎಚ್. ರಾಮಾನುಜ
ಯ್ಯಂಗಾರ್ ಅವರ ಪದಕ .... ಕೆ. ಎನ್. ಶ್ರೀನಿವಾಸಮೂರ್ತಿ.
೧೭. ವಿಯರ್ ಮೆಮೋರಿಯಲ್ ಪದಕ .... ಭಾಸ್ಕರ್ ಜೇಸುಪ್ರಿಯ.
೧೮. ಸಕಲೇಶಪುರದ ಷಾಪು ಸಿದ್ದೇಗೌಡರ ಪದಕ ಕೆ. ಎನ್. ಶ್ರೀನಿವಾಸಮೂರ್ತಿ.
೧೯. ಶ್ರೀ ಲಕ್ಷ್ಮಮ್ಮನವರ ಪದಕ .... ಬಿ. ಎನ್. ಲಕ್ಷ್ಮಿ.

## ಎಂ.ಎಸ್‌ಸಿ.

೨೦. ಪೂರ್ಣ ಕೃಷ್ಣರಾಯರ ಪದಕ .... (i) ಪಿ. ಜಗನ್ನಾಥ್.
(ii) ಎಂ. ಎ. ಶ್ರೀರಂಗರಾಜನ್.
೨೧. ಪೂರ್ಣ ಕೃಷ್ಣರಾಯರ ಪದಕ .... ಜಿ. ಎನ್. ಸುಬ್ಬರಾವ್.

## ಬಿ.ಎಸ್‌ಸಿ. (ಆನರ್ಸ್)

೨೨. ಹನುಮಪ್ಪನವರ ಪದಕ .... ಎಸ್. ವಿ. ಪಾರ್ಥಸಾರಥಿ
ಐಯಂಗಾರ್.
೨೩. ಧರ್ಮಪ್ರವರ್ತ ಅಂಬಿಲ್ ಎಸ್. ರಂಗ
ಸ್ವಾಮಿ ಅಯ್ಯಂಗಾರ್ ಪದಕ .... ಕೆ. ನಾಗರಾಜರಾವ್
೨೪. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ
ಪದಕ .... ರಾಜೇಶ್ವರಿ.

## ಬಿ.ಎಸ್‌ಸಿ.

೨೫. ಸರ್ ಶೇಷಾದ್ರಿಯವರ ಪದಕ .... ಎಂ. ರುದ್ರಪ್ಪ.
೨೬. ಎಚ್. ರಾಮಾನುಜಯ್ಯಂಗಾರ್ ಅವರ
ಪದಕ .... ಡಿ. ಎಲ್. ಸುಬ್ರಹ್ಮಣ್ಯಂ.
೨೭. ಶ್ರೀ ಲಕ್ಷ್ಮೀದೇವಮ್ಮನವರ ಪದಕ .... ಎನ್. ಎಸ್. ವೀರರಾಘವನ್.
೨೮. ಬಿ. ಕೆ. ಶ್ರೀನಿವಾಸಯ್ಯಂಗಾರ್ ಮೆಮೋ
ರಿಯಲ್ ಪದಕ .... ಡಿ. ಎಲ್. ಸುಬ್ರಹ್ಮಣ್ಯಂ.
೨೯. ಷಾ. ಚುರ್ಮನ್ಮಾಲ್ ದುಂಗಾಜಿ ಅವರ
ಪದಕ .... ಎಂ. ರುದ್ರಪ್ಪ.

## ಬಿ.ಇ.

೩೦. ಬಿ. ವಿ. ಕೃಷ್ಣಯ್ಯಂಗಾರ್ಯರ ಪದಕ .... ಎಚ್. ಕೆ. ಪಂಡಿತಾರಾಧ್ಯ.
೩೧. ಬಿ. ಬಿ. ಗರುಡಾಚಾರ್ಯರ ಪದಕ .... ಎಚ್. ಕೆ. ಪಂಡಿತಾರಾಧ್ಯ.

### ಎಂ. ಬಿ., ಬಿ. ಎಸ್.

೩೨. ಆರ್ಮುಗಂ ಪದಕ .... ಬಿ. ರಾಘವನ್.
೩೩. ಬೇಲಿ ವೆಂಕೋಬರಾವ್ ಪದಕ .... ಬಿ. ರಾಘವನ್.
೩೪. ಟಿ. ಆರ್. ಎ. ತಂಬೂಚೆಟ್ಟಿ ಪದಕ .... ಕೆ. ಕೃಷ್ಣಮೂರ್ತಿರಾವ್.
೩೫. ಎ. ಆರ್. ಸೀತಮ್ಮನವರ ಪದಕ .... ಬಿ. ಎಸ್. ವೆಂಕಟಶಾಮಣ್ಣ.

### ಕನ್ನಡ ಕವಿತೆ

೩೬. ರಜತಮಹೋತ್ಸವದ ಕನ್ನಡ ಪದಕ .... ಜಿ. ವರದರಾಜರಾವ್.
೩೭. ರಜತಮಹೋತ್ಸವದ ಕನ್ನಡ ಪದಕ
(೧೯೪೧) ಎಂ. ಗೋಪಾಲಕೃಷ್ಣ ಅಡಿಗ.

## ೨. ಬಹುಮಾನಗಳು

### ಎಂ.ಎಸ್‌ಸಿ.

೧. ಎಂ. ಟಿ. ನಾರಣಯ್ಯಂಗಾರ್ಯರವರ ಬಹುಮಾನ .... ಎಂ. ಎ. ಶ್ರೀರಂಗನಾರಾಯಣ.

### ಬಿ. ಎ. (ಆನರ್ಸ್)

೨. ಎನ್. ಎಸ್. ಸುಬ್ಬರಾಯರ ಬಹುಮಾನ ಬಷೀರ್ ಅಹಮದ್ ಷರೀಫ್.

### ಬಿ. ಎ.

೩. ಎಂ. ವೆಂಕಟಕೃಷ್ಣಯ್ಯನವರ ಬಹುಮಾನ ಕೆ. ಎನ್. ಶ್ರೀನಿವಾಸಮೂರ್ತಿ.
೪. ಅನ್ನಪೂರ್ಣಮ್ಮನವರ ಬಹುಮಾನ .... ಎಂ. ಅನುಸೂಯ.
೫. ಟಿ. ಆನಂದರಾವ್ ಸುಂದರಾಬಾಯಿ ಅವರ ಬಹುಮಾನ .... ಕೆ. ವಿ. ವೈದೇಹಿ.
೬. ಪಾಲಮಂಡ ಅಕ್ಕಯ್ಯಮ್ಮನವರ ಬಹುಮಾನ .... ಎಂ. ಅನುಸೂಯ.
೭. ಭಾಸ್ಕರಮ್ಮಾಳ್ ಅವರ ಬಹುಮಾನ .... ಎನ್. ಎಸ್. ವಿಶ್ವೇಶ್ವರಯ್ಯ
೮. ರಂಗೇಗೌಡರ ಬಹುಮಾನ .... ಕಾಶಿ ಪುಟ್ಟಸೋಮಾರಾಧ್ಯ

## ಬಿ. ಎಸ್‌ಸಿ. (ಆನರ್ಸ್)

೯. ವಾಟರ್ಸ್ ಮೆಮೋರಿಯಲ್ ಬಹುಮಾನ ರಾಜೇಶ್ವರಿ.
೧೦. ಪ್ರೊಫೆಸರ್ ಎಂ. ಜಿ. ಶ್ರೀನಿವಾಸರಾಯರ ಆರ್ಗ್ಯಾನಿಕ್ ಕೆಮಿಸ್ಟ್ರಿ ಬಹುಮಾನ ಎಚ್. ಎಸ್. ವೆಂಕಟರಮಣ.
೧೧. ಮೈಸೂರು ಸರ್ಕಾರದ ಭೌತಶಾಸ್ತ್ರ ಬಹುಮಾನ .... ಸಿ. ಕೆ. ರಾಮನಾಥರಾವ್.
೧೨. ಮೈಸೂರು ಸರ್ಕಾರದ ರಸಾಯನಶಾಸ್ತ್ರದ ಬಹುಮಾನ .... ಎಚ್. ಎಸ್. ವೆಂಕಟರಮಣ.

## ಬಿ. ಎಸ್‌ಸಿ.

೧೩. ಟೇಟ್ ಮೆಮೋರಿಯಲ್ ಫಂಡ್ ಬಹುಮಾನ .... ಎನ್. ನರಸಿಂಹರಾವ್.
೧೪. ಸೆಂಟ್ರಲ್ ಕಾಲೇಜಿನ ವಜ್ರಮಹೋತ್ಸವದ ಬಹುಮಾನ .... ಡಿ. ಎಲ್. ಸುಬ್ರಹ್ಮಣ್ಯಂ

## ಬಿ. ಟಿ.

೧೫. ಭಾಭಾ ಮೆಮೋರಿಯಲ್ ಬಹುಮಾನ .... ಡಿ. ವಿಶ್ವೇಶ್ವರಯ್ಯ.
೧೬. ಭಾಭಾ ಮೆಮೋರಿಯಲ್ ಬಹುಮಾನ .... ಡಿ. ವಿಶ್ವೇಶ್ವರಯ್ಯ.

## ಬಿ. ಇ.

೧೭. ವಿ. ರಂಗಸ್ವಾಮಿ ಅಯ್ಯಂಗಾರ್ಯರ ಬಹುಮಾನ .... (i) ಎಂ. ಕೇಶವಯ್ಯಂಗಾರ್. (ii) ಸಿ. ಕೆ. ಶ್ರೀಕಂಠರಾವ್.

## ಎಂ. ಬಿ., ಬಿ. ಎಸ್.

೧೮. ಮೈಸೂರು ಫ್ರೀಮೇಸನ್ಸ್ ಲಾಡ್ಜ್ ಸುವರ್ಣಮಹೋತ್ಸವ ಬಹುಮಾನ .... (i) ಬಿ. ರಾಘವನ್. (ii) ಕೆ. ಕೃಷ್ಣಮೂರ್ತಿರಾವ್.

## ಕನ್ನಡ ಪ್ರಬಂಧ

೧೯. ಹೊನ್ನಶೆಟ್ಟಿಯವರ ಬಹುಮಾನ .... ಜಿ. ವರದರಾಜರಾವ್.

ಈ ಪದಕ, ಬಹುಮಾನಗಳನ್ನು ಪಡೆದ ಮಿತ್ರರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

---

# ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಬೆಲೆ: ಕ್ಯಾಲಿಕೊ ರೂ. ೧—೪—೦, ಸಾದಾ ೧೨ ಆಣೆ.

ಪ್ರಧಾನಸಂಪಾದಕರು : ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

೧. ಹರಿಶ್ಚಂದ್ರಕಾವ್ಯ ಸಂಗ್ರಹ (ತೃತೀಯ ಮುದ್ರಣ)—ಸಂಪಾದಕರು: ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಮತ್ತು ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೨. ಕರ್ಣಾಟಕ ಕಾದಂಬರೀ ಸಂಗ್ರಹ—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

೩. ಪ್ರಭುಲಿಂಗಲೀಲೆಯ ಸಂಗ್ರಹ (ಸಚಿತ್ರ)—ಸಂಪಾದಕರು : ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಮತ್ತು ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

೪. ಸಾಕ್ರೆಟೀಸನ ಕೊನೆಯ ದಿನಗಳು(ಸಚಿತ್ರ)—ಅನುವಾದಕರು: ಎ. ಎನ್. ಮೂರ್ತಿರಾವ್, ಎಂ.ಎ.

೫. ಶ್ರೀರಾಮಕೃಷ್ಣ ಪರಮಹಂಸ—ಲೇಖಕರು : ಕೆ. ವಿ. ಪುಟ್ಟಪ್ಪ, ಎಂ.ಎ.

೬. ರವೀಂದ್ರನಾಥ ಠಾಕೂರರು (ಸಚಿತ್ರ)—ಲೇಖಕರು : ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ.

೭. ಆರೋಗ್ಯ ಅದರ ಜ್ಞಾನ ಮತ್ತು ಸಾಧನ (ಸಚಿತ್ರ)—ಲೇಖಕರು: ಜಿ. ಎ. ಈಶ್ವರ ಮೂರ್ತಿ, ಬಿ.ಎ., ಎಲ್.ಎಂ.ಎಸ್., ಬಿ.ಎಸ್.ಎಸ್‌ಸಿ.

೮. ಪಂಪರಾಮಾಯಣ ಸಂಗ್ರಹ—ಸಂಪಾದಕರು : ಆಸ್ಥಾನ ಮಹಾವಿದ್ವಾನ್ ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ ಮತ್ತು ಡಿ. ಎಲ್. ನರಸಿಂಹಾಚಾರ್, ಎಂ.ಎ.

೯. ಹಣ ಪ್ರಪಂಚ—ಲೇಖಕರು : ವಿ. ಸೀತಾರಾಮಯ್ಯ, ಎಂ.ಎ.

೧೦. ಸಂಸ್ಕೃತ ನಾಟಕ—ಲೇಖಕರು : ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೧೧. ಜೀವವಿಜ್ಞಾನ—ಲೇಖಕರು : ಬಿ. ವೆಂಕಟನಾರಾಯಣಪ್ಪ, ಎಂ.ಎ.

೧೨. ಹಿಂದೂದರ್ಶನಸಾರ—ಲೇಖಕರು : ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು.

೧೩. ರಾಜನೀತಿ—ಲೇಖಕರು : ಎಚ್. ಕೃಷ್ಣರಾವ್, ಎಂ.ಎ.

೧೪. ಹದಿಬದೆಯ ಧರ್ಮ—ಸಂಪಾದಕಿಯರು: ಡಿ. ಚಂಪಾಬಾಯಿ, ಎಂ.ಎ.

೧೫. ಪುರಾಣನಾಮ ಚೂಡಾಮಣಿ—ಲೇಖಕರು: ಬೆನಗಲ್ ರಾಮರಾವ್, ಎಂ.ಎ., ಎಲ್ ಎಲ್.ಬಿ., ಮತ್ತು ಪಾಸ್ಯಂ ಸುಂದರಶಾಸ್ತ್ರಿ, ಬೆಲೆ, ರೂ.೩-೪-೦

೧೬. ಯಶೋಧರ ಚರಿತ್ರೆಯ ಸಂಗ್ರಹ—ಸಂಪಾದಕರು: ಕೆ. ವಿ. ರಾಘವಾಚಾರ್, ಎಂ.ಎ., ಬಿ.ಟಿ.

೧೭. ಗ್ರೀಕರ ತತ್ವಶಾಸ್ತ್ರಸಾರ ಸಂಗ್ರಹ—ಲೇಖಕರು: ಕೆ. ಆರ್. ಶ್ರೀನಿವಾಸ ಅಯ್ಯಂಗಾರ್, ಎಂ.ಎ.; ಬೆಲೆ, ಸಾದಾ ರೂ. ೧—೦—೦.

೧೮. ಹಿಂದೂ ದೇಶದ ಭೂಚರಿತ್ರೆ—ಲೇಖಕರು: ಟಿ. ನಾಗಪ್ಪ, ಎಂ.ಎಸ್‌ಸಿ.

೧೯. ವಚನಧರ್ಮಸಾರ—ಲೇಖಕರು: ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

ಕ್ಯೂರೇಟರ್,
ಓರಿಯೆಂಟಲ್ ಲೈಬ್ರರಿ, ಮೈಸೂರು.

---

## ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ

೧. ಖಗೋಳಶಾಸ್ತ್ರಪ್ರವೇಶ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು—ಜಿ. ಎಸ್. ಕೃಷ್ಣಮೂರ್ತಿ, ಎಂ.ಎ.
೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೧೦. ಪಂಪ—ಟಿ. ಎನ್. ಶ್ರೀಕಂಠಯ್ಯ, ಎಂ.ಎ.
೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧೩. ಮದುವೆಯ ಇತಿಹಾಸ—ಎನ್. ಕಸ್ತೂರಿ, ಎಂ.ಎ., ಬಿ.ಎಲ್.
೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕನ್ನಡ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.
೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ.
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್, ಎಂ.ಎ.

೨೦. ಕಣ್ಣು ಮತ್ತು ಅದರ ರಕ್ಷಣೆ*—ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೨೧. ಸಾರ್ವಜನಿಕ ವೆಚ್ಚ*—ಎಂ. ಎಚ್. ಗೋಪಾಲ್, ಎಂ.ಎ., ಪಿಎಚ್.ಡಿ.
೨೨. ಶಿಶುವಿಹಾರಗಳು*—ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.
೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರಿ, ಎಂ.ಎ.
೨೪. ವಿಡಂಬನ—ಎಸ್. ವಿ ರಂಗಣ್ಣ, ಎಂ.ಎ.
೨೫. ಎಲ್ಲೋರ ಮತ್ತು ಅಜಂತಾ—ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್.
೨೬. ಸಾರಜನಕದ ಮಹತ್ವ—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೨೭. ಭಾಸ—ಎಚ್. ಎಲ್. ಹರಿಯಪ್ಪ, ಎಂ.ಎ.
೨೮. ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ, ಎಂ.ಎ.
೨೯. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.
೩೦. ರಕ್ತ—ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೩೧. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್, ಎಂ.ಎ.
೩೨. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.
೩೩. ಗಣಿತಶಾಸ್ತ್ರದ ಸ್ವರೂಪ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೩೪. ಋಗ್ವೇದ—ಎಂ. ಎ. ಕೃಷ್ಣಸ್ವಾಮಿ, ಎಂ.ಎ.
೩೫. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ, ಎಂ.ಎ.
೩೬. ಆಳ್ವಾರುಗಳು—ಎಂ. ಯಾಮುನಾಚಾರ್ಯ, ಎಂ.ಎ.
೩೭. ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳಸಿದ ರಾಜರು—
ವಿ. ರಾಘವೇಂದ್ರರಾವ್, ಎಂ.ಎ., ಬಿ.ಟಿ.
೩೮. ಸುಭಾಷಿತ ಸಂಗ್ರಹಗಳು—ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರೀ, ಎಂ.ಎ.
೩೯. ಮಕ್ಕಳ ಭಾವಜೀವನ—ಬಿ. ಕುಪ್ಪುಸ್ವಾಮಿ ನಾಯಿಡು, ಎಂ.ಎ.
೪೦. ಸಹಕಾರ—ಎಸ್. ಗೋಪಾಲಸ್ವಾಮಿ, ಎಂ.ಎ.
೪೧. ಸಯಸೇನ—ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.
೪೨. ಕೌಟಿಲ್ಯ—ಎಂ. ವಿ. ಕೃಷ್ಣರಾವ್, ಎಂ.ಎ., ಬಿ.ಟಿ.
೪೩. ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ, ಎಂ.ಎ.
೪೪. ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾವ್, ಎಂ.ಎ.

೧೯೪೨ನೆಯ ಜುಲೈನಿಂದ ಮುಂದಕ್ಕೆ ಅಚ್ಚಾಗುವ ಪುಸ್ತಕಗಳ ಸಾಧಾರಣ ಪ್ರತಿ ೩ ಆಣೆ, ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೧—೪—೦; ಉತ್ತಮ ಪ್ರತಿ ೪ ಆಣೆ, ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೨—೦—೦.

ಸಂಪಾದಕ,
ಪ್ರಚಾರಕ ಪುಸ್ತಕಮಾಲೆ,
ಯೂನಿವರ್ಸಿಟಿ ಆಫೀಸ್, ಮೈಸೂರು.

---

* ಈ ಪುಸ್ತಕಗಳು ಮುಗಿದುಹೋಗಿವೆ

ಎಮ್ಮ ಮಯ್ದುನ ವಿಷ್ಣುಭಟ್ಟಸುಮನೊಡಗೊಂಡು
ಸುಮ್ಮಾನದಿಂ ಪೋಗಿ ಮಿಗೆಯೊಚ್ಚತಂಗೊಂಡು |[1]
ಪಲವು ವರುಷಮನಿರ್ದು ತಿರುಗಿ ಬರುತಿರ[2]ಲಂ[3]ದು
ಸೆ[4]ಲೆ[4]ವಟ್ಟಣ[4]ಕ್ಕೆ ಬರೆ[4] ನಡುವಿರುಳು ನಡೆತಂದು |
ಊರ ಹೊಱಗಣ ಮಸಣವಟ್ಟಿಗೆಯೊಳಿರ[5]ಲಂದು[5]
ಹಾರೈಸುತೆಮ್ಮ ಮಯ್ದುನನೊಲ್ದು [6]ನಗುತಂದು[6] |
ಏನಿ ಶ್ಮಶಾನ[7]ಶಯನರೆ ಎಂದು ಕರೆದಂದು[7]
ತಾನಾ[8]ಯ್ತು ಬಳಿಕವಾ ಪೆಸರೆಮಗೆ[8] ಸಲೆ ಸಂದು |
ಈ ವೂರೊಳೆಮ್ಮ ವೃತ್ತಿಯ ಸ್ಥಳಂ [9]ಹೊಱಗೆ[9]ಯುಡೆ
ದೇವದಾ[10]ಯಕ್ಕಾಗಿ[10] ಕೊಟ್ಟ[11]ರೋ ಅಱಿಯೆ[11]ಪದೆ |
　　ಎಂದು ತಮ್ಮಯ [12]ಕುಳಸ್ಥಳ[12]ಗಳಂ ಪೇಳುತಿರೆ
ಅಂದಾ ಕುಮಾರಂಗೆ ಕೋಪ[13]ವುಬ್ಬರಿ[13]ಸುತಿರೆ |
ನಿಮ್ಮಯ ವಿಚಾರವಂತಿರ್ಕೆ ಈ ಪತ್ರಮಂ
ಎಮ್ಮ ಮುಂದೋದಿಸಿರೆ [14]ಅಯ್ಯ[14]ನ ಕುಶಾಸ್ತ್ರಮಂ |
ಎನೆ ತೋಱುತೋಱು ಪ್ರಮಾಣಪತ್ರವನೆಂದು
ಅನುನಯದೊಳೀಸಿಕೊಂಡಿದು ಚೋದ್ಯವೆಂದಂದು |

---

[1] (ಜ) ದಲ್ಲಿ ಇದರ ಮುಂದೆ, 'ಹದಿನಾಱು ಹರೆಯದೊಳಲ್ಲಿ ಪೊಱಮಟ್ಟು' ಎಂದು ೪೯ ನೆಯ ಪಂಕ್ತಿಯ ಭಾಗ ಪುನರುಕ್ತವಾಗಿದೆ. [2] ಲೊಂ (ಜ). [3] ಲ (ಗ), ರೆ (ಚ). [4] ಕೆ ಬಂದು (ಕ). [5] ಲಲ್ಲಿ (ಖಗ), ಲ್ಕಲ್ಲಿ (ಚ). [6] ನಡೆತಂದು (ಕ), ನಗುತಲ್ಲಿ (ಖಗಚ). [7] ಭಟ್ಟರೆ ಎ<ಯ>ನಲ್ಕಂದಿಂದ (ಖಗ), ಶಯನರೆ ಎನಲ್ಕರದಂದು (ಚ). [8] ದುಹೆನಗೆ ಬಳಿಕಾ ಪೆಸರು (ಕ), ಯಿತು ಬಳಿವೇಸರು ಎಮಗೆ ಮಿಗೆ (ಖ), ಯಿತು ಬಳಿಕ ಪೆಸರೆಮಗೆ (ಗ), ಯ್ತು ಬಳಿಕ ಪೆಸರೆಮಗೆ ಮಿಗೆ (ಚ). [9] ಬೇಱೆ (ಜ). [10] ನಕ್ಕಾಗಿ (ಕಗ), ನಕೆ (ಜ). [11] ನಾವರಿಯೆ (ಕ), ರೋ ಅಟ್ಟಿ (ಖ), ರೊವರಿಯ (ಗ), ರೋವಱಿಯೆ (ಚ), ರೊಯೇನೊ ಆಱಿಯೆ (ಜ). [12] ಸ್ಥಳಕುಳಂ (ಖಗಚ). [13] ಉದ್ಭವಿ (ಖ). [14] ಆಯ (ಖ), ಯಿಾಯಯ್ಯ (ಗ), ಯಯ್ಯ (ಚ).

ಓದೆಲವೊ ಗಣಕ [1]ಓದೆಂದೆಸಲು ಕೈಕೊಂಡು[1]
ಓದಲು[2]ದ್ಯತ[2]ನಾ[3]ಗುತಾ[3] ಪತ್ರಮಂ ಕಂಡು।
ಕಣ್ಣ ನೀರ್ [4]ಸುರಿ[4]ಯೆ ಸೆರೆ ಬಿಗಿಯೆ ಬಿಕ್ಕುತ್ತಳುತೆ
ಅಣ್ಣ ಅಯ್ಯಾ ಅಪ್ಪ [5]ಎಸುತೊಱಲುತಂತಳುತೆ[5]।
ನಿಮ್ಮ ಲಿಖಿತವನಿಂದು ಕಾಣಿಸಿದಿರೇ ಎಸುತೆ
ನಿಮ್ಮ [6]ಪ[6]ರಿಯಪ್ಪ ಗಣಕರ್ ಪುಟ್ಟುವರೆ ಎಸುತೆ।
ಇರೆ ನಂಬಿಯುಂ ಸಭೆಯುಮಾ ವೃದ್ಧನಂ ನೋಡಿ
ಪರಿ ಹೊಸತು [7]ಱ[7]ವೃದ್ಧನಲ್ಲೆನುತ್ತಂ ನೋಡಿ।
ಎಂತಕ್ಕೆ ಗಣಕನಂ ಸಂತೈ[8]ಸಿ ಓದಿಸಲು[8]
ಅಂತಂತೆ ಓದಿದಂ ಸಭೆ ಕೌತುಕಂಬಡಲು।
ಅಲ್ಲಿಯ ಮಹಾವೃದ್ಧರೆಲ್ಲರಂ ಪೆಸರ್ಗೊಂಡು
ಅಲ್ಲಿಯೆ ಬ[9]ರ್ದುಂಕಿರ್ದ ಕೆಲರಂ[9] ಪೆಸರ್ಗೊಂಡು।
[10]ಓದುತಿರೆ ತೋಱೆಂದು ಒಪ್ಪವಂ ನೋಡುತಿರೆ[10]
ಓದಲಾ[11]ಱದೆ[11] ತಮ್ಮ ಪಿರಿಯರಂ ನೆನೆವು[12]ತಿರೆ[12]।
ಅವರೆಲ್ಲ[13]ಳುತ್ತಿರಲಿದೆಲ್ಲಂ[13] ಕೃ[14]ತಕವೆಂ[14]ದು
ತವಕದಿಂ ನಂಬಿಯಣ್ಣಂ ಕೋಪಿಸು[15]ತ್ತಂ[15]ದು।
ನಿಮ್ಮ ಜೊತ್ತೆನ್ನನೇನಂ ಮಾಡಲಾರ್ಪು[16]ದ[16]ದು

1 ಓದೆನಲ್ ಕೈಕೊಂಡು (ಕ), ಪೋದೆಂದು ಕಯೊಳು ಕೊಂಡು (ಜ). 2 ದ್ಯುಕ್ತ (ಖಗ). 3 ದನಾ (ಕ). 4 ಕಱೆ (ಖ). 5 ಎಂದು ಪೊದಱುತ್ತಳುತ್ತ (ಖ), ಯನುತ ಪೊರಲುತ್ತಳುತ್ತ (ಗ), ಯೆನತ ಪೊಱಲುತವಳುತ (ಚ). 6 ಸ (ಜ). 7 ಈ (ಕ). 8 ಸುತೊದ್ದೆನಲು (ಖ), ಸಿತ್ತೊದೆನಲ್ (ಗ), ಸುತೋದೆನಲು (ಚ). 9 ದುಂಕಿದರ್ ಕೆಲರಂ (ಕ), ಡುಕಿರ್ದ ಕೆಲಬರಂ (ಖಗ), ದುಂಕಿರ್ದ . . . (ಚ), ಬರ್ದುಕಿರ್ದರೆಲ್ಲರ (ಜ). 10 - - - ತೋಱುತಿರಲೊಪ್ಪ < ಪ್ಪ >ವಂ ನೋಡುತ್ತ (ಖಗ), ಓದುತ್ತ ತೋಱುತ್ತಪ್ಪೊಪ್ಪಮಂ ನೋಡುತ್ತ (ಚ). 11 ತಮ್ಮ ಸಭೆ (ಖ), ಸಭೆ (ಗ). 12 ತ್ತ (ಖಗಚ). 13 ವಳುತಲಿರಲೆಲ್ಲ (ಕ), ರಳುತಿರ - - - (ಖ), ನುತ್ತಿರ - - - (ಗ), ಳುತ್ತಮಿರಲೆಲ್ಲ (ಚ). 14 ತ್ರಿಮವೆಂ (ಕ), ತಕವ್ರುಯೆಂ (ಚ). 15 ತೆ ಅಂ (ಕ), ತ್ತ ಬಂ (ಖ), ತ ಬಂ (ಗಚ). 16 ದಿ (ಚ).

ನಿಮ್ಮ ವಶವೇ ಎನ್ನನಾಳ್ಮಾಡಿ ಕೊಂಬು[1]ದ[1]ದು|
ಎಂದು ಕೋಪಿ[2]ಸುತೆದ್ದು ಸೆಳೆದು ಸ[2]ಬ್ಬಿಸೆ ಸೀಳೆ
ಸಂದಣಿಸಿ ಶತಚೂರ್ಣವಾಗಿ ನೆಲದೊಳು ಬೀಳೆ|
ಹೋಗ[3]ದೆಲೆ[3] ಮಗನೆ ಇದು ಪಡಿಪತ್ರವೆಂದೆನುತೆ
ಆಗಳೇ ಬುದ್ಧಿಗೊಟ್ಟಳು ತಮ್ಮ ಸತಿಯೆನುತೆ|
ತಮ್ಮ[4]ರಸಿ[4]ಯರಸಲ್ಲಿ ಪೊಗಳುತುಂ [5]ಪಾಡು[5]ತುಂ
ತಮ್ಮ ಪತ್ರದ ಚೂರ್ಣ[6]ಮೆಲ್ಲಮುಮನು[6]ಡುಗುತುಂ|
ಇದು ಪತ್ರವೆ[7]ಲ್ಲಲ್ಲ[7] ಮೂಲಪತ್ರಂ ಬೇಱೆ
ಅದೆ ಶಿವಾಲಯದೊಳಗೆ ತಮ್ಮರಸಿಯರು ನೀಱೆ|
ಬಿಟ್ಟಿತ್ತಟ್ಟಳೆಂದೆನುತೆ ಶಿವದಿಡುತೆ ದಡದಡಿಸಿ
ಸುತ್ತಿಟ್ಟುಕೊಳುತಂ[8]ಗಮಂ[8] ಬಱಿದೆ ಸಡಗರಿಸಿ|
ನುಡಿಯಲ್ಕೆ ನಂಬಿಯಣ್ಣಂ ನೋಡಿ ಪೊಸತೆನುತೆ
ನಡೆ ನಿನ್ನ ಮೂಲಪತ್ರವನೆನಗೆ ತೋಱೆನುತೆ|
ಇರೆ ತೋರ್ಪೆನೆನ್ನೊಡನೆ ಬಾ[9]ರಾ[9] ಮಗನೆ ಎಂದು
ಹರನಲ್ಲಿ ವೃದ್ಧನಂತೊಪ್ಪಿ ನಡೆಗೊಳಲಂದು|
ನಡೆತಂದ[10]ನಲ್ಲಿ[10] ಕಾಲ್ನಡೆ[11]ಯಲ್ಲಿ[11] ಸೌಂದರಂ
[12]ನಡೆತಂದನೆಂತಪ್ಪುದೋ ಎನುತೆ ಸೌಂದರಂ[12]|
ಹಿಂ[13]ದುಗೊಂಡೆಯ್ತು[13]ರುತೆ ಬೆಬ್ಬಳಿಸಿ ನೋಡುತುಂ
ಹಿಂ[14]ದೆಲ್ಲವಂ[14] ಮಱೆದು ಚಿಂತೆಯೊಳಗಾಳುತುಂ|

---

[1] (ಖ) ದಲ್ಲಿಲ್ಲ ; ದಿ (ಗಚ). [2] ಸಿ ಸೆಳದುಕೊಂಡು ಪತ್ರವ (ಖಗ). [3] ದಿದು (ಜ).
[4] ಸತಿ (ಖಗ). [5] ಹುಡುಕು (ಖಗ). [6] ಮುಮನೆಲ್ಲ ಉ<ವು>(ಖಗ), ವೆಲ್ಲವಂನು(ಚ).
[7] ಹುದಹುದು (ಚ). [8] ಮನಂ (ಖಗಚ). [9] ರ (ಖಗಜ), ರೆಲೆ (ಚ). [10] ನಂದು (ಜ).
[11] ಯೊಳಗೆ (ಖಗಚ). [12] - - - ಯೆನುತ ಸೌಂದರನಂದು (ಕ), ನಡೆತಂದನೇನಪ್ಪುದೋ
ಯನುತ - - - (ಗ), ನಡೆತರುತ್ತೆಂತಪ್ಪುದೋ ಯೆನುತ್ತುಂ ಕರಂ (ಜ); ಈ ಪಂಕ್ತಿ (ಖ) ದಲ್ಲಿಲ್ಲ.
[13] ದೆ - - - (ಕಜ), ದುಹಿಂದನೆ ಬ (ಖಚ), ದುಹಿಂದಕೆ ಬ (ಗ). [14] ದನೆಲ್ಲಂ (ಗ).

ಬರೆ ವೃದ್ಧಮಾಹೇಶ್ವರಂ ಶಿವಾಲಯದೊಳಗೆ
ಕೆರಹುಗಳೆಯದೆ ಪುಗಲು ಸೌಂದರಂ ಮನದೊಳಗೆ |
ಕೋಪಿಸುತೆ ಕೊಲುವೆನೀ ವೃದ್ಧಪಾರ್ವನನೆನುತೆ
ತಾಪಿಸುತೆ ತೋಱಲಗನೆಸುತೆ ಹತ್ತಿರೆ ಬರುತೆ |
ಒಳಪೊಗಲು ನೋಡನೋಡಲು ಲಿಂಗದೊಳಪೊಗಲು
ತಿಳಿವುಳಿದು ಬೆಱಗಾಗಿ ನೆಱೆ ಕೌತುಕಂ [1]ಮಿಗ[1]ಲು |
ಮೆಲ್ಲಮೆಲ್ಲನೆ ಪೂರ್ವವಾಸನೆ ಮನಕೆ ತೋಱೆ
[2]ಇ[2]ಲ್ಲಿ ಪುಟ್ಟಿದುದೆಲ್ಲ ಕನಸಿನಂ[3]ದದೆ[3] ತೋಱೆ |
ಎಲ್ಲಿರ್ದೆನೇನಾದೆನೆಂದು ಚಿಂತಿಸುತಿರಲು
ಎಲ್ಲವುಂ ಕ್ರಮದಿಂದವಱಿಯಲ್ಕೆ ಬರುತಿರಲು |
ಬಂದನಪ್ರತಿಮಸಂಗಜವಿಮರ್ದನನೆಂ[4]ಬ[4]
ಬಂದನುದ್ಧತಶೀಲ[5]ತ[5]ರಕಾಲಹರನೆಂ[4]ಬ[4] |
ಅಮೃತಮಥನೋದ್ಭೂತ ವಿಷಮವಿಷಧರನೆಂ[4]ಬ[4]
ಅಮಮ ಬಂ[6]ದಂ[6] ಜನನಮರಣವರ್ಜಿತನೆಂ[4]ಬ[4] |
ದೇವಸಂತಾನಗುರು ದೇವವಲ್ಲಭನೆಂ[4]ಬ[4]
ದೇವಗತಿ ದೇವಮತಿ ದೇವದುರ್ಲಭನೆಂ[4]ಬ[4] ||
ಕರೆವ ಬಿ[7]ರು[7]ದಿನ ಕಹಳೆಗಳ ಮಹಾರವದೊಳಗೆ
ಧರೆ ನಡುಗೆ [8]ಪೊಡೆವ[8] ಭೇ[9]ರಿಯ[9] [10]ಘನ[10]ಧ್ವನಿಯೊಳಗೆ |
ಮೇಲೆ ತರದಿಂ ತುಱುಗಿ ತಳಿತ ಬೆಳ್ಗೊಡೆಯೊಳಗೆ
ಮಾಲೆಗೊಂಡೆಯ್ತಪ್ಪ ದೇವಗಣತತಿಯೊಳಗೆ |
ಶಾಂತಾರ್ಕಕೋಟಿಪ್ರಭಾಪುಂಜದಿಂ ಬೆಳಗೆ
ಮುಂತೆ ಶಿವಮೂರ್ತಿ ಜಗವೆಲ್ಲಱೊಳು ತೊಳತೊಳಗೆ |

---

[1] ಬಡ (ಖಗ). [2] ಅ (ಕ). [3] ದದಿ (ಕಚ), ತಿರೆ (ಖ). [4] ದು (ಖಗಚ).
[5] ಕ (ಖ); [ಖ]? [6] ಧನ (ಕ). [7] ರಿ (ಕಖಚಜ). [8] ಹೊಯಿವ (ಖಚ), ಹೊಯ್ವ (ಗ).
[9] ರೀ (ಖಗಚ). [10] ಮಹಾ (ಖ).

ದಶಭುಜಂ ಪಂಚವಕ್ತ್ರಂ ತ್ರಿಣೇತ್ರದಿನೊ[1]ಪ್ಪೆ[1]
ಶಶಿಕಳೆ ಜಟಾಭ[2]ರಂ[2] ಗಿರಿಜೆ [3]ತ್ರಿಸೂಳದಿನೊಪ್ಪೆ[3] |
ಇರೆ ಕಂಡು ನಂಬಿಯಣ್ಣಂ ಪೂರ್ವಮಂ ನೆನೆದು
ಪರಿತಂದು ಚರಣ[4]ತಳದೊಳು ಬೀಳುತುಂ ನೆನೆದು[4] |
ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ
[5]ತಕ್ಕಳಿದು ತಡವಾಗಿ[5] ಹೊರೆಯೇಱು ನೋಡುತುಂ |
ಇನಿತು ದಿವಸಂ ವೃಥಾ ಸವೆದೆನೆಲೆ ಶಿವ ಎನುತೆ
ಇನಿತು ಕಾಡುವರೆ ನಂಬಿರ್ದ ಭೃತ್ಯನನೆನುತೆ |
ಇರ್ದ ನಂಬಿಯನೆತ್ತಿ ತೆ[6]ಕ್ಕೈ[6]ಸಿ ಶಂಕರಂ
ಸಾರ್ದು ಮೂರ್ಧ್ನಿಘ್ರಾಣಮಂ ಮಾಡುತೀಶ್ವರಂ |
ಇನಿತು [7]ಬೇಗಂ[7] ಮಗನೆ ಕಾಡಿದವ[8]ರಾವ[8]ಯ್ಯ
ಇನಿತು ನಿನ್ನಂ ಬಳಲಿಸುತ್ತಿರ್ದೆವಾವಯ್ಯ |
ಹಾಡಯ್ಯ ನಂಬಿಯೆನುತುಂ ತಾಳಮಂ ಕುಡಲು
[9]ಹಾಡಯ್ಯ ಹಾಡೆನುತೆ[9] ಹರು[10]ಷದಿಂದಂ ಮಿಗ[10]ಲು |
ದೇವ ಹಾಡಿಸಿಕೊಂ[11]ಬಡಾಂ[11] ಹಾಡಬಲ್ಲೆನೇ
ದೇವ ಆಡಿ[12]ಸಿಕೊಂಬಡಾ[12]ನಾಡಬಲ್ಲೆನೇ |
ಎಂದೆನಲು ನೀನೆಮ್ಮ ನಾ ಪುರದ ಬನದೊಳಗೆ
ನೊಂದು ಪಿಚ್ಚ[13]ನೆ[13] ಎಂದು ಬಯ್ದಂತೆ ಹಾಡಿಳೆಗೆ |
ಹಾಡಲ್ಕೆ [14]ನಿನಗೆ ಮತಿಯಂ ದನಿಯನೀವೆನೆನೆ[14]

---

[1] ಪ್ಪಿ (ಗ). [2] ರಣ (ಖಗ). [3] ಯೆಡದೊಳಗೊಪ್ಪೆ (ಕ), ಸಹ ಮೃಡನೊಪ್ಪೆ<ಪ್ಪಿ> (ಖಗ), ಶೂಲದಿನೊಪ್ಪೆ (ಚ). [4] ದೊಳು ಬೀಳುತಂ ನೆನನೆನದು (ಕ). [5] ಉಕ್ತಿ ತಡಬಡವೋಗಿ (ಖ), ತಳಿರ್ದು ತಡಬಡವಾಗಿ (ಗೆ). [6] ಳ್ಕೈ (ಗ). [7] ಹೊತ್ತುಂ (ಖ), ಪೊಳ್ತುಂ (ಗ). [8] ನಾನ (ಕ), ರಾರ್ಯೆ (ಖ). [9] ಹಾಡುಹಾಡೈಯ್ಯ ನೋಡುತ್ತ (ಖ), ಹಾಡುಹಾಡೆಂದು ನೋಡುತ್ತ (ಗಚ). [10] ಷಂಬಡ (ಖಗಚ). [11] ಬೆನಾಂ<ನಾ> (ಖಚ). [12] ಸುತಿರ್ಪೆನಾ (ಖಚ), ಸುತಿರ್ಪೆಯಾಂ (ಗ). [13] ರೆ (ಕಜ). [14] - - - ಧನಿಯನಿತ್ತೆವೆನೆ (ಕ), ಮತಿಯು ಧ್ವ<ಧ>ನಿಯಂ ನಿನಗೆ ಯೀವೆನೆನೆ (ಖಗ).

ಬೇಡಿದುದನಿತ್ತು ಸಲಹುವೆ[1]ಸಂ[1]ಜಲೇವುದೆನೆ|
ಕೃತಕೃತ್ಯನಾಗುತುಂ ನಂಬಿಯಣ್ಣಂ ನಿಂದು
ನತನಾಗಿ ಶಂಭುವಂ ಹಾಡತೊಡಗಿದನಂದು|
ಪಿಚ್ಚನೇ ಪೆಱಸೂಡಿ[2]ದನೆ ಫರಮ[2]ಪಶುಪತಿಯೆ
ಅಚ್ಚಸವಿಯೇ ಸುಖವೆ ಸಖನೆ ನಂಬಿಯ ಪತಿಯೆ|
ನೀನೆ ಆಳ್ಮಾಡಿಕೊಳಲಲ್ಲೆನಲ್ ಬಪ್ಪುದೇ
ನೀನೆ ತೊ[3]ಳ್ತಾಳ್ವ[3]ಡಿನ್ನಲ್ಲೆನಲ್ ಬಪ್ಪುದೇ|
[4]ನೀನೆ ಬಂದಾಳ್ಮಾಡೆ ಯುಕ್ತಿ ಕೊಂಬುದೆ ದೇವ[4]
ನೀನೆ ಬಂದಾ[5]ಳೆನಲು[5] ಧರ್ಮವುಂಟೇ ದೇವ|
ಪ್ರೇರಕಂ ನೀಂ ಬರಲು ಸಾಕ್ಷಿಯುಂಟೇ [6]ತಂದೆ[6]
ಮಾರಾರಿ ನೀಂ ಬರೆ ವಿಚಾರವುಂಟೇ [6]ತಂದೆ[6]|
ಇನ್ನೇನು ತೊತ್ತಾದೆನಲ್ಲೆನಲ್ ಬಪ್ಪುದೇ
[7]ಇನ್ನಂತುವಿಂತುವೆಂತುಂ[7] ಹೊಳೆಯಬಪ್ಪುದೇ|
ಮಚ್ಚಿ ಬಂದಾಳಾದೆನಲ್ಲೆನಲ್ ಬಪ್ಪುದೇ|
[8]ನಚ್ಚಿ ನಿನಗಾಳಾದೆನಲ್ಲೆನಲ್ ಬಪ್ಪುದೇ[8]
ಎಂದು ಹಾ[9]ಡಲು[9] ನಂಬಿಯಂ ನೇಹದಿಂ ನೋಡಿ
[10]ಹೆಂ[10]ದದಾನಂದದಿಂ ಸಮಸುಖದೊಳೋಲಾಡಿ|
ಎಲ್ಲೆಲ್ಲಿ ದೇವಾಲಯಂಗಳುಂಟಾದಲ್ಲಿ
ಅಲ್ಲಲ್ಲಿ [11]ನಿಚ್ಚಂ ಸಹಸ್ರ [12]ಪೊನ್ಗ[12]ಳನಲ್ಲಿ[11]|

---

1 ವಂ (ಕ). 2 ಪರಮನೇ (ಚ). 3 ತ್ತಾಳ್ವ (ಕಖಚ), ತ್ತಾಳ್ದ (ಗ). 4 ಈ ಪಂಕ್ತಿ (ಖಗ) ಗಳಲ್ಲಿಲ್ಲ. 5 ಳ್ಮಾಡೆ (ಖಗ). 6 ದೇವ (ಚ). 7 ಇನ್ನೆಂತು - - - (ಕ), ಇನ್ನಂತುವಿಂತು ಎಂದುಂ (ಖ), ಇನ್ನಂತುವೆ<ಐ>ಂತುಂ (ಗಚ). 8 ಯಿಂನೆಂತುವಿಂತುವೆಂತುಂ ಹೊಳೆಯು ಬಪ್ಪುದೇ (ಗ); ಒಚ್ಚತಂ ಕೊಂಡು ನಿನ್ನೊಳು ಹೊಳೆಯಬಪ್ಪುದೇ (ಚ). 9 ಡಿದ (ಖಗಚ). 10 ಹೊಂ (ಗ). 11 ನಿಚ್ಚನಿಚ್ಚಂ ಹೊನ್ನನಾವಲ್ಲಿ (ಚ). 12 ಫೊಂಗ (ಕಗ), ಹೊಗ (ಖ).

ಕೊಡುತೆ [1]ಬಂದಪೆವು ನೀಂ[1] ಸುಖದೊಳಿರ್ಪುದು ನಂಬಿ
ಸಡೆದು ರಾಜ್ಯಂಗೆಯ್ದು ಹದುಳವಿರ್ಪುದು ನಂಬಿ|
ಮೊದಲೀ ಶಿವಾಲಯದ [2]ಪೊಸ್ಗ[2]ಳಿವೆ ಕೊಳ್ಳೆಂದು
ಮುದದಿಂದೆ ನಂದಿಯುಂಡಿಗೆಯ [3]ಪೊಸ್ಗಳ್[3] ತಂದು|
ಕೊಟ್ಟು ತಲೆಯೊಳ್ ಕಯ್ಯನಿಟ್ಟು ಶಶಿಶೇಖರಂ
ನೆಟ್ಟನಂತರ್ಧಾನದೊಳ್ ಸಂದನೀಶ್ವರಂ ||

## ಸಪ್ತಮ ಸ್ಥಲಂ

---

[1] ಬಪ್ಪೆಉ<ಪೇವು> ನೀನು (ಖಗ). [2] ಪೊಂಗ (ಕ), ಹೊಂಗ (ಖಗಚ). [3] ಪೊಂಗಳ (ಕ), ಹೊನ್ನಂ (ಖಗಚ).

## ಲನೆಯ ಸ್ಥಲ

ಕೃಪೆಯಿಂದಂ ನಡೆತಂದು ನಂಬಿದ ಸುತಂ ಸಂಸಾರದೊಳ್ [1]ನೋಯ[1]ಲಿ-
ರ್ದಪರಾಧಂಗಳನೆಯ್ದೆ ಮಾಣಿಸಿ[2]ಯಜಸ್ರಂ[2] ನಂಬಿಯಂ ತೊತ್ತುಗೊಂ- |
ಡು ಪದಾಂಭೋಜಮನಲ್ಲಿ ತೋಱಿ ಶಿವಲಿಂ[3]ಗಾಂತ[ಃ][3]ಸ್ಥನಾದಂ ವಿಯ-
ತ್ತ್ರಿಪುರಾರಣ್ಯದವಾಗ್ನಿ [4]ಹಂಪೆಯ[4] ವಿರೂಪಾಕ್ಷಂ ಲಲಾಟೇಕ್ಷಣಂ ||

ಇಂತು ತಿರುವೆಣ್ಣೆನಲ್ಲೂರೊಳ್ ನಂಬಿ[5]ಯಣ್ಣಾನಂ[5] ತೊತ್ತುಗೊಂಡು ಸರ್ವಬ್ರಹ್ಮಾಂಡಸಾರ್ವಭೌಮಂ ಸಕಲ[6]ದೇವ[6]ದೀಕ್ಷಾಗುರು ಅನಂತದೇವಗಣ [7]ಪರಿಶೋಭಿತಂ ಅ[7]ನೇಕ[8]ದೇವರು[8]ಗಳಸುಗುಳ್ವ ಘುಟಿಕಾಸಿದ್ಧಂ ಬೀಜದೊ[9]ಳು ಮರಂ[9] ಪುಗುವಂತೆ ಮರದೊಳಗ್ನಿ [10]ಪುಗು[10]ವಂತೆ ಅಗ್ನಿಯೊಳುಷ್ಣಂ ಪುಗುವಂತೆ ಶಿವಲಿಂಗದೊಳ್ ಪುಗಲಿತ್ತಲು ನಂಬಿಯಣ್ಣಂ ಶರ್ವಕಾರುಣ್ಯಸಾಮ್ರಾಜ್ಯ ಸದ್ಭ[11]ಕ್ತಿ[11]ಸಾರ್ವಭೌಮನಾಗಿ ಅನಾಥ[12]ತ್ವಂ[12] ಪಿಂಗಿ ಸನಾಥನಾಗಿ ಉನ್ನತಮಹಿಮಂ ತನ್ನ ಮುಂದಿರ್ದ [13]ಚಾ[13]ತುರಂಗ ಬಲಮಂ [14]ನಡೆ[14] ನೋಡಿ [15]ನಮಗೆಯು ನಿಮಗೆಯು[15] ನೊಮ್ಮು ಸಂಬಂಧವಿಲ್ಲ ನೀವೆ[16]ಲ್ಲಂ[16] ನಿಮ್ಮರಸನಲ್ಲಿಗಿರದೆ ಪೋಪುದೆನೆ ತುಂಬುರನುಳಿ[17]ಯಲುಳಿದರೆಲ್ಲಂ[17] ನರಸಿಂಗಮೊನೆಯರ ಪುರಕ್ಕೆ ಪೋಗೆ ತುಂಬುರಂ ತನ್ನ ಮನದೊಳ್ ವಿಚಾರಿಸಿ ನೋಡು[18]ತ್ತೀತಂ[18] ಮಹಾಸಾಮರ್ಥ್ಯಪುರುಷನೀತನಂ ಬಿಡಲಾಗದೆಂದು

---

[1] ಮುಳುಗ (ಖ). [2] ನಿರಂತಂ (ಚ). [3] ಗಾಂತ (ಕಜ), ಗಾತ್ರ (ಖ), ಗಾತ (ಗ), ಗಂತ (ಚ). [4] ಯೊಪ್ಪಿದ (ಖ). [5] ಯಂ (ಖ). [6] ಗುರು (ಗ). [7] ಪಶುಪತಿಗಳನ (ಗ). [8] ದೈವ (ಖಗ), ದಯಿವಂ (ಚ). [9] ಳು ವೃಕ್ಷ<ಕ್ಷಂ> (ಖಚ), ಳ್ ವೃಕ್ಷಂ (ಗ), ಳಂಕುರಂ (ಜ). [10] ಪುಟ್ಟು (ಕ), ಪೊಗು (ಖಗಚಜ). [11] ಕ್ತ (ಕ). [12] ನಾಥನಂ (ಕ). [13] ಚ (ಖಗಚ). [14] (ಖಗ) ಗಳಲ್ಲಿಲ್ಲ. [15] ನಿಮಗೂ ನಮಗೂ (ಖ), ನಿಮಗಂ ನ<ವೆ>ಮಗಂ (ಗಚ), ನಮಗೆಯೂ ನಿಮಗೆಯೂ (ಜ). [16] ಲ್ಲ (ಕಜ), ರೂ (ಖ), ರುಂ (ಗ). [17] ದೆಲ್ಲರು<ರುಂ> (ಖಗ). [18] ತ್ತಿ (ಕಜ), ಡಿಯಾತಂ (ಖ), ಡುತ್ತಿತ್ತಂ (ಗ).

ಶಿವಂಗೆ ನಂಜಿ ತೊತ್ತಾಗಲು ನಂಬಿ[1]+ಗೆ [2]ತಾಂ ತೊತ್ತಾಗಿ[2] [3]ದೇವಾ ನಿನ್ನಂ[3] ಬಿಡೆನೆನ್ನಂ ಬಿಡದಿರೆನೆ ಸೌಂದರಂ ಸಂತಸಂಬಟ್ಟಾತನನಾಳ್ಗೊಂಡು [4]ಬಾಳ್ಗೆನ್ನ ಭಾಳಾಕ್ಷನೆನುತೆ ಪಿನಾಕಿ[4] ಕೊಟ್ಟ ಪೊಟ್ಟಣ[5]ಮಂ ಬಿಟ್ಟು[5] ಭಕ್ತರ್ಗಿತ್ತು [6]ಯುಕ್ತರ್ಗಿತ್ತು[6] [7]+ [8]ಬಂದರ್ಗಿತ್ತು[8] ನಿಂದರ್ಗಿತ್ತು [9]+ ಬೇಡಿದರ್ಗಿತ್ತು ನೋಡಿದರ್ಗಿತ್ತು ಮಾರಾರಿಯ ಕಾರುಣ್ಯದಿಂ ಬಂದ ದಂಡಿಗೆಯು ಧವಳಚ್ಛತ್ರದ ಚಾಮರಸೀಗುರಿಯ ದರ್ಪಣದ ಹಡಪದ ಕಂ[10]ಖದ[10] ಬಿಂಕದ ಬಾಹತ್ತರ ನಿಯೋಗಂ ಬೇಱೊಂದು ಮಾಹೇಶ್ವರ ತೇಜ[11][ಶ್ಯ][11]ಲಾಕೆ ಬೆಸಲಾದಂ[12]ತಿರ[12]ಹಂ ತೊತ್ತುಗೊಂಡನೆಂಬ ಕೌತುಕದ ಪೆಸರು ವಸುಮತಿಯಂ ತೀವೆ ತನ್ನ ನೋಡಲ್ ನೆರೆದರಸುಮಕ್ಕ[13]ಳ[13] ಶರಣರ ಪಿರಿಯರ ಪರಸಮಯಿಗಳ [14]ಸಾವಂತರ[14] ಸಂದಣಿಯ ಗೊಂದಣಂ ಬೆರ[15]ಸು[15] ತಿರುನಾವಲೂರತ್ತಲಭಿಮುಖನಾಗಿ ಮನೋಜಹರ[16]ಮನೋಹರ[16]ನೆಂಬ ಅಂಬಿಕಾಪ್ರಿಯ[17]ಚಿತ್ತಪ್ರಿಯ[17]ನೆಂಬ [18]ತಂಬಿರಾಂತೋಳ[18]ನೆಂಬ ಕಡುಸಲುಗೆಯ ಬಿರುದಿನ ಬಹುವಿಧದ ಕಹಳಾರವಂ ದೆಸೆದೆಸೆಗೆ ಪರಿಯೆ ನಡೆತಪ್ಪಾಗಳ್-

ಈ ಕುಮಾ[19]ರಕಂ[19]ಗಾಕಸ್ಮಿಕಂ [20]ಶಿವಕರುಣಮಾ[20]ದುದಂ ತವೆ ಕೇಳ್ದು ಕೌತುಕಂಬಟ್ಟು ನರಸಿಂಗಮೊನೆಯರ್ ಮುದದಿಂದಿದಿರ್ವಂದಾಲಿಂಗಿಸ

---

[1]+ಯಣ್ಣಂ (ಕ). [2] ನಾಂ ತೊತ್ತಾಗಿಹೆನೆಂದು ನಿಶ್ಚೈಸಿ ನಂಬಿಯಣ್ಣಂಗೆ ಮೈಯಿಕ್ಕಿ (ಖ:ಗ). [3] ದೇವಾ ನಿಮ್ಮಡಿಗಳ ಬಿಡೆ (ಖ), ದೇವದೇವ ನಿಮ್ಮಡಿಗಳನಾಂ ಬಿಡೆಂ (ಗ), ದೇವದೇವ ನಿಮ್ಮಂ ಬಿಡೆಂ (ಚ). [4] ಭಾಳೆಂನ ಭಾಳಕ್ಷನೆನುತ ಪಿನಾಕಿ (ಕ), ಭಾಳೇಕ್ಷಣಂ (ಖ), ಬಾಳ್ಗೆನ್ನ ಭಾಳಾಕ್ಷ (ಗ), - - - ಯೆನತ ಪಿನಾಕಿ (ಚ), - - - ವೆನುತೆ ಪಿನಾಕಿ (ಜ). [5] ದ ಪೊನ್ನಂ ತುಂಬುರನ ವಶಕ್ಕೆ(?) ಮುದ್ರೆಯನೊಡಸಿ ಪೊನ್ನಂ (ಖ), . . . ವಶಕ್ಕಿತ್ತು ಮುದ್ರೆಯನೊಡಸಿ ಹೊನ್ನ (ಗ). [6] (ಚ) ದಲ್ಲಿಲ್ಲ. [7]+ಕವಿಗನುಕಿವಾದಿವಾಗ್ಮಿಗಳಿಗಿತ್ತು (ಚ). [8] (ಖಗ)ಗಳಲ್ಲಿಲ್ಲ. [9]+ಮುದ್ರೆಯನೊಡಸಿ(ಗ). [10] ಕದ್ವನಿಯ (ಚ). [11] ಸ್ಸ (ಕಜ), ಸ (ಖ), ಶಾ (ಗ), ಶ (ಚ). [12] ತೆ (ಖಗ). [13] ಳು (ಕಗ). [14] (ಖ) ದಲ್ಲಿಲ್ಲ. [15] ಸಿ (ಚಜ). [16] (ಕಚ) ಗಳಲ್ಲಿಲ್ಲ ; ನ ಮನೋಹರ (ಖಗ). [17] ನ ಚಿತ್ತಪ್ರಿಯ (ಖ), ನ ಪ್ರಿಯಚಿಂತ (ಗ). [18] ತಂಬಿರಾಂದೊಳ (ಕಗ), ಕಂಬಿರಾಂದೊಳ (ಖ), ತಂಬಿರಾಂತೊಳ (ಚ), ತಂಬಿರತೊಳ (ಜ). [19] ರಂ (ಚಜ). [20] ಹರಂ ಕರುಣಿಸಿ (ಚ).

[1]ಲೀಯ[1]ದೆ ಪುಯ್ಯಿಕ್ಕಿ ನಿಂದು ಹರುಷವಿಕಳನಾಗಿ [2]ಬಾಯ್ಗೆ ಬಂದುದಂ[2] ಪೊಗಳಿ ನೆಱೆ ಪುಳಕಿತನಾಗಿ ಶಿವನ ಶಿಶುವೆ ಶಿವನ ಕುಮಾರಕನೆ ಶಿವನ ಕಣ್ಣೆ [3]ಶಿವನ ಪುಣ್ಯವೆ ಶಿವನ ಸೊಬಗೆ[3] ಶಿವಶಿವಾ ಎಂದು ಕೊಂಡಾಡಿ [4]+ಪುರಕ್ಕೊಡ ಗೊಂಡು ಬಂದರಮನೆಯಂ ಪೊಕ್ಕು [5]+ಸಿಂಹಾಸನದೊಳು ಬಿಜಯಂಗೆಯ್ಸಿ ಶ್ರೀಪಾದಮಂ ತೊಳೆದು ಪಾದೋದಕಮಂ [6]+ತಳೆದು [7]ಕಣ್ಣ ಳೊ[7]ಳೊತ್ತಿ ಬಾಪು ಭಾಗ್ಯವೆ ಎಂದು ಕೃತಾರ್ಥ[8]ಮಪನಾ[8]ಗುತ್ತಿರಲ್- ಇತ್ತಲಿದೆಲ್ಲಮಂ ಕೇಳ್ದು ಜೆಡೆಯನಾಯನಾರುಂ ಯಸ್ಸ್ಯಜ್ಞಾನಿ ದೇವಿಯರುಂ [9]ಕಡು[9]ಸ್ನೇಹವಿಡಿ ಗೊಂಡು ಸಂ[10]ತೋಷಂ[10] ಸರ್ವಾಂಗದೊಳ್ ತೀವಿ [11]ಬಿ[11]ಬ್ಬನೆ ಬಿರಿದುಬ್ಬರಿ [12]ಸುತ್ತೆ[12]ಯ್ತಂದು ಸಿಂಹಪೀಠದೊಳಿರ್ದ ನಂಬಿಯಣ್ಣನಂ ಕಂಡೆತ್ತಿ ತೆಗೆದು ತಕ್ಕೈಸಿ ಹೆತ್ತ[13]ತಾಯ ಮೊಲೆ ತೊ[13]ರೆಯೆ [14]ಪುಳಕಿಸುವ[14] ಜೆಡೆಯನಾಯ ನಾರ ಮಯ್ ತೊರೆಯೆ ಸಲಹಿದ ನೃಪನ ಮನಂ ತೊರೆಯೆ ಹಿಂಗದೆ ನೋಳ್ಪವರ ಕಂಗಳ್ ತೊರೆಯೆ ಜಗ[15]ಮಂ ಪೊರೆಯಲಿರ್ದ ಪರಮಾರ್ಥದ ತಿರುಳ್[15] [16]ಪುಣ್ಯ ದಂ[16]ತಿರ್ದ ಸೌಂದರನಂ ನೋಡಿ[17]+ ಹಿಗ್ಗುತುಂ ಹೊಂಗುತುಂ ಹೊರೆಯೇ ಱುತುಂ [18]ತೂಗುತುಂ [19]ಬೀಗುತುಂ ಬಿರಿವುತುಂ ತೆರಳು[19]ತ್ತೆಲ್ಲರುಂ ಶೈವಸಂಪನ್ನ ರಾಗಿ ಪುಳಕದ ಪುಂಜವಾಗಿ ಅನುರಾಗದಾಗರವಾಗಿ[18] ಭಕ್ತಿಯ ಬೆಳೆಸಿರಿವಂತ ರಾಗಿ ನುಡಿಯಲಱಿಯದೆ ನೋಡುತ್ತಮಿರೆ

ನರಸಿಂಗಮೊನೆಯ[20]ರು[20] ಯಸ್ಸ್ಯಜ್ಞಾನಿ ದೇವಿಯರ ಮೊಗಮಂ ನೋಡಿ

---

[1] (ಖಗ) ಗಳಲ್ಲಿಲ್ಲ. [2] ಮನಬಂದನಿತು (ಚ). [3] (ಚ) ದಲ್ಲಿಲ್ಲ. [4] +ಕೌತುಕಂಬಟ್ಟು (ಕ); ಮುಂಡಾಡಿ (ಖಗಚ). [5] +ದಿವ್ಯ (ಖಗಚ). [6] +ಶಿರದೊಳ್ (ಗ). [7] ಕಣ್ಣೋಳ್ಕಪೋಳದೊ (ಖ), ಕಂಘೊಳೊತ್ತಿ ಕಪಾಳದೊ (ಗ), ಕಂಗಳೊಳೊತ್ತಿ ಕಪೋಳದೊ (ಚ). [8] ರಾ (ಚ). [9] ನಂಬಿಯಣ್ಣನಂ ಕಂಡು (ಖ); ಬಂದು ನಂಬಿಯಂಣನಂ ಕಂಡು (ಗ). [10] ತಸ<ಸಂ>(ಖಗ). [11] ಬೆ (ಖಗ). [12] ದಬ್ಬರಿಸುತಿರಲಿತ್ತಲೆ (ಚ). [13] ತಾಯ್ ಮೊಲೆದೊ (ಕ). [14] (ಖಗಚ) ಗಳಲ್ಲಿಲ್ಲ. [15] - - - ತಿರುಳಂ ತೀರ್ಥ (ಖ); (ಗ) ದಲ್ಲಿಲ್ಲ. [16] ಕರಣೆಯಂ (ಜ). [17] +ನೋಡಿ (ಕಚ). [18] (ಗ) ದಲ್ಲಿಲ್ಲ. [19] ಬೀಗುತಂ ಬಿರಿಉತುರುಳು (ಖ), ಬಿರಿವುತ್ತಂ ಅರಳು (ಚ). [20] ರಾ (ಖಗ).

ಎಲೆ ತಾಯೆ ಸಂಬಿಯಣ್ಣನ ಪೆತ್ತ [1]ನಿಸ್ಸ[1]ದರವೆ ಉದರಂ [2]ನಿನ್ನ ಮೊಲೆಯೆ
ಮೊಲೆಸೆಂದಾ[2] ಪುಣ್ಯೋದರಕ್ಕೆ [3]+ ಪ[4]ಟ್ಟಂಗ[4]ಟ್ಟಿ ಎಲೆ ದೇವ ನಿಮ್ಮ [5]ನಿನಿತು
ದಿನಂ[5] ಮಗನೆಂದು ಬಗೆದ ತಪ್ಪನೊಪ್ಪಂ ಮಾ[6]ಡುವುದೆಂ[6]ದು ಬೇಡಿಕೊಳ್ಪರ
ಸಸಂ ತಾಯ್ತಂದೆಗಳುಮಂ [7]ನಿರೀಕ್ಷಿಸುತ್ತೆ- ಅಂಜದಿರಿ[7] ಎನ್ನ ಪೆತ್ತ ನಿಮಗಂ
[8]ಸಲಹಿದ ನೃಪಗಂ[8] ಸಂಸಾರಭಯವಿಲ್ಲ ಶಿವನ ಕರುಣಂ ನೆಲೆಗೊಂಬುದೆಂದು
ಕರುಣಿಸಿ ಬೆಸಸಿ ಮತ್ತಮಿಲ್ಲಿಂದ[9]ವಿನ್ನ[9]ನಗೆ ಪಾರ್ವತಿಯೆ ತಾಯಿ ವಿರೂ
ಪಾಕ್ಷನೆ ತಂದೆ [10]+ [11]ಈ ಲೋಕಕ್ಕೆ[11] ಪರವಶನಲ್ಲಂ ಹರವಶಂ ಶಿವನೆಲ್ಲಿರಿಸಿದ
ನಲ್ಲಿರವೇಳ್ಪ್ಕಂ ನಿಮಗೆ ಶಿವನುಂ ಪಂಚಾಕ್ಷರಿಯುಂ [12]ಭಕ್ತರುಂ[12] ಪರಮ
ಬಂಧುಗಳು ಪಿರಿ[13]ದುಮಾ[13]ಪ್ತರೆಂದುಳ್ಳುದನುಪದೇಶಂ ಮಾಡಿ ಭದ್ರಾಸನ
ದಿಂದೆದ್ದು ನರಸಿಂಗಮೊನೆಯರ್ ಕೈಗುಡೆ ತಾಯ್ತಂದೆಗಳ್ ಪರಸೆ [14]ಪುರಜನಂ
ಪೊಡಮಡೆ[14] [15]ಶರಣರ್ ಜಯ ಜೀಯೆನೆ[15] ಸುಖಾಸನಕ್ಕೆ ಬಿಜಯಂಗೆಯ್ದು
ಇಕ್ಕುವ ಸೀಗುರಿಯ ಬೀಸುವ ಚಾಮರದ ಪೊಯ್ವ ತಂಬಟದ ಸೂಳೈಪ
ನಿಸ್ಸಾಳದ [16]ಪೂರೈಪ ಶಂಖದ[16] ಬಿ[17][ರು][17]ದೆತ್ತಿ ಕರೆವ ಕಹಳೆಗಳ ಸರ್ವಸಂಭ್ರ
ಮದ ನಡುವೆ ಸಕಲಜ[18]ನದಾ[18]ನಂದರಸಂ ಮಡುಗಟ್ಟೆ ಜೋಳದೇಶಂ ಗುಡಿ
ಗಟ್ಟೆ ಭಕ್ತರ ಭಾಳಂ ಪ[19]ಟ್ಟಂಗ[19]ಟ್ಟೆ ಭಕ್ತಿರಸಂ ಸೇತುಗಟ್ಟೆ ಸ[20]ತ್ಯದ[20] ನುಡಿ
ಕೆಚ್ಚುಗಟ್ಟೆ ಪುಣ್ಯದ [21]ಫಲಂ[21] ಪೆರ್ಗೊನೆಗಟ್ಟೆ ಪರಸಮ[22]ಯಂ[22] ಸರಕುಗಟ್ಟೆ

---

[1] ನಿಂಮು (ಕ). [2] ನಿಂಮು - - - (ಕ), ನಿನ್ನ ಮೊಲೆವಾಲೇ ಮೊಲೆವಾಲೆಂದು (ಖ), ನಿಂನ ಮೊಲೆಹಾಲೆಂಡು (ಗ), ನಿಂಮ ಮೊಲೆವಾಲೆ ಪಾಲೆಂದಾ (ಚ). [3] + ವಿಭೂತಿಯ<ಯಂ> (ಖಗ). [4] ಟ್ಟವಂ ಕ (ಚ), ಟ್ಟಗ (ಜ). [5] (ಗ) ದಲ್ಲಿಲ್ಲ. [6] ಡಲೆಂ (ಜ). [7] ಕೃಪೆಯಿಂದೀಕ್ಷಿಸುತ್ತಂ ಬನ್ನಿರೆ(ಖ:ಗ:ಚ). [8] (ಗ) ದಲ್ಲಿಲ್ಲ. [9] ಮುಂದೆ (ಖ). [10] + ಶಿವಭಕ್ತರೆ ಬಂಧುಗಳು ಶಿವಾಲಯವೆ ಅರಮನೆ ಶಿವಪ್ರಸಾದವೆ ಸಕಲಭೋಗಂ ಶಿವಪುರವೆ ಪಟ್ಟಣಂ ಶಿವಲೋಕವೆ ಲೋಕಂ (ಖ:ಗ:ಚ). [11] ಯಿನ್ನಾಂ (ಖಗಚ). [12] ಭಕ್ತರೆ (ಕಜ); ಶಿವಭಕ್ತರು<ರುಂ>(ಖಚ), ಶಿವಭಕ್ತರುಗಳು (ಗ). [13] ದಾ (ಖಗ). [14] (ಗ) ದಲ್ಲಿಲ್ಲ. [15] - - - ಜಯುಜಿಯ್ಯೆನೆ (ಕ), ಶರಣರುಂ<ರು> ಜಯ ಎ<ಯೆ>ನೆ (ಖಚ), ಜ(?)ತೆಯನಾರು ಜಯುಜಯುಯೆನೆ (ಗ), - - - ಜಯುಜಿಯ್ಯುಯೆನೆ (ಜ). [16] (ಗ) ದಲ್ಲಿಲ್ಲ. [17] ರಿ (ಸ). [18] ನಾ (ಖಗಚ). [19] ಟ್ಟಗ (ಕಚಜ), ಟ್ಟವಂ ಕ (ಗ). [20] ದ್ಭಕ್ತರ (ಚ). [21] ಪುಳಕಂ (ಗ). [22] ಯಿಗಳ್ (ಕ).

ಪುರಮಂ ಪೊಱಮಟ್ಟು ಕಿಱಿದಂತರಂ ನಡೆತಂದು ತಾಯ್ತಂದೆ[1]ಯರ್ಗಂ[1] ಬೀಳ್ಕೊಟ್ಟು [2]+ಪರಮಾನುರಾಗದಿಂ ಬರೆವರೆ

ಮುಂದೊರ್ವ ಶಿವಭಕ್ತಂ ಮುಂಗುಡಿಯೊಳು ಗುಡಿಗಟ್ಟಿ ಕುಣಿ[3]ವು[3]ತ್ತಿರಲವರಂ ನಂಬಿಯಣ್ಣಂ [4]ಬೆಸಗೊ[4]ಳಲವರ್ ಕೇಳದಂತೆ ಮತ್ತೆ ಮತ್ತೆ [5]ಸುತ್ತಿ ಕುಣಿವುತ್ತಿರಲು[5] ಹ[6]ತ್ತೆ[6] ಸಾರ್ದು- ಎಲೆಯಯ್ಯಾ ನೀವಾರ್ ನಿಮ್ಮ ಪೆಸ[7]ರೇ ನೆ[7]ನೆ [8]ಆ[8] ನಂಬಿಯಣ್ಣನ ತೊತ್ತಿನ [9]ತೊತ್ತು[9] [10]+ ಬಂಟರ ಬಂಟನೆನ್ನ ಪೆಸರು ಪೆರುಮಳ[11]ಲೆ[11]ಯ ಕುಱುಂಬರೆಂದು ಇಂದು ಮೊದಲಾಗಿ ನಿಮ್ಮಡಿಗಳ ಮುಂದೆ ಗುಡಿಗಟ್ಟಿ ಬರ್ಪುದಿದೆ ನೇಮವೆಂದು ನಲಿನಲಿದಾಡೆ ಕೇಳ್ದು ಸಂತಸಮನೆಯ್ದಿ ಬರುತ್ತಿರೆ

ಮುಂದೆ ಗ್ರಾಮವೆಂಬ [12]ಶಿವ[12]ಪುರದ [13]ಚೊಕ್ಕಣಂ ಕೊಡುತ್ತ ನಾಯನಾರ್- ಎಮ್ಮ[13] ಮಗಂ ನಂಬಿ ಬಂದ[14]ಪನಾತನಂ ನೀವೆಲ್ಲ[14]ದಿರ್ಗೊಂಬುದೆಂದಲ್ಲಿಯ ಮಾಹೇಶ್ವರರೆಲ್ಲರ್ಗೆ ಬೆಸಸೆ ಮಂಗಳಮೃದಂಗ ತೂರ್ಯತ್ರಯ ಪ್ರವೀಣ ನಾನಾವಿಳಾಸಿನೀನಿಕರದಿಂದಿದಿರ್ಗೊಳಲು ಪುರಮಂ ಪೊಕ್ಕು [15]+ಶಿವಾಲಯಕ್ಕೆ ಬಂದು [16]ದೇವ[16]ದೇವ [17]+ದೇವಶಿಖಾಮಣಿ ದೇವಜನಜನಕ [18]ದೇವ[18]ಸಕಲಜಗದಾಧಾರ ದೇವ ಕರುಣಿಸೆಂದಲ್ಲಿ ಕ[19]ಕ್ಷಾ[19]ಧಾರ[20]ಮಂ ವಿಭೂತಿಸಹಿತಂ[20] ಪಡೆದು ಸಕಲಸಾಮರ್ಥ್ಯಮಂ ಕಂಕುಳೊಳಿಱುಂಕುವಂತಳ

---

1 ಗಳಂ (ಖಗ). 2 + ನರಸಿಂಗವೊನೆಯರ<ರಂ>ನಾದರಿಸಿ ಕಳುಪಿ<ಹಿ> (ಖಗ). 3 ಯು (ಗ), ಯಿ (ಚ). 4 ಕೇ (ಖ). 5 ಸುತ್ತಿಮುತ್ತಿ ಕುಣಿವು<ಯು>ತ್ತಿರೆ (ಖಗ), ತು×ಸುತ್ತಿರೆ (ಚ), ಕುಣಿವುತ್ತಿರಲು (ಜ). 6 ತ್ತಿರೆ (ಚ). 7 ರಾರೆ (ಕ), ರಾಉ<ವು>ಪೆ (ಖಗ). 8 ನಾ (ಕಗ), ನಾಂ (ಖ). 9 ತೊತ್ತಿನ ತೊಳ್ತು (ಗ). 10 + ಆ ನಂಬಿಯಂಣನ (ಚ). 11 ಲಿ (ಖಜ). 12 (ಜ) ದಲ್ಲಿಲ್ಲ. 13 ಚೊಕ್ಕಂಣಂ ಗುಡುಗುತ್ತಾನಾಯಿನಾರೆಂಮ (ಕ), ಚೊಕ್ಕನೈ<ನಾಯಿ>ನಾರೆಮ್ಮ (ಖಗ), ಮುಕ್ಕಂಣಂ ಕೊಡುತ ನಾಯಿನಾರುಂ ಯೆಂಮ (ಚ), - - - ಗುಡುತ್ತ ನಾಯ್ನಾರೆಂಮ (ಜ). 14 ಗುಡಿಗಟ್ಯಾತನನಿ (ಖಗ). 15 + ಚೊಕ್ಕನ<ನಾ>ಯಿನಾರ (ಖಗ). 16 ದೇವರ (ಕಖಗ). 17 + ದೇವದೇವೇಶ (ಗ). 18 (ಖಗ) ಗಳಲ್ಲಿಲ್ಲ. 19 ಕ್ಷದಾ (ಜ). 20 ದ ವಿಭೂತಿಯಂ (ಖ).

ಪಡಿಸಿ ನಿತ್ಯಪಡಿ[1]ವೊ[1]ನ್ನಂ ನಿರ್ವಿ[2]ಚಾ[2]ರದಿಂ ಕೊಂಡು ತ್ಯಾಗಭೋ[3]ಗಂ[3]ಗಳಂ ಮಾಡುತ್ತೀ ತೆಱದೊಳು ಪಲವು ಶಿವಪುರಂಗಳಂ ಪೊಕ್ಕು ಸಲುಗೆಯಿಂ ಬೇಡುತುಂ ಬಲ್ಪಿನಿಂ ಕಾಡುತುಂ ನಲವಿಂ[4]ದೆ ಪಾ[4]ಡುತುಂ ಪಡಿವೊಂಗಳಂ ಕೊಳುತುಂ ಶಿವನ ಸೆಜ್ಜೆಯಂತಿರ್ದ ತಿರು[5]ವಾರೂ[5]ರ್ಗೆ ನಡೆತಪ್ಪಾಗಳು ||

## ಅಷ್ಟಮ ಸ್ಥಲಂ

---

[1] ಹೊ (ಖಗಜ). [2] ಕಾ (ಕ). [3] ಗಾದಿ (ಖಗಚ). [4] ದಾ (ಖ), ದಪಾ (ಗ), ಕಾ (ಚ). [5] ನಾವಲೂ (ಕ).

## ೯ನೆಯ ಸ್ಥಲ

ಅದನೇನೆಂಡಪೆನೀ ಜಗತ್ತ್ರಯದ ಪುಣ್ಯಂ ರೂಪುಗೊಂಡಿಕ್ತೊ ಮೇ-
ಣುದಯಾದ್ರೀಂದ್ರದೊಳೊಪ್ಪುವರ್ಕಕುಳ ಜನ್ಮಸ್ಥಾನವೋ ಸೋಮಸಂ- |
ಪದಮಂ ಪೆರ್ಚಿಪ ಸೋಮಲೋಕತಿಲಕಾಲಂಕಾರವೋ ಸತ್ಯಲೋ-
ಕದ ಶೈವಾಗಮತೇಜ[1]ದಿಕ್ಕೆ[1]ಯೊ ಎನಲ್ ಕಣ್ಗೊಪ್ಪಿ ತೋಱಲ್ ಪುರಂ ||

ಶ್ರೀಶಿವನ ಸೆಜ್ಜೆ[2]ಯೆಸಿಸಿರ್ಪ[2] [3]ತಿರುವಾರೂರ[3]
ಭಾಸುರದ ಪೆರ್ಮೆಯ[4]ದನೇ[4]ನೆಂಬ[5]ನೆಲೆ. ಧೀರ[5] |
[6][ವ]ಲ್ಮೀಕ[6]ಪುರವೆಂಬುದಾದಿಯ ಪೆಸರ್ ತನಗೆ
ಕಲ್ಮಷದ ಯುಗಧರ್ಮವೆಯ್ದೆ ಪೊರ್ದದು ತನಗೆ |
ಬಳಿಕಂ ಜಲಪ್ರಳಯವಾದಲ್ಲಿ ತಾಂ ಮೇಲೆ
ತೊಳತೊಳ[7]ಗಿ ನೆಗೆದು[7] [8]ತೇಂಕಾಡುತಿರ್ದುದು[8] ಮೇಲೆ |
ದೇವರ್ಕಳೆಲ್ಲ[9]ರುಂ ಕಂಡಿದಾರೂರೆ[9]ನಲು
ದೇವ ಪೆಸರಾದುದಾರೂರೆಂಬುದಿದಕೆನಲು |
ಇದನೆಂತು [10]ಪೊಗಳ್ದ[10]ಪೆಂ ದೇವ ಪೆರ್ಮೆಯ ಪುರಂ
ಇದನೆಂತು [11]ಬಣ್ಣಿ[11]ಪೆಂ ಶಂಭು ನೆಲಸಿದ ಪುರಂ |
ಎಂದು ತುಂಬುರನಲ್ಲಿ ಬಿನ್ನೈಸುತುಂ ಬಡಲು
ಮುಂದೆ ಸಳಸಳಿಸುತ್ತೆ ಶಾ[12]ಲಿವನವೊ[12]ಪ್ಪಿರಲು |
ಅವಧರಿಸು ದೇವ ಕಳಮಾ[13]ದಿ[13]ಗಳ ಕೆಯ್ಗಳಿವೆ
ಶಿವಭಕ್ತನಂತೆ [14]ತೆನೆಬಾಗಿ ತೂಗಾಡುತಿವೆ[14] |

---

[1] ದೇಳ್ಗೆ (ಕ), ದಿಳ್ಕೆ (ಜ). [2] ಯಂತಿರ್ದ (ಚ), ಯೆಸಿಸಿರ್ದ (ಜ). [3] ತಿರುವಾವೂರ (ಖ), ತಿರಿವಾರೂರ (ಗ), ತಿರುವಾಲೂರ (ಜ). [4] ನೆದೇ (ಕ), ನದೇ (ಚ). [5] ಸಾವೂರ (ಚ). [6] ವಾಲ್ಮೀಕಿ (ಕ), ವಾಲ್ಮೀಕ (ಖಗಚಜ). [7] ಗುತಲ್ಲಿ (ಜ). [8] ತೇಲಾಡುತ್ತಮಿರೆ (ಖ), ತೇಂಕಾಡುತ್ತವಿ<ಮಿ>ರೆ (ಗಚ). [9] ಕಂಡಾರೂರಿದೆಂದೆ (ಜ). [10] ಬಂಣಿ (ಖಗಚ). [11] ಪೊಗಳ್ದ (ಖಗಚ). [12] ಸನವದೊ (ಗ). [13] ಳಿ (ಚ). [14] ತೆನೆಬೀಗಿ ಬಾಗುತ್ತಲಿವೆ (ಖ : ಗ : ಚ) ; ತಲೆವಾಗಿ - - - (ಜ).

ಶಿವನ ಪೂಜಾರಸಮನುಂಡ ಭಕ್ತನ ತೆಱ[1]ದೆ[1]
ಶಿವಗೋಷ್ಠಿರಸದಿಂದೆ [2]ಬ[2]ಳೆದ ಶರಣನ ತೆಱ[3]ದೆ[3]|
ತೆಸೆವಾಲಸುಂಡು [4]ಬ[4]ಳೆದವು ಗಿಳಿಗ[5]ಳೆಲ್[5] ದೇವ
ಅನುರಾಗವಾದಂತೆ ಮುಖರಾಗದಿಂ ದೇವ|
ಪಱು[6]ದು[6]ಗುವ ಕರ್ಬುಗಳ ತನಿರಸದ ಪೊನಲಿಂದೆ
ನೆಱೆಯೆ ಬೆಳೆದುವು ಪುರದ ಕಳಮಾ[7]ದಿ[7] ಸಯದಿಂದೆ|
ಕದಳೀಫಳದ ರಸದ [8]ಪರಿಕಾಲ್ಗಳಿಂ[8] ದೇವ
[9]ಮುದದಿಂದೆ ಕರ್ಬುದೋಂಟಂ [10]ಬೆಳೆದವೆ[10]ಲೆ ದೇವ|[9]
ನಿಮಗಂಜಿ ಯಿಲ್ಲಿ ಬಿಲ್ಲಂ ಬಿಸುಟನಂಗಜಂ
[11]ನಿಮಗಂಜಿ ಕುಸುಮ[12]ಶರಮಂ[12] ಬಿಸುಟನಂಗಜಂ|[11]
ಶಿವನಲ್ಲಿ ತಿರುನಾಳ್ಗೆ ಬರೆ ಕಂಡು ಶರುಕುಳಂ
ಶಿವನ ರೂಪಂ ಬಯಸಿ ಬೆಳೆದವು ನಿರಾಕುಳಂ|
ಹರನ ಜೆಡೆಯಂ ಕಂಡು [13]ಬಿಳಲ್ವರಿದವಿಂತಿಲ್ಲಿ[13]
ಹರನ ಬಾಯ್ದೆಱೆಗಂಡು ಬಿರಿದ ದಾಡಿಮವಿಲ್ಲಿ|
ಪಾರ್ವತಿಯ ಮುಡಿಗಂಡು [14]ಬ[14]ಳೆದ ಕೇಕಿಗಳಿಲ್ಲಿ
[15]ಶರ್ವನ ಸು[15]ಬಾಹುಗಂಡೊಗೆದ ಶಾಖೆಗಳಿಲ್ಲಿ|
ಉರಗನಾಭರಣಮಂ ಕಂಡಾದ ಲತೆ[16]ಯಿ[16]ಲ್ಲಿ [17]+
ಹರಹಸ್ತರಾಗದಿಂ ಬೆಳೆದಶೋಕೆಗಳಿಲ್ಲಿ|

---

[1] ದಿ (ಸ). [2] ಬೆ (ಸ). [3] ದಿ (ಕಖಚ). [4] ಬೆ (ಕಖಗಚ). [5] ಳಿವೆ (ಚಜ). [6] ದೊ (ಕಖಗಚ). [7] ಳಿ (ಚ). [8] ಪರಿವಕಾಳ್ಗಿಂ (ಕ), ಪರಿವ ಕಾಲ್ವೆಗಳಿಂ (ಗ), ಕಾಲುವೆಗಳಿವೆ (ಚ). [9] ಈ ಪಂಕ್ತಿ (ಚ) ದಲ್ಲಿಲ್ಲ. [10] ಗಳಿವೆ ಎ<ಯ>(ಖಗ). [11] ಈ ಪಂಕ್ತಿ (ಖ) ದಲ್ಲಿಲ್ಲ. [12] ಸರಳಂ (ಕ), ಸರಮಂ (ಚಜ). [13] ಬಿಳಿಲ್ ಪರಿದವಿಉಯಿಲ್ಲಿ (ಖ), ಬಳಲ್ಪದವನಲ್ಲಿ (ಗ), ಬಿಳಲುವರಿದವಿಲ್ಲಿ (ಚ), ಬಿಳಿಲ್ವರಿ - - - (ಜ). [14] ಬೆ (ಸ). [15] ಸರ್ವನರು (ಕ), ಸರ್ವನನು (ಖಗ), ಸರ್ವನಂ (ಚ). [16] ಯು (ಕಚ). [17] + ೩೧, ೩೨ನೆಯ ಪಂಕ್ತಿಗಳ ನಡುವೆ: 'ಹರನ ಚರಣಂಗಂಡು ನೆಗದ ಸರಸಿಜವಿ<ವ>ಲ್ಲಿ' (ಕಜ). (ಮುಂದೆ ೩೫ನೆಯ ಪಂಕ್ತಿಯನ್ನು ನೋಡಿ.)

[1]ಶಿವ[1]ಸೂರುದಂಡದಿಂದಾದ ಬಾಳೆಗಳಿಲ್ಲಿ
[1]ಶಿವ[1]ನ ಕರನಖದಿಂದ[2]ವಾ[2]ದ ಕೇತಕಿಯಿಲ್ಲಿ |
[3]ಹರನ ಚರಣಂಗಂ[4]ಡು [5]ನೆಗೆ[6]ದ ಸರಸಿಜವಿಲ್ಲಿ
ಹರಕಾಂತಿಯಿಂದಾದ ವಿಮಳಸರಸಿ[6]ಗಳಿ[6]ಲ್ಲಿ |[3]
[7]ದೇವಿಯರ ನಡೆಯಿಂದಲಾದ ಹಂಸೆಗಳಿಲ್ಲಿ
ದೇವಿಯರ ನೋಟವೊಂದಿದ ಚಕೋರಿಗಳಿಲ್ಲಿ |[7]
[8]+ದರಹಾಸದಿಂ ಬೆಳೆದ ಕುಸುಮ[9]ಸಂಕುಳಮಿ[9]ಲ್ಲಿ
[10]ವರಕುಚಮನ[10]ಱಿದೊಗೆದ ಚಕ್ರವಾ[11]ಕಮುಮಿ[11]ಲ್ಲಿ |
ಶಿವನ ಕಹಳೆಯ ದನಿಗೆ [12]ಬಳೆದ[12] ಕೋ[13]ಕಿಳನಿ[13]ಲ್ಲಿ
ಶಿವಗೀತದೊಳು ಬೆರಸಿ [14]ಬ[14]ಳೆದ ಮಧುಕರವಿಲ್ಲಿ |
ಇಂತು ಕಿಕ್ಕಿಱಿಗಿಱಿದ ಪಸವನೀಕ್ಷಿಸು ದೇವ
ಕಂತು [15]ಕಳಭಿಂದಿರ್ಪ ಜ[15]ನವನೀಕ್ಷಿಸು ದೇವ |
ಶಿವಭಕ್ತ[16]ರಂ[16] ಕೋಪವು[17]ಚ್ಚ[17]ಳಿಸದಂದದಿಂ
ರವಿಕಿರಣ[18]ವಿಲ್ಲಿ ಉಚ್ಚಳಿಸವಾವಂ[18]ದದಿಂ |
ಉದಯಾಸ್ತಮಯವಿಲ್ಲಿ ಕಾಣಬಾರದು ದೇವ
ಪದ[19]ಪಿಂದವ[19]ಱಿವಡಿಸ್ಕೊಂ[20]ದುಂಟಲೇ[20] ದೇವ |

---

[1] ಹರ (ಜ). [2] ಲಾ (ಕಖಗಜ). [3] ಈ ಎರಡು ಪಂಕ್ತಿಗಳು (ಕ) ದಲ್ಲಿ ಹಿಂದುಮುಂದಾಗಿವೆ; (ಜ) ದಲ್ಲಿ, 'ಹರನ - - - ಸರಸಿಜವಿಲ್ಲಿ' ಎಂಬ ಪಂಕ್ತಿ ಇಲ್ಲ. (ಹಿಂದಿನ ಪುಟದ 17 ನೆಯ ಅಡಿಟಿಪ್ಪಣಿಯನ್ನು ನೋಡಿ.) [4] ಣವ ಕಂ (ಕ). [5] ಬೆಳ (ಖಗ), ನೆರ (ಚ). [6] ಜವಿ (ಚ). [7] ಈ ಪಂಕ್ತಿಗಳು (ಗ) ದಲ್ಲಿಲ್ಲ. [8] + ಗಿರಿಜೆ (ಖಗ). [9] ಗಳಿ (ಖಗ). [10] ಗಿರಿಜೆಕುಚವ (ಖಗ). [11] ಕಗಳಿ (ಕಖಗ), ಕಂಮಿ (ಚ). [12] ಬೆಳದ (ಕಚಜ), ಉ<ಯು>ಲಿವ (ಖಗ). [13] ಗಿಲೆಯಿ (ಖ), ಕಿಳವಿ (ಗಚ). [14] ಬೆ (ಕಖಚಜ). [15] ಕಳೆಯಿಂದಿರ್ಪ ವ (ಖಗ), ಕಳೆಯಂತಿರ್ದ ಬ (ಚ). [16] ರಿಂ (ಕ), ನಂ (ಖಗ). [17] ಛ (ಖ), ತ್ಸ (ಚ). [18] - - - ಸವಾನಂ (ಕಜ), ಉಛ್ಛ<ವುಚ್ಚ>ಳಿಸವಿಲ್ಲಿಯಾವಂ (ಖಗ), ವುತ್ಸಳಿಸದಿಲ್ಲಿಯಾನಂ (ಚ). [19] ಪಿನಿಂದ (ಖ), ಪಿಂದಲ (ಗಚ). [20] ದುಂಟುಯೆಲೆ (ಕಚ), ದುವುಂಟೆಲೆ (ಗ).

ಮೊದಲ ಶಂಖಧ್ವನಿಗೆ ಕಂಜವರಳ್ವವು ದೇವ
[1]ಮೊದಲುಳಿಯಲಾ[1] ಧ್ವನಿಗೆ [2]ಸೆಯ್ದಿಲ[2]ರಳ್ವವು ದೇವ|
ಇಂತಱಿದುಕೊಳ್ವುದುದಯಾಸ್ತಮಾನವನಿಲ್ಲಿ
[3]ಇಂ[4]ತೆಂ[4]ದು [5]ಬಿನ್ನೈಸಿ[5] ತೋಱುತ್ತೆ ಬರಲಲ್ಲಿ|[3]
ನಾಗರ್ಕಳೀಗಳರ್ಚಿಸಿ ಹೋದರೆಲೆ ದೇವ
ನಾಗಲೋಕದ ಮಲ್ಲಿಕಾಕುಸುಮ[6]ವಿವೆ[6] ದೇವ|
ಗಂಧರ್ವರೀಗಳರ್ಚಿಸಿ ಹೋದರೆಲೆ ದೇವ
ಗಂಧರ್ವಲೋಕದ ಸರೋಜಂಗಳಿವೆ ದೇವ|
ದೇವರ್ಕಳೀಗಳರ್ಚಿಸಿ ಹೋದರೆಲೆ ದೇವ
ದೇವಲೋಕದ ಪಾರಿಜಾತದರಳಿವೆ ದೇವ|
ಎಂದು ತುಂಬುರನೊಸೆದು ತೋಱುತ್ತೆ ಬರಲಲ್ಲಿ
ಮುಂದೆ ತಿರುವಾರೂರ ಬಾಗಿಲ್ಗೆ [7]ಬರಲ[7]ಲ್ಲಿ|
ಇಳಿದು ದಂಡಿಗೆಯಿಂದೆ ಸೈಗೆಡೆದು ಪೊಡಮಟ್ಟು
ಪುಳಕಿಸುತೆ ಪುರಕೆ ಕಾಣ್ಕೆಯನೊಪ್ಪದಿಂ ಕೊಟ್ಟು|
ತುಂಬುರನ ಕೈವಿಡಿದು ಬಾಗಿಲೊಳಗಂ ಪುಗಲು
ಇಂಬಿನಿಂ ಹೆಚ್ಚುತ್ತೆ ಹಿಗ್ಗುತ್ತೆ [8]ರವ[8]ರಲು|
ಇತ್ತಲಭವಂ ಭಕ್ತಜನ[9]ವೆಲ್ಲರಂ[9] ಕರೆದು
ಚಿತ್ತದೊಳು ಹೆಚ್ಚುತ್ತೆ ನೀವೆಲ್ಲರುಂ ನೆರೆದು|
ಇದಿರ್ಗೊಂಬುದೆಮ್ಮ ಪುತ್ರಂ ಬರುತ್ತಿರ್ದಪಂ
ಸದಮಳಂ ನಂಬಿಯಣ್ಣಂ ಬರುತ್ತಿರ್ದಪಂ|
[10]ಎನ್ನ ಗತಿಯೆನ್ನ ಕಣ್ಣೆನ್ನ ಪುಣ್ಯಾಸ್ಪದಂ
[11]ಎನ್ನ ಮತಿಯೆನ್ನ ಸುಖ[ವೆ]ನ್ನ ನಿಧಿ[11] ಸಂಪದಂ|[10]

---

[1] ಮುದದೆರಡನೆಯು (ಖ:ಗ). [2] ಕುಮುದವ (ಖ). [3] ಈ ಪಂಕ್ತಿ (ಖ) ದಲ್ಲಿ ಪುನರುಕ್ತವಾಗಿದೆ. [4] ತರಿ (ಕ). [5] ತುಂಬುರಂ (ಜ). [6] ವೆಲೆ (ಖ), ಎದೆ (ಜ). [7] ಬಂದ (ಖಗಚ). [8] ರುತಿ (ಖಗ), ರಬ (ಜ). [9] ವೆಲ್ಲವಂ (ಕ), ರೆಲ್ಲರಂ (ಖಗ). [10] ಈ ಎರಡು ಪಂಕ್ತಿಗಳು (ಖಗಚ) ಗಳಲ್ಲಿ ಹಿಂದುಮುಂದಾಗಿವೆ. [11] - - - ಸುಖಕರವೆನ್ನ (ಕ), ಎನ್ನೊಲವು ಎನ್ನ ನಲಿವೆನ್ನ ಸುಖ (ಖಗಚ), - - - ಸುಖ ಯೆನ್ನ ನಿಧಿ (ಜ).

ಬರುತ್ತೈದನಿದಿರ್ಗೊಳ್ಳಿರೇ ಎನ್ನ ಕಂದನಂ
ಹರವರಿಯ ಘನಮನದ ಸಕಲಸುಖವೃಂದನಂ |
ಎನಲಲ್ಲಿ ಕೋಟಾನುಕೋಟಿ ಭಕ್ತರ್ ನೆರೆದು
ತನತನಗೆ ಮೆಱೆವ ತೂರ್ಯತ್ರಯಮುಮಂ ಕರೆದು |
ಹರನ [1]ಚೆಂಗಣಿ[1]ಗಿಲೆಯ [2]ತೋ[2]ಳ್ಮಾಲೆಯಂ ತರಿಸಿ
ಹರುಷದಿಂ[3]ದಂ[3] ಹೊನ್ನ ಹರಿಯಾಣದೊಳ್[4]ಗಿ[4]ರಿಸಿ |
ಕಹಳೆ ಮರ್ದಳೆ ಶಂಖ ಪಟಹನಾದಂಗಳೊಳು
ಬಹುವಿಧದ ಮಂಡನ ಸ್ತ್ರೀಸಮೂಹಂಗಳೊಳು |
ನಡೆತಂದು ನಂಬಿಯಣ್ಣನನಕ್ಕಱಿಂ ಕಂಡು
ಮೃಡನ [2]ತೋ[2]ಳ್ಮಾಲೆಯಂ ಕೊಟ್ಟು ಹರುಷಂಗೊಂಡು |
ಶಿವನ ಭಕ್ತಿಯನೊಪ್ಪದಿಂದಿದಿರ್ಗೊಳುವಂತೆ
[5]ಭವನ ನೇಹವ[6]ನೊಪ್ಪದಿಂ[6]ದಿದಿರ್ಗೊಳುವಂತೆ |[5]
ಇದಿರ್ಗೊಂಡು ಕೊಂಡು[7]ಬರುತಿರೆ[7] ನಂಬಿಯಣ್ಣನಂ
ಉದಯಿಸುವ ಬಾಲರವಿಯಂತಿರ್ದ [8]ಚೆಣ್ಣ[8]ನಂ |
[9]ಶಶಿ ಶಿವನನೋಲಗಿಪ[9] ಸೋಮವೀಥಿಯ ನಡುವೆ
[10]ಎ[10]ಸೆದು ರವಿಯೋಲೈಪ ಸೂರ್ಯವೀಥಿಯ ನಡುವೆ |
ಕಿನ್ನರರು ಬರ್ಪ ಕಿನ್ನರವೀಥಿಗಳ ನಡುವೆ
ಪನ್ನಗರು ಬರ್ಪ ಪನ್ನಗವೀಥಿಗಳ ನಡುವೆ |
ದೇವರ್ಕಳೆಯ್ತರ್ಪ ದೇವವೀಥಿಯ ನಡುವೆ
ಭಾವಕದೊ[11]ಳಿಂ[11]ತಪ್ಪ ಪಲವು ವೀಥಿಯ ನಡುವೆ |

---

[1] ಚೆಂಗಣ (ಖ), ಕೆಂಗಣಿ (ಚ). [2] ಕೊರ (ಜ). [3] (ಜ) ದಲ್ಲಿಲ್ಲ. [4] ದೊರಗಿ (ಕ), ಗೊಲ್ದಿ (ಜ). [5] ಈ ಪಂಕ್ತಿ (ಚ) ದಲ್ಲಿಲ್ಲ. [6] ನಕ್ಕರಿಂ (ಕ), ಮೋಹದಿಂ (ಖ). [7] ಬಂದರು (ಖಗ). [8] ಚೆನ್ನ (ಖಚ). [9] ಸಶಿ - - - (ಕ), ಸಸಿವೊಲಿದುವೋಲೈಪ (ಖ), ಶಶಿಯೊಲಿದುವೋಲಯಿಪ (ಗ), ಶಿವನನೋಲಗಿಪ (ಚ), ಶಶಿವೋಲಯ್ಸುತಿರ್ಪ (ಜ). [10] ವೊ (ಖಗಚ). [11] ಳ್ಳೈ (ಕಚ).

ಚಂದ್ರಿಕೆಯನಿಳಿಪ ಧವಳಾರವೃಂದಂಗ[1][ಳ]ಂ[1]
ಇಂದ್ರನೀಲದ ಮಣಿಸ್ತಂಭನಿಳಯಂಗ[1][ಳ]ಂ[1] |
ನೆಲೆನೆಲೆಗಳೊಳು ನೆಗಳ್ದ ವೃಷಭಧ್ವಜಂಗ[1][ಳ]ಂ[1]
ನಲಿನಲಿದು ಕುಣಿವ ಕೇತನದಂಡತತಿಗ[1][ಳ]ಂ[1] |
ಅಳವಡಲ್ ಕೀಲಿಸಿದ ಹೊನ್ನ ಕಳಶಂಗ[1][ಳ]ಂ[1]
ಹೊಳೆವ ಮುತ್ತಿನ ಮತ್ತವಾರಣದ ಮನೆಗ[1][ಳ]ಂ[1] |
[2]ಒಂದೊಂದು ಮನೆಯ ಪಚ್ಚೆಗಳ ನೆಲಗ[3]ಟ್ಟುಮಂ[3] [2]
ಒಂದೊಂದು ಮನೆಯ ಮಾಣಿಕದ ಮೇಲ್ಕ[4]ಟ್ಟುಮಂ[4] |
ಪ[5]ಳು[5]ಕಿನುಪ್ಪರಿಗೆಗಳನಡರ್ದ ಮಲ್ಲಿಗೆಗ[6]ಳಂ[6]
ನಳನಳಿಸಿ ಬೆಳೆದ ನವನಾ[7]ಳಿಕೇರಂಗಳಂ[7] |
ಶಿವಮತದೊಳುಚ್ಚರಿಪ ಶಿವಪುರಾಣಂಗ[6]ಳಂ[6]
ಶಿವಧರ್ಮ ಧರ್ಮೋತ್ತರ ಪ್ರಸಂಗಂಗ[6]ಳಂ[6] |
[8]ಮನೆಮನೆಗಳೊಳು ನೆಗಳ್ವ ವೇದಘೋಷಂಗ[9]ಳಂ[9] [8]
ತನತನಗೆ [10]ಪೊಗಳ್ವ[10] ಶಿವಕೀರ್ತನಾವಳಿಗ[11]ಳಂ[11] |
ತೋಱುತುಂ ಪೇಳುತುಂ ಬಾಳುತುಂ ಬರುತಿರಲು
[12]ತೋಱೆ ವಿಸ್ಮಿತಚಿತ್ತನಾಗಿ ನಡೆತರುತಿರಲು |[12]
ಪರಿತಂದನಂಗನೊಂದುಪ್ಪರಿಗೆಯೊಳು ಮಿಕ್ಕ
ಪರವೆಯರನಲ್ಲಿ ಮುಂದಿರಿಸಿ ಪಿಂದಂ ಪೊಕ್ಕ |
ನೋಡುತಿರೆ ನಂಬಿಯಣ್ಣಂ ಬರುತೆ ಪರವೆಯಂ
ನೋಡಿ ಭೋಂಕನೆ ಕಂಡನತ್ಯಂತಮುಗ್ಧೆಯಂ |
ಧಿಗಿಲನೆ ಮನಂ ಬೆದ[13]ಱೆ[13] ಪರವೆ ಕಾಣುತ್ತಲ್ಲಿ
ಮಿಗೆ ದಿಟ್ಟಿ [14]ನ[14]ಟ್ಟು ನೋಡುತ್ತಿರಲ್ಕಂ[15]ತ[15]ಲ್ಲಿ |

---

[1] ಳಿಂ (ಸ). [2] ಈ ಪಂಕ್ತಿ (ಖ) ದಲ್ಲಿಲ್ಲ. [3] ಟ್ಟನಿಂ (ಗಚ). [4] ಟ್ಟನಿಂ (ಗ). [5] ಳಿ (ಕ). [6] ಳಿಂ (ಕಖಗಚ). [7] ರಿಕೇಳಂಗಳಿಂ (ಕಖಚ). [8] ಈ ಪಂಕ್ತಿ (ಖ) ದಲ್ಲಿಲ್ಲ. [9] ಳಿಂ (ಕಗಚ). [10] ಮಾಳ್ಪ (ಖಗಚ). [11] ಳಿಂ (ಕಖಗಚ). [12] ಈ ಪಂಕ್ತಿ (ಚ) ದಲ್ಲಿಲ್ಲ. [13] ರಿ (ಗ), ಱಿ (ಜ). [14] ಯಿ (ಖ). [15] ಡ (ಖಗ).

